# ನಿವೇದನೆ ಮಾತು

'ಚಿತ್ರಕೂಟ'. ಇದೊಂದು ಸಾಮಾಜಿಕ ಕಾದಂಬರಿ. ನಮ್ಮ ಸಮಾಜದಲ್ಲಿ ಈಗಲೂ ವಿಶೇಷ ರೂಢಿಯಲ್ಲಿರುವ, ವಿಷಮ ವಿವಾಹಗಳ ಸುಖದುಃಖಗಳನ್ನು ಕಥಾರೂಪವಾಗಿ ಚಿತ್ರಿಸುವುದೇ ಇದರ ರಚನೆಯ ಮುಖ್ಯ ಉದ್ದೇಶವಾಗಿದೆ.

ನಾನು ಇದುವರೆಗೆ ಬರೆದಿರುವ ಐತಿಹಾಸಿಕ ಕಾದಂಬರಿಗಳು ಜನಪ್ರಿಯ-ವಾಗಿವೆ, ಎಂದು ತಿಳಿದಿದ್ದೇನೆ. ಸಾಮಾಜಿಕ ಕಾದಂಬರಿಗಳನ್ನು ಈಗ ಬರೆಯಲು ಪೊದಲು ಮಾಡಿದ್ದೇನೆ. ಇದೂ ನನ್ನ ಸ್ನೇಹಿತರ ಬಲವಂತ-ದಿಂದ! ನಾನು ಕಾದಂಬರಿಗಳನ್ನು ಬರೆಯುವುದರಲ್ಲಿ ನಿಸ್ಸೀಮನೆಂದು ಹೇಳಿಕೊಳ್ಳುವುದಿಲ್ಲ. ನಾನು ಉತ್ತಮ ಸಾಹಿತಿ, ಉದ್ದಾಮ ಪಂಡಿತನೆಂದು ಹೇಳಿಕೊಳ್ಳುವಂಥಾ ಕೃತಿಗಳೇನೂ ಇಲ್ಲವೆಂದು ಧಾರಾಳವಾಗಿ ಹೇಳ ಬಲ್ಲೆ! ಆದಾಗ್ಯೂ ಕಾದಂಬರಿಗಳನ್ನು ಬರೆಯುವುದರಲ್ಲಿ ನನಗೆ ವಿಶೇಷ ಅಭಿರುಚಿ ಇದೆ. ಆದರಿಂದ ಹಲವು ಕೃತಿಗಳನ್ನು ಬರೆಯುತ್ತಿದ್ದೇನೆ. ಅವುಗಳ ಸಾರಾ ಸಾರವಿಚಾರವು ವಾಚಕರಿಗೆ ಸೇರಿದ್ದು. ಕಾದಂಬರಿಗಳಲ್ಲಿ ಹಳೆಯ ಪಂಥ, ಹೊಸ ಪಂಥಗಳು ಇವೆಯೆಂದು ನಾನು ತಿಳಿದಿದ್ದೇನೆ. ನನ್ನದೆಲ್ಲಾ ಹಳೆಯ ಪಂಥ. ಆ ಹಳೆಯ ಪಂಥದಲ್ಲಿ ಪ್ರೀತಿಯುಳ್ಳವರಿಗೆ ನನ್ನ ಕೃತಿಗಳು ಸ್ವಲ್ಪ ಸೊಗಸಬಹುದು.

ಹೊಸ ಪಂಥವು ಯಾವ ರೂಪದ್ದು ? ಎಂದು ನಾನೇ ಅನೇಕ ವಿಧವಾಗಿ ಪರಿಶೀಲಿಸುತ್ತಿದ್ದೇನೆ. ಅವುಗಳಿಗೆ 'ಪ್ರಗತಿಶೀಲ ಸಾಹಿತ್ಯ' ಎಂಬ ಹೆಸರಿಟ್ಟು ಕರೆಯುವುದನ್ನೂ ನೋಡಿದ್ದೇನೆ. ಅವು ಯಾವ ಅರ್ಥದಲ್ಲಿ 'ಪ್ರಗತಿ' ಎನ್ನಿಸಿಕೊಳ್ಳುತ್ತವೆಯೋ ಹೇಳುವುದು ಕಷ್ಟ! ಒಟ್ಟಿನಲ್ಲಿ ಅವೆಲ್ಲವೂ ಆಂಗ್ಲ ಕಾದಂಬರಿಗಳ ಛಾಯೆಯಲ್ಲಿವೆ, ಎಂದು ಹೇಳಬಹುದು.

ನಮ್ಮಲ್ಲಿ ಬಹು ಮಂದಿ ಆಂಗ್ಲ ಭಾಷಾಗ್ರಂಥಗಳಲ್ಲಿ ಅಭಿರುಚಿಯುಳ್ಳ

ವರಿದ್ದಾರೆ; ಆಂಗ್ಲ ಭಾಷಾ ಪಂಡಿತರೂ ಇದ್ದಾರೆ. ಅವರ ಒರೆಗಲ್ಲಿನಲ್ಲಿ ನೋಡಿದರೆ ನಮ್ಮ ಕನ್ನಡದ ಹೊಸ ಗ್ರಂಥಗಳು, ಅದರಲ್ಲಿಯೂ ಕಾದಂಬರಿಗಳು ಎಂಥಾ ಮಟ್ಟಕ್ಕೆ ಬರುತ್ತವೆ, ಎಂಬುದನ್ನು ವಿದ್ವಾಂಸರು ನೋಡಬೇಕು.

ಹಿಂದಿನ ಕವಿಯೊಬ್ಬನು 'ಆಪರಿತೋಷಾದ್ವಿದುಷಾಂ ನ ಸಾಧುಮನ್ಯೇ ಪ್ರಯೋಗ ವಿಜ್ಞಾನಂ' ಎಂದು ಹೇಳಿದ್ದಾನೆ. ವಿದ್ವಾಂಸರಿಗೆ ಸಂತೋಷವಾಗದಿದ್ದರೆ ತನ್ನ ಪ್ರಯೋಗ ವಿಜ್ಞಾನವು ಸಾಧುವಾದುದೆಂದು ಹೇಳಲಾಗುವುದಿಲ್ಲ, ಎಂಬುದು ಅದರ ತಾತ್ಪರ್ಯ!

ಈ ಸಿದ್ಧಾಂತವನ್ನು ಎಲ್ಲ ಗ್ರಂಥಕರ್ತರೂ ಒಪ್ಪಬೇಕೆಂಬ ವಿಧಿಯೇನೂ ಇಲ್ಲ.

ಕಥೆ ಕಾದಂಬರಿಗಳು ರಸಿಕ ಮನರಂಜಕವಾಗಿರಬೇಕು, ಎಂಬುದೊಂದು ಸೂತ್ರವಿದೆ. ಇದೇನೋ ಬಹುಜನರಿಗೆ ಒಪ್ಪುವ ಮಾತು. ಆಗ, ಕಥೆ ಹೇಳುವ ಭಾಷೆಯು ಹೇಗಿದೆ, ಕಥೆಯ ರೀತಿಯು ಹೇಗೆ ಓಡುತ್ತದೆ, ರಸ ಪುಷ್ಟಿಯು ಹೇಗಿದೆ, ಒಟ್ಟನಲ್ಲಿ ಓದುಗರ ಮನಸ್ಸಿನ ಮೇಲೆ ಎಂಥಾ ಪರಿಣಾಮ ಉಂಟಾಗುತ್ತದೆ, ಎಂಬ ಅಂಶಗಳು ಮುಖ್ಯವಾದುವು. ಇವು ಮಾತ್ರ ಹಳೆಯ ಪಂಥವಾಗಲೀ ಹೊಸ ಪಂಥವಾಗಲೀ ಸಮಾನವಾಗಿವೆ. ಈ ದೃಷ್ಟಿಯಿಂದ ಸಹೃದಯರು ನೋಡುವರೆಂಬ ಭರವಸೆ ನನಗಿದೆ. ಕಾದಂಬರಿಗಳಲ್ಲಿ ರಾಜಕೀಯ ಹಿನ್ನೆಲೆಯನ್ನು ಕೊಡುವುದೊಂದು ಪಂಥವಿದೆ. ಇದಕ್ಕೂ ಎಲ್ಲೆ ಇರಬೇಕು. ಕಮ್ಯೂನಿಜಂ, ಸೋಷಿಯಲಿಜಂ, ಗಾಂಧಿ ಇಜಂ, ಅನಾರ್ಕಿಜಂ, ಇವುಗಳನ್ನೇ ಅತಿ ಮುಖ್ಯವಾಗಿಟ್ಟುಕೊಂಡು ಕಾದಂಬರಿಗಳನ್ನು ರಚಿಸುವುದು ಸರಿಯಲ್ಲವೆಂದು ನನ್ನ ಭಾವನೆ. ಇಂಥಾ 'ಇಜಂ'ಗಳ ತಾತ್ವಿಕ ದೃಷ್ಟಿಯು ಸಾಮಾನ್ಯ ವಾಚಕರಲ್ಲಿ ಉಂಟಾಗುವುದೂ ಇಲ್ಲ; ಕಾದಂಬರಿಯ ಸ್ವಾರಸ್ಯವೂ ಕೆಡುತ್ತದೆ. ಕಾದಂಬರಿಯ ರುಚಿ ಮತ್ತು ಸ್ವಾರಸ್ಯಗಳನ್ನು ತುಂಬಿದರೆ ಆ 'ಇಜಂ'ಗಳ ತತ್ವವು ನಾಶವಾಗುತ್ತದೆ. ಅಪಭ್ರಂಶವಾಗುತ್ತದೆ. ಗ್ರಂಥಕರ್ತರಿಗೆ ಆ 'ಇಜಂ'ಗಳು ಪ್ರಿಯವಾಗಿದ್ದರೆ, ಆ 'ಇಜಂ'ಗಳನ್ನೇ ತರ್ಕಬದ್ಧವಾಗಿ ಉಪನ್ಯಾಸ ರೂಪದಲ್ಲಿ ಬರೆದು ಸೇವೆ ಸಲ್ಲಿಸುವುದು ಉತ್ತಮ ಮಾರ್ಗ. ಕಥೆ ಕಾದಂಬರಿಗಳಲ್ಲಿ ಆ 'ಇಜಂ'ಗಳನ್ನು ತಂದು ವಾದ ವಿವಾ

ದಗಳನ್ನು ಬೆಳೆಸುವುದಂತೂ ಅಸಂಬದ್ಧ ಪ್ರಲಾಪವೇ ಆಗುತ್ತದೆ.

ಸಾಮಾಜಿಕ ಕಾದಂಬರಿಗಳಲ್ಲಿ ಸಮಾಜದ ಸ್ವರೂಪ, ಸಾಮಾಜಿಕ ಪದ್ಧತಿಗಳು, ಇವುಗಳು ಪ್ರತ್ಯೇಕವಾಗಿಯೂ ಪರೋಕ್ಷವಾಗಿಯೂ ತುಂಬಿ ಕೊಂಡಿವೆ.

ಇಂದಿನ ನಮ್ಮ ಸಮಾಜದಲ್ಲಿ ಪ್ರಾಚೀನ ಸಂಸ್ಕೃತಿಯ ಹಿನ್ನೆಲೆ ಮತ್ತು ಕುರುಹುಗಳೂ ಇವೆ. ನವೀನ ನಾಗರಿಕತೆಯ ಪ್ರಭಾವವೂ ಇದೆ. ಹಿಂದಿನ ದಾಗಲೀ ಇಂದಿನದಾಗಲೀ ಯಾವುದನ್ನೂ ನಿಶ್ಶೇಷವಾಗಿ ಅಳಿಸಿಬಿಡುವುದು ಸಾಧ್ಯವಿಲ್ಲ. ಕೆಲವರು ಲೇಖಕರು ಹಿಂದಿನದೆಲ್ಲವನ್ನೂ ಅಳಿಸಿಬಿಡುತ್ತೇವೆಂಬ ಹುಂಬಿನಿಂದ ಹೊರಟಿದ್ದಾರೆ. ಪ್ರಯೋಗದಲ್ಲಿರುವ ಪ್ರಾಚೀನ ಸಂಸ್ಕೃತಿ, ಮತ್ತು ನಾಗರಿಕತೆಗಳನ್ನೂ, ಹೊಸ ವಾತಾವರಣದ ಪ್ರಭಾವವನ್ನೂ ಸಮನ್ವಯ ಮಾಡಿ ಸೇವೆ ಮಾಡುವುದೇ ನನ್ನ ಧ್ಯೇಯ. ಈ ಗ್ರಂಥದಲ್ಲಿ ಆ ಪ್ರಯತ್ನ ವನ್ನೇ ಮಾಡಿದ್ದೇನೆ.

ಈ ಕಾದಂಬರಿಗೆ ' ಚಿತ್ರಕೂಟ ' ಎಂದು ಹೆಸರು ಕೊಟ್ಟಿದ್ದೇನೆ. ಅದರಲ್ಲಿ ಅಂತರಾರ್ಥವಾಗಲೀ ಅತಿಶಯವಾಗಲೀ ಏನೂ ಇಲ್ಲ.

ಈ ಕಥೆಯ ನಾಯಕಿ ಶ್ಯಾಮಲೆ. 'ಚಿತ್ರಕೂಟ' ಎಂಬ ಆಶ್ರಮದ ಜೀವನ ದಿಂದ ಶ್ಯಾಮಲೆಯ ಜೀವನವು ಪರಿವರ್ತನೆಯಾಗುತ್ತದೆ. ಆದ್ದರಿಂದ ಈ ಗ್ರಂಥಕ್ಕೆ ಈ ಹೆಸರಿಟ್ಟಿದ್ದೇನೆ. ಈ ಕಾದಂಬರಿಯಲ್ಲಿ ಶ್ಯಾಮಲೆಯು ನಾಯಕಿ. ರಂಗರಾಯ ಶ್ಯಾಮಲೆಯ ಪತಿ. ನಾರಾಯಣ ಶ್ಯಾಮಲೆಯ ಅಣ್ಣ. ತಾರಾ ನಾರಾಯಣನ ಪತ್ನಿ. ಪಾರ್ವತಮ್ಮ ಶ್ಯಾಮಲೆಯ ತಾಯಿ. ಇವಿಷ್ಟು ಮುಖ್ಯ ಪಾತ್ರಗಳು.

ಶ್ಯಾಮಲೆಯು ಗೃಹಸ್ಥ ಜೀವನವನ್ನು ನಡಸಿದ ಕ್ರಮ, ಮಗಳು ಮತ್ತು ತಾಯಿಯ ಪವಿತ್ರ ಪ್ರೇಮ, ಸಹೋದರನು ಸೋದರಿಯ ಜೀವನದಲ್ಲಿ ಹೇಗೆ ನೆರವಾಗಬೇಕೆಂಬ ನಡತೆ, ಶ್ಯಾಮಲೆಯ ಜನಸೇವೆ,–ಇವೆಲ್ಲವೂ ಈ ಕಥೆಯಲ್ಲಿ ಚಿತ್ರಿತವಾಗಿದೆ. ನಮ್ಮ ಸಾಮಾಜಿಕ ಜೀವನದಲ್ಲಿ ಬಡವರು ಭಾಗ್ಯವಂತರು, ಎಂಬ ಭೇದದಲ್ಲಿ ಎಷ್ಟು ಜೀವಿಗಳು ಸಿಕ್ಕಿ ನರಳುವುವೆಂಬ ಚಿತ್ರವೂ ವರ್ಣಿಸಲ್ಪಟ್ಟಿದೆ. ಇದೊಂದು ನೊಂದ ಜೀವದ ಕಥೆ. ಈ ಕಥೆಯಲ್ಲಿ ಸಮಾಜ

ಸಂಸ್ಕರಣದ ಮಹತ್ಸಾಧನವನ್ನೇನೂ ಪ್ರಯತ್ನಪಟ್ಟಿಲ್ಲ.

ನಮ್ಮ ಸಮಾಜದಲ್ಲಿ ಪೂರ್ವಸಂಪ್ರದಾಯ ಮತ್ತು ನವೀನ ಜೀವನದ ಪರಿಸ್ಥಿತಿಗಳ ಘರ್ಷಣದಿಂದ ಜೀವನವು ಹೇಗೆ ಸಾಗುತ್ತದೆ, ಎಂಬ ಒಂದು ಚಿತ್ರವನ್ನು ಮಾತ್ರ ವರ್ಣಿಸಿದ್ದೇನೆ. ಇಂತಹ ನೂರಾರು ಚಿತ್ರಗಳು ನಮ್ಮ ಮುಂದೆ ಇವೆ.

ಈ ಕಥೆಯಲ್ಲಿ 'ಗಾಂಧಿಯುಗ'ದ ಹಿನ್ನೆಲೆಯನ್ನು ಕೊಡಲ್ಪಟ್ಟಿದೆ. ಅದಕ್ಕೆ ನಾನು ಹೆಚ್ಚಿನ ಮಹತ್ವಕೊಟ್ಟಿಲ್ಲ. ಅದೆಲ್ಲಾ ಕಥೆಯ ಪರಿಪುಷ್ಟಿಗೋಸ್ಕರ ಹವಣಿಸಿರುವ ತೆರೆ.

ಈ ಕಥೆಯಲ್ಲಿ ಇನ್ನೂ ಕೆಲವು ವ್ಯಕ್ತಿಗಳನ್ನು ಚಿತ್ರಿಸಿದೆ. ಅವೆಲ್ಲಾ ಮುಖ್ಯ ಪಾತ್ರಗಳಲ್ಲ. ಕಥಾ ನಿರ್ವಹಣೆಗಾಗಿ ತೆಗೆದುಕೊಂಡ ಪಾತ್ರಗಳು. ವಾಚಕರು ಆ ಪಾತ್ರಗಳ ಬೆಳವಣಿಗೆಗೆ ಅಷ್ಟು ಗಮನ ಕೊಡಬಾರದು.

ಕನ್ನಡ ಕಾದಂಬರಿಗಳಲ್ಲಿ ಈಗ ಹೊಸ ಯುಗವು ಆರಂಭವಾಗಿದೆ. ಕಾದಂಬರಿಗಳ ಪ್ರವಾಹವೇ ಹರಿದು ಬರುತ್ತಿದೆ. ಸಾರಾಸಾರ ಗ್ರಹಣವು ವಾಚಕರಿಗೇ ಸೇರಿದ್ದು. ವಿಮರ್ಶಕರು ಅತ್ಯಂತ ಚಾಣಾಕ್ಷರಾಗಿ ಕಾದಂಬರಿಗಳನ್ನು ಒಡೆದು ಪರಿಮಳವನ್ನು ನೋಡಿ ಕಿತ್ತೆಸೆಯುತ್ತಿದ್ದಾರೆ. ಇಂಥಾ ಸುಸಮಯದಲ್ಲಿ ಇಷ್ಟು ವಿಸ್ತಾರವಾದ ಪೀಠಿಕೆಯನ್ನು ವಾಚಕರ ಮುಂದೆ ಮಂಡಿಸುವುದು ಅಗತ್ಯವೆಂದು ಭಾವಿಸಿ, ಈ ಪೀಠಿಕೆಯನ್ನು ಬರೆದಿದ್ದೇನೆ. ವಾಚಕರ ಪ್ರೇಮವು ನನ್ನ ಗ್ರಂಥಗಳ ಮೇಲೆ ಯಾವಾಗಲೂ ಅತಿಶಯವಾಗಿದೆ. ಈ ಗ್ರಂಥಕ್ಕೂ ಹಾಗೆಯೇ ಪುರಸ್ಕಾರವು ದೊರೆಯಲೆಂದು ಆಶಿಸುತ್ತೇನೆ.

ಇತಿ

**ವೀರಕೇಸರಿ**



ಬೆಂಗಳೂರಿನಲ್ಲಿ ಮಾವಳ್ಳಿಯಲ್ಲಿ ಒಂದು ಸಣ್ಣ ಮನೆ. ಬೆಳಗ್ಗೆ ಒಂಭತ್ತು ಗಂಟೆಯ ಸಮಯವಿರಬಹುದು. “ ಶ್ಯಾಮು—ಶ್ಯಾಮೂ ” ಎಂದು ಬಾಗಿಲು ತಟ್ಟಿದ ಸದ್ದಾಯಿತು.

ಪಾರ್ವತಮ್ಮನು ಬಂದು ಚಿಲಕ ತೆಗೆದು ಬಾಗಿಲನ್ನು ಅರ್ಧ ತೆಗೆದಳು.

ಆಗಂತುಕನು, “ ಶ್ಯಾಮಣ್ಣನವರು ಇದ್ದಾರೇನಮ್ಮಾ? ” ಎಂದು ಕೇಳಿದನು.

ಪಾರ್ವತಮ್ಮನು, “ ಇದಾರೆ ಬನ್ನಿ ! ಒಳಗೆ ಬನ್ನಿ ” ಎಂದು ಹೇಳುತ್ತಾ ಪೂರ್ತಾ ಬಾಗಿಲು ತೆರೆದು ತಲೆ ಬಗ್ಗಿಸಿಕೊಂಡು ಒಳಗೆ ಹೋದಳು.

ಅವಳ ಹಿಂದೆಯೇ ಆತನು ಒಳಹೊಕ್ಕನು.

ಹಜಾರದಲ್ಲಿ ಚಾಪೆಯ ಮೇಲೆ ಕೈ ತೋರಿಸುತ್ತಾ, “ ಕುಳಿತುಕೊಳ್ಳಿ. ದೇವರ ಪೂಜೆ ಮಾಡುತ್ತಿದ್ದಾರೆ ಈಗಲೇ ಬರುತ್ತಾರೆ. ” ಎಂದು ಪಾರ್ವತಮ್ಮನು ಹೇಳಿ ಅಡಿಗೆ ಮನೆಯೊಳಗೆ ಹೋದಳು.

ಆಗಂತುಕನು ಕೈಯ್ಯಲ್ಲಿದ್ದ ಖಾದೀ ಚೀಲವನ್ನು ಚಾಪೆಯ ಮೇಲಿಟ್ಟು ಕುಳಿತುಕೊಂಡನು.

ಶ್ಯಾಮಣ್ಣನು ಅಡಿಗೆ ಮನೆಯೊಳಗೆ ದೇವರ ಪೂಜೆ ಮಾಡುತ್ತಿದ್ದನು. ಪಾರ್ವತಮ್ಮನು ಒಳಗೆ ಹೋಗುತ್ತಲೇ ಮೆಲ್ಲನೆಯ ಧ್ವನಿಯಿಂದ “ ಯಾರದು ? —ಯಾರು ಬಂದಿದ್ದಾರೆ ? ” ಎಂದು ಕೇಳಿದನು.

ಪಾರ್ವತಮ್ಮನು “ ಗುರುತಿಲ್ಲ, ಯಾರೋ ಕಾಂಗ್ರೆಸ್ಸಿನವರು, ದೊಡ್ಡ ಖಾದಿ ಜುಬ್ಬಾ, ಗಾಂಧಿ ಟೋಪಿ ! ಹಜಾರದಲ್ಲಿ ಚಾಪೆಯ ಮೇಲೆ ಕುಳ್ಳಿರಿಸಿದ್ದೇನೆ ” ಎಂದಳು.

" ಸರಿ! ಸರಿ! ಕುಳಿತಿರಲಿ! ಪೂಜೆ ಮುಗಿಯುತ್ತಾ ಬಂತು. ಈಗಲೇ ಬರುತ್ತೇನೆಂದು ಹೇಳು!"

ಪಾರ್ವತಮ್ಮನು ಹಜಾರಕ್ಕೆ ಬಂದು ತಲೆ ಬಾಗಿಸಿಕೊಂಡು ಮೃದು ಧ್ವನಿಯಿಂದ " ಪೂಜೆ ಮುಗಿಯುತ್ತಾ ಬಂತು. ಈಗಲೇ ಬರುತ್ತಾರೆ" ಎಂದು ಹೇಳಿದಳು.

ಆಗಂತುಕನು ನಗುತ್ತಾ, " ಆಗಲಿ ನನಗೇನೂ ಅವಸರವಿಲ್ಲ. ಅವನು ನಿಧಾನವಾಗಿ ಬರಲಿ. ಊಟ, ಉಪಚಾರ ಎಲ್ಲಾ ಈವತ್ತು ನಿಮ್ಮ ಮನೆ ಯಲ್ಲೇ" ಎಂದನು.

ಪಾರ್ವತಮ್ಮನು ತಲೆ ಬಾಗಿ ಅಂಗೀಕಾರವನ್ನು ಸೂಚಿಸಿ ಒಳಗೆ ಹೋದಳು.

ಶ್ಯಾಮಣ್ಣನು ಪೂಜೆಯನ್ನು ಮುಗಿಸಿ ಹಜಾರಕ್ಕೆ ಆತುರವಾಗಿ ಬಂದು ನೋಡಿದನು. ನಗುತ್ತಾ " ನೀನೇ! ಯಾವಾಗ ಬಂದೆಯೋ? ಇದೇನು ಈ ಬಡ ಸ್ನೇಹಿತನ ಮೇಲೆ ಇಷ್ಟು ದಯೆ!" ಎನ್ನುತ್ತಾ ಆಗಂತುಕನ ಬೆನ್ನು ತಟ್ಟಿದನು.

" ಪಾತು—ಪಾತು" ಇವನು ಗಂಗಾಧರ! ನನ್ನ ಪರಮ ಮಿತ್ರ. ತೆಗೆದುಕೊಂಡು ಬಾ! ಮೊದಲು ಕಾಫೀ ಕೊಡು! ಆಮೇಲೆ ಯೋಗ ಕ್ಷೇಮ." ಎಂದನು.

ಪಾರ್ವತಮ್ಮನು ಕಂಚಿನ ಲೋಟಾಗಳಲ್ಲಿ ಕಾಫಿಯನ್ನು ತಂದಿಟ್ಟಳು ಇಬ್ಬರೂ ಕಾಫಿಯನ್ನು ಕುಡಿಯಲಾರಂಭಿಸಿದರು.

" ಲೋ! ಗಂಗಾಧರಾ, ಜೈಲಿನಿಂದ ಯಾವಾಗ ಬಂದೆ, ಪುನಃ ಯಾವಾಗ ಜೈಲಿಗೆ ಪ್ರಯಾಣ?"

" ಈ ಗಾಂಧೀ ಯುಗದಲ್ಲಿ ನಮ್ಮಂತಹವರಿಗೆ ಜೈಲಿಗೂ, ಮನೆಗೂ ವ್ಯತ್ಯಾಸವೇ ಇಲ್ಲ, ಶ್ಯಾಮು."

" ನೋಡು ಗಂಗಾಧರಾ, ಆ ಮಾತಿನಿಂದ ಪ್ರಯೋಜನವೇನು? ನೀವು ಬೇಕಾದ್ದು ಮಾಡಿಕೊಳ್ಳಿ! ನಮ್ಮ ತಂಟೆಗೆ ಬರಬೇಡಿ! ಅಷ್ಟೆ!"

ಗಂಗಾಧರನು ಗಟ್ಟಿಯಾಗಿ ನಗುತ್ತಾ, " ಶ್ಯಾಮೂ, ನೀನು ಪೋಲೀಸು

ಅಧಿಕಾರಿಯೂ ಅಲ್ಲ. ಮ್ಯಾಜಿಸ್ಟ್ರೇಟನೂ ಅಲ್ಲ. ಸ್ಕೂಲಿನಲ್ಲಿ ಪಾಠ ಹೇಳುವ ಮೇಷ್ಟ್ರು. ನಿಮ್ಮಿಂದ ನಮಗೆ ಯಾವಾಗಲೂ ತೊಂದರೆ ಇಲ್ಲವಯ್ಯಾ."

ಪಾರ್ವತಮ್ಮನು ಮತ್ತೊಂದು ಬಾರಿ ಕಾಫೀ ತಂದು, ಇಬ್ಬರು ಮುಂದೆಯೂ ಬಟ್ಟಲುಗಳನ್ನಿಟ್ಟಳು. ಇಬ್ಬರೂ ಅದನ್ನು ಮುಗಿಸಿದರು. ಆದರೂ ಮಾತು ಮುಗಿಯಲೇ ಇಲ್ಲ.

ಶ್ಯಾಮಣ್ಣನು, "ಏಳು ಗಂಗಾಧರಾ ಸ್ನಾನ ಮಾಡಿ ಮಾರ್ಕೆಟ್ ಕಡೆ ಹೋಗಿ ಬರೋಣ" ಎಂದನು. ಗಂಗಾಧರನು ಸ್ನಾನವನ್ನು ಮುಗಿಸಿದನು. ಪಾರ್ವತಮ್ಮನು ಹಜಾರದಲ್ಲಿ ಮಣೆಹಾಕಿ ಸಂಧ್ಯಾವಂದನೆಗೆ ಅಣಿಮಾಡಿದ್ದಳು. ಗಂಗಾಧರನು ಪಂಚೆಯನ್ನುಟ್ಟು ಜುಬ್ಬಾ ಧರಿಸಿದನು.

ಪಾರ್ವತಮ್ಮನು ನಸುನಗುತ್ತಾ ಗಂಡನ ಕಡೆಗೆ ನೋಡಿದಳು.

ಶ್ಯಾಮಣ್ಣನು "ಏನು! ಪಾತು! ಗಂಗಾಧರರಾಯ ಸಂಧ್ಯಾವಂದನೆ ಮಾಡಲಿಲ್ಲವೆಂದು ನೋಡುತ್ತೀಯೋ? ಅದೆಲ್ಲಾ ಅವರ ತಾಯಿಯವರಿಗೋ ತಂದೆಯವರಿಗೋ ಸಮರ್ಪಣೆ ಮಾಡಿಬಿಟ್ಟಿದ್ದಾನೆ. ನಿತ್ಯವೂ ಜೈಲಿಗೆ ಹೋಗುವವರಿಗೆ, ಜಾತಿ, ಕುಲ, ಗೋತ್ರ ಒಂದೂ ಇಲ್ಲ. ಇವರೆಲ್ಲರೂ 'ಹರಿಜನರು."

ಗಂಗಾಧರನು "ಶ್ಯಾಮು. ಏನಾದರೂ ಹೇಳಿಕೋ! ನಾನು ನಿನ್ನ ಹಾಗೆ ಡಂಬಾಚಾರಿಯಲ್ಲ. ವಿಭೂತಿಯನ್ನು ಜಪತಪಗಳ ವೇಷವನ್ನು ಹಾಕಿದರೆ ದೇವರು ಮೆಚ್ಚುವುದಿಲ್ಲ. ನಿನ್ನಂತಹ ಮೂಢಭಕ್ತಿಯುಳ್ಳವರಿಗೆ ಜಾತಿಯಿದ್ದರೆ ಸಾಕು" ಎಂದನು.

ಅಷ್ಟರಲ್ಲಿ ಶ್ಯಾಮಣ್ಣ ಅಂಗಿ ರುಮಾಲನ್ನು ಧರಿಸಿದ್ದನು.

ಇಬ್ಬರೂ ಹೊರಗೆ ಹೊರಟರು! ಸ್ವಲ್ಪ ದೂರ ನಡೆದು ಬರುತ್ತಲೇ ಚೌಕದಲ್ಲಿ ಜನಸಂದಣಿಯು ಸೇರಿತ್ತು.

ಪೇಪರು ಮಾರುವ ಹುಡುಗನು, 'ರಾಜಕೀಯ ಬಂದಿಗಳ ಬಿಡುಗಡೆ' ಎಂದು ಕೂಗುತ್ತಿದ್ದನು. ಜನಗಳು ಕುತೂಹಲದಿಂದ ಪತ್ರಿಕೆಗಳನ್ನು ಕೊಂಡುಕೊಳ್ಳುತ್ತಿದ್ದರು. ಶ್ಯಾಮಣ್ಣನೂ ಒಂದು ಆಣೆ ಕೊಟ್ಟು ಪೇಪರು ಕೈಗೆ ತೆಗೆದುಕೊಂಡನು. "ರಾಜಕೀಯ ಬಂದಿಗಳ ಬಿಡುಗಡೆ — ಸರ್ದಾರ್

ಪಟೇಲರ ಸಂಧಿ " ಎಂದು ದೊಡ್ಡ ಅಕ್ಷರಗಳ ಹೆಡ್ಡಿಂಗ್ ನೋಡಿದನು. ಶ್ಯಾಮಣ್ಣನು ಪತ್ರಿಕೆಯನ್ನು ಓದಿ ನೋಡಿ, " ಏನೋ ಗಂಗಾಧರ. ಇವತ್ತು ಜೈಲಿನಿಂದ ಬಿಡಿಸಿಕೊಂಡು ಬಂದಿಯೇನೋ ? "

ಗಂಗಾಧರನು, " ಹೌದು ! ಜೈಲಿನಿಂದ ಸೀದಾ ನಿಮ್ಮ ಮನೆಗೇ ಬಂದೆ " ಎಂದು ಜೈಲಿನ ಅನುಭವಗಳನ್ನೂ ತಮಾಷೆಗಳನ್ನೂ ಹೇಳುತ್ತಾ ನಡೆದನು. ಇಬ್ಬರೂ ಮಾರ್ಕೆಟ್ ತಲುಪಿದರು.

ಶ್ಯಾಮಣ್ಣನು ಸ್ನೇಹಿತನೊಡನೆ ಹಿಂದಿರುಗಿ ಮನೆಗೆ ಬರುವ ವೇಳೆಗೆ ಸುಮಾರು ಹನ್ನೆರಡು ಗಂಟೆಯಾಗಿತ್ತು.

ಶ್ಯಾಮಲೆಯೂ, ನಾರಾಯಣನೂ ಮನೆಗೆ ಬಂದಿದ್ದರು. ಅವರಿಬ್ಬರನ್ನೂ ಗಂಗಾಧರನು ಪ್ರೀತಿಯಿಂದ ಮಾತನಾಡಿಸಿದನು. ಶ್ಯಾಮಲೆಗೆ ಸುಮಾರು ಹದಿನೈದು ವರ್ಷ ವಯಸ್ಸು ; ನಾರಾಯಣನಿಗೆ ಹದಿನೆಂಟು ವರ್ಷ.

ಎಲ್ಲರೂ ಊಟಕ್ಕೆ ಕುಳಿತರು. ಭೋಜನ ಮಾಡುತ್ತಾ ಗಂಗಾಧರನು, " ಶ್ಯಾಮಣ್ಣ, ಮಗಳಿಗೆ ಎಲ್ಲಿ ವರನನ್ನು ನೋಡಿದ್ದಿ ? ಮದುವೆ ಯಾವಾಗ ? " ಎಂದು ಪ್ರಶ್ನೆ ಮಾಡಿದನು.

" ಮದುವೆಯ ಮಾತು ಆಲೋಚಿಸತಕ್ಕದ್ದೇ. ಆದರೆ ಈ ಕಾಲದಲ್ಲಿ ಯಾವುದನ್ನೂ ನಿಶ್ಚಯಿಸುವುದಕ್ಕಾಗುವುದಿಲ್ಲ. ಸರಿಯಾದ ' ವರ ' ಸಿಕ್ಕುವುದೇ ಕಷ್ಟ. "

" ಹಾಗೆಂದರೇನಯ್ಯಾ ? ನೀವು ಬಹಳ ಲೆಖ್ಖಾಚಾರಗಳನ್ನು ಹಾಕುತ್ತೀರಿ. ಸರ್ಕಾರೀ ಕೆಲಸದಲ್ಲಿರುವವರ ಸ್ವಭಾವವೇ ಹೀಗೆ ! ನಿಮಗೆ ಎಲ್ಲಾ ಸೆಕ್ಯೂರಿಟಿ ' ಇರಬೇಕು. ನಿನ್ನ ಅಳಿಯನಾಗುವವನು ಅಸಿಸ್ಟೆಂಟ್ ಕಮೀಷನರಾಗಬೇಕು. "

" ಗಂಗಾಧರಾ ! ನೀನು ಯಾವಾಗಲೂ ಹೀಗೇ ತಲೆಹರಟೆ ಮಾಡುತ್ತೀಯೆ. ಸರಿಯಾದವರನನ್ನು ನೋಡದೆ ಮದುವೆ ಮಾಡುತ್ತಾರೆಯೇ ? ಗೃಹಕೃತ್ಯ ನಡಸುವ ಯೋಗ್ಯತೆಯಾದರೂ ಇರಬೇಡವೇ ? ಇಲ್ಲದಿದ್ದರೆ ಮದುವೆ ಎಂದರೆ ಅರ್ಥವೇನಯ್ಯಾ ? "

" ಅದೆಲ್ಲಾ ಸರಿ ! ಹಣ ಸಂಪಾದಿಸುವುದು ಸಂಸಾರ ಮಾಡುವುದು

ಇದೆಲ್ಲಾ ಅದೃಷ್ಟದ ಮಾತುಗಳು. ನೀನೂ ನಾನೂ ಒಟ್ಟಿಗೇ 'ಪ್ಯಾಸ್' ಮಾಡಿದೆವು. ನಿನಗೆ ಇನ್ನೂರು ರೂಪಾಯಿ ಸಂಬಳ. ನನಗೆ ಏನೂ ಇಲ್ಲ. ಅದನ್ನೇ ನಾನು 'ಅದೃಷ್ಟ' ಎನ್ನುವುದು."

"ಗಂಗಾಧರಾ! ಆಕಾಶಪುರಾಣ ಮಾತನಾಡಬೇಡ! ಊಟ ಮಾಡು. ನಿನಗೇನು ಕಡಿಮೆ? ಜಮೀನಿದೆ, ಮನೆ ಇದೆ. ಒಳ್ಳೇ 'ಪ್ರ್ಯಾಕ್ಟೀಸು' ಇತ್ತು. ಏನೋ ಬಿಟ್ಟುಬಿಟ್ಟೆ. ಈಗ ಕೋರ್ಟಿಗೆ ಹೋದರೆ ಇವತ್ತೇ ಕೈತುಂಬಾ ದುಡ್ಡು ಬರುತ್ತೆ."

"ಈಗ ಹೇಳು! ನಮ್ಮ ಶ್ಯಾಮಲೆಯನ್ನು ನಿನ್ನ ಮಗನಿಗೆ ಕೊಡು ತ್ತೇನೆ ಒಪ್ಪುತ್ತೀಯೇನು?"

ಅಷ್ಟು ಹೊತ್ತಿಗೆ ಪಾರ್ವತಮ್ಮನು ಶಾಮಿಗೆ ಪರಮಾನ್ನ ತಂದು ಬಡ್ಡಿ ಸಿದಳು. ಗಂಗಾಧರನು ಪಾಯಸವನ್ನು ಚಪ್ಪರಿಸುತ್ತಾ "ಹೌದು ಕಣೋ ಶ್ಯಾಮು! ಈ ಶ್ಯಾಮಲೆಯನ್ನು ನಮ್ಮ ವಾಸೂಗೆ ಮದುವೆ ಮಾಡಿಕೊಳ್ಳಲು ನಾನು ಒಪ್ಪುತ್ತೇನೆ! ಈ ಪಾಯಸವೇ ಸಾಕ್ಷಿ" ಎಂದು ಹೇಳಿದನು. ಪಾರ್ವತಮ್ಮನು ನಕ್ಕಳು. ಶ್ಯಾಮಣ್ಣ, ಗಂಗಾಧರ ಇಬ್ಬರೂ ನಕ್ಕರು. ನಾರಾ ಯಣನು ಶ್ಯಾಮಲೆಯ ಕಡೆ ತಿರುಗಿ ನೋಡಿದನು. ಶ್ಯಾಮಲೆಯು ತಲೆ ತಗ್ಗಿಸಿದಳು.

ಊಟ ಮಾಡಿ ಹಜಾರದಲ್ಲಿ ಕುಳಿತುಕೊಂಡರು. ಶ್ಯಾಮಲೆಯು ಎಲ ಡಕೆ ತಟ್ಟೆ ತಂದಿಟ್ಟಳು. ಗಂಗಾಧರನು ಎಲೆಯಡಕೆ ಮೆಲ್ಲುತ್ತಾ ಮತ್ತೊಮ್ಮೆ ಶ್ಯಾಮಲೆಯನ್ನು ದೃಷ್ಟಿಸಿ ನೋಡಿದನು. ಈ ಹುಡುಗಿ ಎಷ್ಟು ಚೆಲುವೆ, ಎಂದು ಮನಸಿನಲ್ಲೇ ಅಂದುಕೊಂಡನು.

ಅಂದಿನ ಸಂಧ್ಯಾ ಕಾಲವೇ ಗಂಗಾಧರನು ಊರಿಗೆ ಪ್ರಯಾಣ ಮಾಡಿ ದನು. ಮಾರನೆಯ ದಿನ ಗಂಗಾಧರನು ಮೈಸೂರನ್ನು ತಲುಪಿದನು. ಆ ದಿನ ವೆಲ್ಲಾ ಊರಿನಲ್ಲಿ ಬಲು ಸಡಗರ. ಊರಲ್ಲೆಲ್ಲಾ ಕಾಂಗ್ರೆಸ್ ಮೆರವಣಿಗೆ. ಸಂಧಾ ಕಾಲ ಟೌನ್‌ಹಾಲಿನಲ್ಲಿ ಭಾಷಣಗಳು. ವಿಜಯಶಾಲಿಗಳಾದ ಕಾಂಗ್ರೆಸ್ಸಿನವರು ಮನಸ್ಸು ಬಂದಂತೆಲ್ಲಾ ಭಾಷಣ ಮಾಡಿದರು. ಗಂಗಾಧರನ ಭಾಷಣ ಬಹಳ ಪ್ರಭಾವಶಾಲಿಯಾಗಿತ್ತು. ಮಾತಿನ ಭರದಲ್ಲಿ ಗಂಗಾಧರನು 'ಮಹಾರಾಜರ

ಪ್ರಭುತ್ವವು ಮುಕ್ತಾಯವಾಗಬೇಕು' ಎಂದು ಘೋಷಿಸಿದನು. ಆ ಮಾತು ಗಳು ಕಾಂಗ್ರೆಸ್ಸಿನವರಿಗೇ ರುಚಿಸಲಿಲ್ಲ. ಯುವಕರೆಲ್ಲರೂ ಉಬ್ಬಿ ಹೋದರು. ಮಾರನೆಯ ದಿನವೇ ಗಂಗಾಧರನ ದಸ್ತಗಿರಿಯಾಗುವುದೆಂದು ಕೆಲವರು ಭಾವಿ ಸಿದ್ದರು. ಆದರೆ ಅಂತಹ ಪ್ರಮಾದವೇನೂ ಜರುಗಲಿಲ್ಲ. ಎಲ್ಲವೂ ಶಾಂತ ವಾಗಿಯೇ ಇತ್ತು.

೨

ಶ್ಯಾಮಣ್ಣನು ಸೆಂಟ್ರಲ್ ಕಾಲೇಜಿನಲ್ಲಿ ಉಪಾಧ್ಯಾಯ. ಕನ್ನಡದಲ್ಲಿ ಅಭಿರುಚಿಯುಳ್ಳ ವಿದ್ವಾಂಸ. ಕರ್ನಾಟಕ ಪರಿಷತ್ತಿನಲ್ಲಿಯೂ ಶ್ಯಾಮಣ್ಣನು ಪ್ರಧಾನ ವ್ಯಕ್ತಿ. ಮನೆಯಲ್ಲಿ ಸನಾತನ ಧರ್ಮಾಭಿಮಾನಿ. ಅವನ ಸಂಸಾರವು ಸುಖವಾಗಿಯೇ ನಡೆಯುತ್ತಿತ್ತು. ನಾರಾಯಣ, ಶ್ಯಾಮಲಾ ಇಬ್ಬರೇ ಮಕ್ಕಳು ನಾರಾಯಣನು ಕಾಲೇಜಿನಲ್ಲಿ ಓದುತ್ತಿದ್ದನು. ಶ್ಯಾಮಲೆಯು ವಾಣೀವಿಲಾಸ ಹೈಸ್ಕೂಲಿನಲ್ಲಿ ಓದುತ್ತಿದ್ದಳು. ಪಾರ್ವತಮ್ಮನು ಸ್ಕೂಲಿನಲ್ಲಿ ಓದಿದವಳಲ್ಲ; ಆದರೂ ಕನ್ನಡದಲ್ಲಿ ಒಳ್ಳೆಯ ಪರಿಶ್ರಮವಿತ್ತು, ಶ್ಯಾಮಣ್ಣನು ಮೊದಲಿನಿಂದಲೂ ಆರೋಗ್ಯವಂತನಲ್ಲ. ಆಗಾಗ ಖಾಯಿಲೆ ಬೀಳುತ್ತಿದ್ದನು. ಸರಿಯಾಗಿ ಔಷಧಿ ಪಥ್ಯಗಳನ್ನು ಮಾಡುತ್ತಿರಲಿಲ್ಲ. ತಾನಾಗಿಯೇ ಗುಣವಾಗುತ್ತದೆಂದು ನಂಬಿಕೆ. ಹಾಗೆಯೇ ಗುಣವಾಗುತ್ತಲೂ ಇತ್ತು. ಈ ಬಾರಿ ಒಂದು ತಿಂಗಳು ಖಾಯಿಲೆ ಬಿದ್ದನು. ಕಾಲೇಜಿಗೆ ರಜಾ ತೆಗೆದುಕೊಂಡನು. ಡಾಕ್ಟರು ನೋಡಿ ಔಷಧಿ ಕೊಡುತ್ತಿದ್ದರು. ಖಾಯಿಲೆಯೇನೋ ಸಾಮಾನ್ಯವಾಗಿತ್ತು. ಭಯಕ್ಕೆ ಏನೂ ಕಾರಣವಿರಲಿಲ್ಲ, ಆದರೆ ಗುಣಮುಖವಾಗಲೇ ಇಲ್ಲ, ಹಾಸಿಗೆ ಬಿಟ್ಟೇಳದಷ್ಟು ನಿಶ್ಶಕ್ತಿಯಾಯಿತು. ಮನೆಯವರಿಗೆಲ್ಲಾ ಗಾಬರಿಯಾಯಿತು. ಪಾರ್ವತಮ್ಮನು ಮನೆಯ ಕೆಲಸಗಳನ್ನು ಮಾಡುತ್ತಾ ಗಂಡನನ್ನು ಉಪಚರಿಸುತ್ತಿದ್ದಳು. ಶ್ಯಾಮಲೆ ಸ್ಕೂಲಿಗೆ ಹೋಗುವುದನ್ನು ಬಿಟ್ಟು ತಂದೆಯನ್ನು ಉಪಚರಿಸತೊಡಗಿದಳು. ನಾರಾಯಣನು ಔಷಧಿಯನ್ನು ತರುವುದು ಡಾಕ್ಟರನ್ನು ಕರೆತರುವುದು ತಂದೆಯ ಬಟ್ಟೆಗಳನ್ನು ಒಗೆದು ಒಣಗಿಸುವುದು ಇತ್ಯಾದಿ ಕೆಲಸಗಳನ್ನು ಮಾಡುತ್ತಿದ್ದನು. ಶ್ಯಾಮಣ್ಣನ ಖಾಯಿಲೆಯು ಕ್ಷಯ ರೋಗವೆಂದು ಡಾಕ್ಟರು ಖಚಿತ ಮಾಡಿಕೊಂಡರು. ಮೈಸೂರಿಗೆ ಹೋಗಿ ಕ್ಷಯ ರೋಗದ ಆಸ್ಪತ್ರೆಗೆ ಸೇರಬೇಕೆಂದು ಶ್ಯಾಮಣ್ಣನೊಡನೆ ಹೇಳಿದರು. ಶ್ಯಾಮಣ್ಣನ ಹೆಂಡತಿ, ಮಕ್ಕಳು ಮೈಸೂ

ರಿಗೆ ಹೋಗಿ ಆಸ್ಪತ್ರೆಗೆ ಸೇರಬೇಕೆಂದು ಶ್ಯಾಮಣ್ಣನನ್ನು ಬಲಾತ್ಕರಿಸಿದರು. ಶ್ಯಾಮಣ್ಣನಿಗೆ ಪೂರ್ತಾ ಸಂಬಳ ಬರುವ ರಜಾ ಸಿಕ್ಕಿತ್ತು. ಮೈಸೂರಿಗೆ ಹೋಗಿ ಇರಲು ಇವರಿಗೆ ತೊಂದರೆಯೇನೂ ಇರಲಿಲ್ಲ. ಆದರೆ ಅವನೇಕೋ ಬೆಂಗಳೂರು ಬಿಡಲು ಒಪ್ಪಲಿಲ್ಲ.

ಹೀಗೆಯೇ ಒಂದು ತಿಂಗಳು ಕಳೆಯಿತು. ವ್ಯಾಧಿಯು ಬಹಳ ಹೆಚ್ಚಾಯಿತು. ಪಾರ್ವತಮ್ಮನು ಸರ್ವದಾ ಕಣ್ಣೀರಿಡುತ್ತಿದ್ದಳು. ಮಕ್ಕಳಿಗೆ ತೋರ್ಪಡಿಸಿಕೊಳ್ಳಬಾರದೆಂದು ಸಮಾಧಾನ ಮಾಡಿಕೊಳ್ಳುತ್ತಿದ್ದಳು. ಮಕ್ಕಳಿಬ್ಬರೂ ಹೆಚ್ಚು ಗಾಬರಿಯಿಂದಲೇ ಇದ್ದರು.

ಶ್ಯಾಮಲೆಯೂ ನಾರಾಯಣನೂ ರಾತ್ರಿ ಹನ್ನೊಂದು ಗಂಟೆಯ ವರೆಗೆ ತಂದೆಯ ಹತ್ತಿರ ಕುಳಿತಿದ್ದು, ಎದ್ದುಹೋಗಿ ಮಲಗಿಕೊಂಡರು. ಶ್ಯಾಮಣ್ಣನು ತಾನು ಬದುಕುವುದು ದುರ್ಲಭವೆಂದು ತಿಳಿದುಕೊಂಡಿದ್ದರೂ ಬಂದು ನೋಡುವ ಸ್ನೇಹಿತರೊಡನೆಲ್ಲಾ ನಗುತ್ತಲೇ ಮಾತನಾಡಿಸುತ್ತಿದ್ದನು. ವ್ಯಾಧಿಯನ್ನು ಗೆದ್ದು ಎದ್ದು ಬರುವವನಂತೆಯೇ ಮಾತನಾಡಿಸುತ್ತಿದ್ದನು. ಹೊರಗೆ ಹೀಗಿದ್ದರೂ ಮನಸ್ಸಿನಲ್ಲಿ ತಾನು ಬದುಕುವುದಿಲ್ಲವೆಂದು ನಿರ್ಧಾರ ಮಾಡಿಕೊಂಡಿದ್ದನು. ಆ ದಿನ ಅರ್ಧ ರಾತ್ರಿಯ ಸಮಯದಲ್ಲಿ ಪಾರ್ವತಮ್ಮನು ಶ್ಯಾಮಣ್ಣನ ಹಾಸಿಗೆಯ ಸಮೀಪದಲ್ಲಿಯೇ ಕುಳಿತಿದ್ದಳು. ಶ್ಯಾಮಣ್ಣನು, " ಪಾತು ! ಧೈರ್ಯದಿಂದ ಇರಬೇಕು. ಜನನ-ಮರಣಗಳು ಭಗವಂತನ ಅಧೀನ. ನಾನು ಬದುಕುವುದಿಲ್ಲ. ಇನ್ನೆರಡು ವರ್ಷಗಳು ಸ್ವಲ್ಪ ಕಷ್ಟ ! ಆಮೇಲೆ ನಾಣಿಯು ಮುಂದಕ್ಕೆ ಬರುತ್ತಾನೆ, ನಿಮ್ಮೆಲ್ಲರನ್ನೂ ಕಾಪಾಡುತ್ತಾನೆ " ಎಂದು ಹೇಳಿದನು. ಅವನ ದನಿಯಲ್ಲಿ ಭಯ-ದುಃಖಗಳ ಚಿಹ್ನೆಯೇ ಇರಲಿಲ್ಲ ; ಪಾರ್ವತಮ್ಮನ ಕಣ್ಣುಗಳಲ್ಲಿ ಧಳಧಳನೆ ನೀರು ಸುರಿಯಿತು. ಅವಳು ಶ್ಯಾಮಣ್ಣನ ಎರಡು ಕೈಗಳನ್ನು ಹಿಡಿದುಕೊಂಡು ಅತ್ತಳು. ಎಷ್ಟು ಹೊತ್ತು ಅಳುತ್ತಿದ್ದಳೋ ಅವಳರಿಯಳು. ಅಳುತ್ತಲೇ ಇದ್ದಳು. ಬೆಳಕು ಹರಿಯಿತು.

ಬೆಳಗ್ಗೆ ಆರು ಗಂಟೆಗೆ ಡಾಕ್ಟರು ನಾರಾಯಣರಾಯರು ಬಂದು ಶ್ಯಾಮಣ್ಣನನ್ನು ನೋಡಿದರು. ಹೃದಯವನ್ನು ಮುಟ್ಟಿ ನೋಡಿದರು. ಕೈಮುಟ್ಟಿ ಹಿಡಿದು ನಾಡಿಯನ್ನು ನೋಡಿದರು. ಗಾಬರಿಯಿಂದ " ಪಾರ್ವತಮ್ಮನವರೇ !

ನಾರಾಯಣನನ್ನು ಕರೆಯಿರಿ ! ” ಎಂದು ಹೇಳಿದರು. ನಾರಾಯಣನು ಗಾಬರಿಯಿಂದ ಬಂದು ನಿಂತನು. ಡಾಕ್ಟರು ಒಂದು ಚೀಟಿಯನ್ನು ಬರೆದುಕೊಟ್ಟು “ ಈ ಔಷಧಿಯನ್ನು ಈಗಲೇ ತೆಗೆದುಕೊಂಡು ಬಾ! ಈಗಲೇ ಇಂಜಕ್ಷನ್ ಕೊಡಬೇಕು ” ಎಂದರು.

ನಾಣಿಯು ಹೊರಡಲು ಅನುವಾದನು. ಶ್ಯಾಮಣ್ಣನು ಡಾಕ್ಟರನ್ನು ನೋಡಿ ಕೈಮುಗಿದು, “ ಡಾಕ್ಟರೇ ! ನನಗಾಗಿ ನೀವು ಬಹಳ ಶ್ರಮಪಟ್ಟಿದ್ದೀರಿ. ಅದಕ್ಕಾಗಿ ವಂದನೆಗಳು. ನನಗೆ ಇನ್ನು ಇಂಜಕ್ಷನ್ ಬೇಕಾಗಿಲ್ಲ. ” ಎಂದ ಎರಡು ಕೈಗಳನ್ನೂ ಜೋಡಿಸಿದನು. ಪಾರ್ವತಿ, ಶ್ಯಾಮಲಾ, ನಾರಾಯಣನನ್ನು ಕಡೆಗಣ್ಣಿನಲ್ಲಿ ತಿರುಗಿ ನೋಡಿ, ಕಣ್ಣು ಮುಚ್ಚಿದನು.

ಎಲ್ಲರಿಗೂ ಸಿಡಿಲು ಬಡಿದಂತಾಯಿತು. ಪಾರ್ವತಮ್ಮನು ಗಟ್ಟಿಯಾಗಿ ಅಳತೊಡಗಿದಳು. ಡಾಕ್ಟರು, “ ತಾಯಿ ! ಅಳಬೇಡಿ. ನನಗೆ ಐದು ನಿಮಿಷ ಅವಕಾಶ ಕೊಡಿ. ನೀವು ಗಲಾಟೆ ಮಾಡಕೂಡದು ” ಎಂದು ಹೇಳಿ ತನ್ನ ಚೀಲದಿಂದ ಒಂದು ಡಬ್ಬಿಯನ್ನು ತೆಗೆದು ಶ್ಯಾಮಣ್ಣನ ಕೈಗೆ ಒಂದು ಇಂಜಕ್ಷನ್ ಕೊಟ್ಟರು. ಎಲ್ಲರೂ ಸ್ತಬ್ಧರಾಗಿದ್ದರು. ಐದು ನಿಮಿಷಗಳನಂತರ ಡಾಕ್ಟರು ಎದೆಯನ್ನು ಮುಟ್ಟಿ ನೋಡಿದರು. ನಾಡಿಯನ್ನು ನೋಡಿದರು. ತಮ್ಮ ಎರಡು ಕೈಗಳನ್ನೂ ಮೇಲಕ್ಕೆತ್ತಿ ಅಲ್ಲಾಡಿಸುತ್ತಾ ತಲೆ ಬಗ್ಗಿಸಿಕೊಂಡು “ ಮುಗಿದು ಹೋಯಿತು ” ಎಂದು ಹೇಳುತ್ತಾ ಹೊರಟು ಹೋದರು.

ಅಕ್ಕಪಕ್ಕದ ಸ್ನೇಹಿತರು ಬಂದು ಸಹಾನುಭೂತಿಯನ್ನು ತೋರಿದರು.

ಪುರೋಹಿತ ರಾಮಾಶಾಸ್ತ್ರಿಗಳು ಬಂದರು. ಜೀವನ ಸಮಸ್ಯೆಯ ವೇದಾಂತವನ್ನಾಡುತ್ತಾ ಮುಂದಿನ ಕಾರ್ಯಕ್ಕೆ ಅಣಿಮಾಡಿದರು. ತಿಥಿಮತಿಗಳೆಲ್ಲಾ ಯಥೋಚಿತವಾಗಿ ಪೂರೈಸಿದುವು. ಒಬ್ಬಿಬ್ಬರು ದೂರದ ಬಂಧುಗಳಿದ್ದರು. ಅವರೂ ಬಂದು, ನೆಪಮಾತ್ರಕ್ಕೆ ವಿಚಾರಿಸಿಕೊಂಡು ಹೋದರು.

ಮುಂದಿನ ಸಂಸಾರದ ಹೊರೆಯೆಲ್ಲಾ ಪಾರ್ವತಮ್ಮನ ಮೇಲೆ ಬಿತ್ತು. ತಿಂಗಳು ತಿಂಗಳಿಗೂ ಸಂಬಳ ಬರುತ್ತಿದ್ದುದು ನಿಂತುಹೋಯಿತು. ಪಾರ್ವತಮ್ಮನಿಗೆ ಪ್ರತಿ ಘಳಿಗೆಯೂ ಮುಂದೇನು ಮಾಡಬೇಕೆಂದು ಚಿಂತೆ !

ನಾರಾಯಣನು ಧೈರ್ಯಶಾಲಿ. ತಾಯಿಗೆ ಧೈರ್ಯ ಹೇಳುತ್ತಿದ್ದನು. ತಾನು ಕೆಲಸಕ್ಕೆ ಸೇರಿದರೆ ಐವತ್ತು—ಅರುವತ್ತು ರೂಪಾಯಿಗಳ ಸಂಬಳ ಬರುವುದೆಂದೂ, ಹೇಗೋ ಸಂಸಾರವು ನಡೆಯುವುದೆಂದೂ ಹೇಳುತ್ತಿದ್ದನು.

ಆ ಕುಟುಂಬದ ಮೇಲೆ ಅಂಧಕಾರವು ಕವಿಯಿತು.

೨

ನಾರಾಯಣನ ವ್ಯಾಸಂಗವು ಸಾಗುತ್ತಲೇ ಇತ್ತು. ಶ್ಯಾಮಲೆಯು ಸ್ಕೂಲ್ ಫೈನಲ್ ಪರೀಕ್ಷೆಗೆ ಕಟ್ಟಿದ್ದಳು. ಪಾರ್ವತಮ್ಮನ ಕೈಲಿದ್ದ ಹಣವೆಲ್ಲವೂ ಖರ್ಚಾಯಿತು. ಪ್ರತಿದಿನವೂ ಸಂಸಾರವನ್ನು ನಡಸುವುದು ಕಷ್ಟವಾಗಿತ್ತು. ಪಾರ್ವತಮ್ಮನ ಮೈಮೇಲೆ ಕೆಲವು ನಗಗಳಿದ್ದುವು ಪ್ರತಿ ತಿಂಗಳೂ ಒಂದೊಂದು ಮಾರಿ ಅವರು ಜೀವನ ಪಥವನ್ನು ಸಾಗಿಸುತ್ತಿದ್ದರು.

ಸುಮಾರು ಆರು ತಿಂಗಳು ಕಳೆದಿರಬಹುದು. ಶ್ಯಾಮಣ್ಣನ ಇನ್ ಷೂರೆನ್ಸ್ ಹಣ ಎಂಟು ಸಾವಿರ ರೂಪಾಯಿಗಳು ಕೈಗೆ ಬಂದುವು. ಶ್ಯಾಮಲೆಯು ಪರೀಕ್ಷೆಯಲ್ಲಿ ಪ್ಯಾಸ್ ಆಗಿದ್ದಳು. ನಾರಾಯಣನು ಇನ್ನೂ ಒಂದು ವರ್ಷ ವ್ಯಾಸಂಗ ಮಾಡಬೇಕು. ಅವನಿಗೆ ಕಾಲೇಜಿನಲ್ಲಿ ಫ್ರೀಷಿಪ್ ಸಿಕ್ಕಿತ್ತು.

ಗಂಗಾಧರನು ಒಂದು ದಿನ ಬಂದು ಈ ಕುಟುಂಬದವರ ದುಃಖವನ್ನು ವಿಚಾರಿಸಿದನು. ನಾರಾಯಣನಿಗೆ ಧೈರ್ಯ ಹೇಳಿದನು. ಪರೀಕ್ಷೆಯಲ್ಲಿ ಪ್ಯಾಸ್ ಆಗುತ್ತಲೇ, ಶಿಫಾರಸು ಮಾಡಿ ಯಾವುದಾದರೂ ಸರಿಯಾದ ಕೆಲಸ ಕೊಡಿಸುವುದಾಗಿ ಹೇಳಿದನು. ಇನ್‌ಷೂರೆನ್ಸ್ ಹಣ ಕೋ-ಆಪರೇಟಿವ್ ಬ್ಯಾಂಕಿನಲ್ಲಿ ಇಟ್ಟಿದ್ದಾರೆಂದು ಅವನಿಗೆ ತಿಳಿದಿತ್ತು. ಹಾಗೆ ಹಣವನ್ನು ಬ್ಯಾಂಕಿನಲ್ಲಿಟ್ಟಿರುವುದು ಪ್ರಯೋಜನವಿಲ್ಲವೆಂದೂ, ಒಂದು ಮನೆಯನ್ನು ಕೊಂಡುಕೊಳ್ಳುವುದು ಒಳ್ಳೆಯದೆಂದೂ ಸಲಹೆ ಹೇಳಿದನು.

ಪಾರ್ವತಮ್ಮನು ಶ್ಯಾಮಲೆಯ ಮದುವೆಯ ಮಾತೇನಾದರೂ ಬರುತ್ತದೇನೋ ಎಂದು ಚಾತಕ ಪಕ್ಷಿಯಂತೆ ನಿರೀಕ್ಷಿಸುತ್ತಿದ್ದಳು. ಆದರೆ ಗಂಗಾಧರನು ಆ ಮಾತನ್ನೇ ಎತ್ತಲಿಲ್ಲ. ಪಾರ್ವತಮ್ಮನಿಗೆ ಆ ಮಾತನೆತ್ತುವ ಧೈರ್ಯವು ಬರಲಿಲ್ಲ.

ಪುರೋಹಿತ ರಾಮಾಶಾಸ್ತ್ರಿಗಳು ಶಾಮಣ್ಣನ ಮನೆಗೆ ಮಂತ್ರಿ. ಆತನ

ಸಲಹೆಯಿಲ್ಲದೇ ಪಾರ್ವತಮ್ಮನವರು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಮಲ್ಲೇಶ್ವರದ ಈಜುವ ಕೊಳದ ಬಳಿಯಲ್ಲಿ ಒಂದು ಮನೆಯನ್ನು ಕೊಂಡು ಕೊಂಡು ಆ ಮನೆಗೆ ವಾಸಕ್ಕೆ ಹೋದರು. ಪ್ರತಿದಿನದ ಕಾಲಕ್ಷೇಪವೇನೋ ಕಠಿನವಾಗಿಯೇ ಇತ್ತು. ಕೈಲಿರುವ ಕೊಂಚ ಹಣ ಮುರಿಸಿ ಕಾಲಕ್ಷೇಪ ಮಾಡಬೇಕು.

ಜೂನ್ ತಿಂಗಳು ಬಂತು. ಸ್ಕೂಲು ಕಾಲೇಜುಗಳ ಬಾಗಿಲು ತೆಗೆಯುತ್ತದೆ. ನಾರಾಯಣನು ಶ್ಯಾಮಲೆಯನ್ನು ಕಾಲೇಜಿಗೆ ಸೇರಿಸಬೇಕೆಂದು ತಾಯಿಯೊಡನೆ ಹೇಳಿದನು. ಪಾರ್ವತಮ್ಮನು ಒಪ್ಪಲಿಲ್ಲ. ತಾಯಿ ಮಕ್ಕಳಿಗೆ ಮಾತು ಕಥೆಗೆ ಆರಂಭವಾಯಿತು.

“ ಏನಮ್ಮಾ ಶ್ಯಾಮಲೆಯ ಜೊತೆಗಾತಿಯರೆಲ್ಲಾ ಕಾಲೇಜಿಗೆ ಸೇರುತ್ತಿದ್ದಾರೆ. ನಮ್ಮ ಶ್ಯಾಮಲೆಯನ್ನು ಸೇರಿಸಲು ನೀನೇಕೆ ಒಪ್ಪುವುದಿಲ್ಲ ? ”

“ ನಾಣಿ ! ನಿನಗೆ ಪ್ರಪಂಚ ಗೊತ್ತಿಲ್ಲ. ಹುಡುಗಿಯರು ಕಾಲೇಜಿನಲ್ಲಿ ಓದಿ ಯಾವ ದಿವಾನಗಿರಿಯನ್ನು ಮಾಡಬೇಕು ! ”

“ ಕಾಲೇಜಿನಲ್ಲಿ ಓದಿದರೆ ತಪ್ಪೇನಿದೆ ? ”

“ ಅದನ್ನೆಲ್ಲಾ ನಾನು ಹೇಳುವುದಕ್ಕಾಗುವುದಿಲ್ಲ. ಶ್ಯಾಮಲೆಗೆ ಇನ್ನು ಸ್ಕೂಲು ಬೇಡ ! ”

“ ಅಮ್ಮ , ಈಗಿನ ಕಾಲ ನಿನಗೆ ಗೊತ್ತಿಲ್ಲ. ಕಾಲೇಜಿನಲ್ಲಿ ಓದಿದರೆ ಆಕ್ಷೇಪಣೆಯೇನೂ ಇಲ್ಲ, ಅಪ್ಪ ಇದ್ದಿದ್ದರೆ ಶ್ಯಾಮಲೆಯನ್ನು ಕಾಲೇಜಿನಲ್ಲಿ ಓದಿಸುತ್ತಿದ್ದರು. ”

ನಾರಾಯಣನ ಧ್ವನಿಯು ಗದ್ಗದಿತವಾಗಿತ್ತು. ಪಾರ್ವತಮ್ಮನ ಕಣ್ಣುಗಳು ಕಂಬನಿದುಂಬಿದುವು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

“ ನಾಣಿ, ಶ್ಯಾಮಲೆಗೆ ಬೇಗ ಮದುವೆ ಮಾಡಬೇಕು. ಕಾಲೇಜಿನಲ್ಲಿ ಓದುವ ಹುಡುಗಿಯೆಂದರೆ ಕುಲಸ್ಥರ ಮನೆಗಳಲ್ಲಿ ಪೂರ್ವಿಕರು ಒಪ್ಪುವುದಿಲ್ಲ. ಕಾಲೇಜು ಹುಡುಗಿಯರಿಗೆ ಮದುವೆಯಾಗುವುದೇ ಒಂದು ಸಮಸ್ಯೆ. ”

“ ಅದೆಲ್ಲಾ ಸರಿಯಮ್ಮ ! ಈಗ ಮದುವೆಗೆ ನಿಶ್ಚಯವಾಗಿದೆಯೇ ? ಮದುವೆ ಮಾಡುತ್ತೇವೆಂದು ಹೇಳುತ್ತಾ ಓದುವುದನ್ನು ತ್ಯಜಿಸಲಾದೀತೆ ?

ಈಗ ಓದುತ್ತಿರಲಿ. ಮದುವೆಯು ಗೊತ್ತಾದರೆ. ಗಂಡನ ಮನೆಯವರು ಒಪ್ಪದಿದ್ದರೆ ಕಾಲೇಜು ಬಿಡಿಸಿಬಿಡೋಣ ”

ಪಾರ್ವತಮ್ಮನು ಏನೂ ಉತ್ತರ ಕೊಡಲಿಲ್ಲ.

ಶ್ಯಾಮಲೆಯ ವಿದ್ಯಾಭ್ಯಾಸವು ಮುಂದುವರಿಯಿತು. ನಾರಾಯಣನೂ ಬಹಳ ಶ್ರಮಪಟ್ಟು ಓದುತ್ತಿದ್ದನು. ಪಾರ್ವತಮ್ಮನಿಗೆ ದಿನ ದಿನಕ್ಕೆ ಶ್ಯಾಮಲೆಯ ಮದುವೆಯ ಚಿಂತೆಯು ಬಲಿಯತೊಡಗಿತು. ರಾಮಶಾಸ್ತ್ರಿಗಳೊಡನೆ ಒಂದೆರಡು ಬಾರಿ ಪ್ರಸ್ತಾಪ ಮಾಡಿದಳು. ರಾಮಶಾಸ್ತ್ರಿಗಳು ನಾಲ್ಕಾರು ಕಡೆ ವಿಚಾರಿಸತೊಡಗಿದರು. ಗಂಡಿನ ಮನೆಯವರೊಡನೆ ಪ್ರಸ್ತಾಪ ಮಾಡಿದರು. ಒಬ್ಬಿಬ್ಬರು ಬಂದು ಹೆಣ್ಣು ನೋಡುವ ಶಾಸ್ತ್ರವೂ ಆಯಿತು. ಯಾವುದೂ ಸರಿಬೀಳಲಿಲ್ಲ ಗಂಡು ನೋಡುವುದು–ಗಂಡಿನ ಮನೆಗೆ ಕರೆದೊಯ್ದು ತೋರಿಸುವುದು—ಇದೆಲ್ಲಾ ಶ್ಯಾಮಲೆಗೆ ಬೇಸರವಾಯಿತು. ಇದೆಲ್ಲಾ ಏಕೆ, ನನಗೆ ಮದುವೆಯೇ ಬೇಡ, ಎನ್ನಿಸಿತು. ಹಾಗೆಯೇ ತಾಯಿಯೊಡನೆ ಒಂದೆರಡು ಬಾರಿ ಹೇಳಿದಳು. ತಾಯಿಗೆ ಅದರ ನಿಜವಾದ ಅರ್ಥವು ತಿಳಿಯಲಿಲ್ಲ ಹೀಗೆಯೇ ಏಳೆಂಟು ತಿಂಗಳು ಕಳೆಯಿತು.

ನಾರಾಯಣನ ಪರೀಕ್ಷೆಯ ಕಾಲ. ಪರೀಕ್ಷೆಯಲ್ಲಿ ಏನಾಗುತ್ತೋ ಎಂದು ಪಾರ್ವತಮ್ಮನಿಗೆ ಶಂಕೆ. ನಾರಾಯಣನು ಮಾತ್ರ ಧೈರ್ಯವಾಗಿದ್ದನು. ಪರೀಕ್ಷೆಯ ಫಲಿತಾಂಶಗಳು ಹೊರಬಿದ್ದುವು.

ನಾಣಿಗೆ ಫಸ್ಟ್‌ಕ್ಲಾಸಿನಲ್ಲಿ ಪ್ಯಾಸಾಗಿತ್ತು. ಅಂದು ಪಾರ್ವತಮ್ಮನ ಸಂತೋಷಕ್ಕೆ ಪಾರವೇ ಇಲ್ಲ. ಅವಳ ದುಃಖಗಳೆಲ್ಲಾ ಮರೆತುಹೋದಂತ್ತಾಯಿತು.

ಮುಂದೇನು ಮಾಡಬೇಕು ? ಎಂಬ ಸಮಸ್ಯೆಯು ಬಂದಿತು. ನಾರಾಯಣನ ಸ್ನೇಹಿತರೆಲ್ಲರೂ ಎಂ.ಎಸ್‌ಸಿ. ಓದಬೇಕೆಂದು ಪ್ರೋತ್ಸಾಹಿಸಿದರು. ಕಾಲೇಜಿನ ಪ್ರೊಫೆಸರರೂ ಅದೇ ಅಭಿಪ್ರಾಯಪಟ್ಟರು. ನಾರಾಯಣನ ಮನಸ್ಸು ಮಾತ್ರ ಡೋಲಾಯಮಾನವಾಗಿತ್ತು. ತಾಯಿಯ ಕೈಯಲ್ಲಿ ಒಂದು ಕಾಸೂ ಉಳಿದಿರಲಿಲ್ಲ. ನಗಗಳೆಲ್ಲಾ ಮಾರಿಯಾಗಿತ್ತು, ತಾಯಿಯೊಡನೆ ಪ್ರಸ್ತಾಪ ಮಾಡಿದನು. ಪಾರ್ವತಮ್ಮನು ಮುಂದಕ್ಕೆ ಓದಲೇಬೇಕೆಂದು ನಿರ್ಧಾರವಾಗಿ ಹೇಳಿದಳು.

ನಾರಾಯಣನು " ಅಮ್ಮಾ ಹಣವೆಲ್ಲಿದೆ ? ಮನೆ ಖರ್ಚಿಗೆ ಹಣ ಬೇಕು. ಇನ್ನೂ ಖರ್ಚುಗಳಿವೆ. ಎರಡು ಸಾವಿರ ಬೇಕಾಗುತ್ತೆ. "

" ಹೌದು ಮಗು ! ಮನೆಯ ಮೇಲೆ ಸಾಲ ಮಾಡೋಣ. "

" ಶ್ಯಾಮಲೆಗೆ ಮದುವೆ ಮಾಡಬೇಕೆನ್ನುತ್ತೀ—ಅದು ಬೇರೇ ಖರ್ಚು!"

" ಶ್ಯಾಮಲೆಗೆ ಇನ್ನೊಂದು ವರ್ಷ ಮದುವೆ ಬೇಡ. ನೀನು ಎಂ.ಎಸ್ಸಿ. ಪಾಸ್ ಮಾಡಿಬಿಟ್ಟರೆ ನಮ್ಮ ಆತಂಕಗಳೆಲ್ಲಾ ಪರಿಹಾರವಾಗಿ ಹೋಗುತ್ತೆ. ನಿಮ್ಮ ತಂದೆಯವರು ಸಂಪಾದಿಸಿದ ಹಣವೇ ಅಲ್ಲವೇ ಮನೆ ಮೇಲಿರುವ ಹಣ ! "

ಅಲ್ಲಿಗೆ ಆ ಮಾತು ಮುಗಿಯಿತು. ತಾಯಿಯ ನಿರ್ಧಾರವನ್ನು ಕಂಡು ನಾರಾಯಣನಿಗೆ ಆಶ್ಚರ್ಯವಾಯಿತು. ಶ್ಯಾಮಲೆಯ ಮದುವೆ ಇನ್ನು ಒಂದು ವರ್ಷ ತಡವಾಗಲಿ, ಎಂದು ಹೇಳಿದ್ದಂತೂ ನಾರಾಯಣನಿಗೆ ಬೋಧೆಯಾಗಲೇ ಇಲ್ಲ.

೪

ನಾರಾಯಣನು ತಮಗೆ ಬೇಕಾದವರಿದ್ದಾರೆ ಎಂದು ಆಲೋಚಿಸತೊಡಗಿದನು. ಗಂಗಾಧರನ ನೆನಪು ಬಂದಿತು. ತಾಯಿಯ ಅನುಮತಿ ಪಡೆದು ಮೈಸೂರಿಗೆ ಪ್ರಯಾಣ ಮಾಡಿದನು. ಮೈಸೂರಿನಲ್ಲಿ ಲಕ್ಷ್ಮೀಪುರದಲ್ಲಿ ಗಂಗಾಧರನ ಮನೆ. ರೈಲು ಇಳಿದು ನಡೆದುಕೊಂಡೇ ಲಕ್ಷ್ಮೀಪುರಕ್ಕೆ ಹೋದನು. ಗಂಗಾಧರನ ಮನೆಯನ್ನು ಹುಡುಕುವುದು ನಾರಾಯಣನಿಗೆ ಕಷ್ಟವಾಗಲಿಲ್ಲ. ಆ ಮನೆಯ ವರಾಂಡದಲ್ಲಿ ಎರಡು ಬೆಂಚುಗಳೂ, ಎರಡು ಬೆತ್ತದ ಕುರ್ಚಿಗಳೂ ಇದ್ದುವು. ನಾರಾಯಣನು ಬೆಂಚಿನ ಮೇಲೆ ಹೋಗಿ ಕುಳಿತನು. ಮನೆಯೊಳಗಿನಿಂದ ಒಬ್ಬಿಬ್ಬರು ಹುಡುಗರು ಹೊರಗೆ ಬಂದು ಹೋದರು. ಯಾರೂ ನಾರಾಯಣನನ್ನು ವಿಚಾರಿಸಲಿಲ್ಲ. ಸುಮಾರು ಎಂಟು ಗಂಟೆಯ ಸಮಯ. ಯಾರೋ ಗಾಂಧೀ ಟೋಪಿಯವರು ಮೂವರು ನಾಲ್ವರು ಬಂದು ಕುಳಿತರು. ಅವರೂ ನಾರಾಯಣನನ್ನು ವಿಚಾರಿಸಲಿಲ್ಲ. ಅವರ ಕೆಲಸಕ್ಕೆ ಅವರು ಬಂದವರು.

ಗಂಗಾಧರನು ಸ್ನಾನವನ್ನು ಮುಗಿಸಿಕೊಂಡು ಬಟ್ಟೆಗಳನ್ನು ಹಾಕಿಕೊಂಡು ಹೊರಗೆ ಬಂದನು.

ಮೊದಲು ನಾರಾಯಣನು ಅವನ ಕಣ್ಣಿಗೆ ಬಿದ್ದನು. "ಓಹೋ! ನಾರಾಯಣ, ಯಾವಾಗ ಬಂದೆ? ಇದೇನು ಇಲ್ಲೇ ಕುಳಿತಿದ್ದಿ. ಸೀದಾ ಒಳಗೆ ಬರಬೇಡವೇ?" ಎಂದು ಅವನ ಬೆನ್ನ ಮೇಲೆ ಕೈಹಾಕಿ ಒಳಗೆ ಕರೆದುಕೊಂಡು ಹೋದನು. ಒಳಗೆ ಹೋಗಿ, "ಕಮಲಾ! ಕಮಲಾ! ಇಲ್ಲಿ ಬಾ!" ಎಂದನು.

ಮಧ್ಯಮ ಪ್ರಾಯದ ಹೆಂಗಸೊಬ್ಬಳು ಹೊರಗೆ ಬಂದಳು.

"ನೋಡು! ಇವನೇ ಶ್ಯಾಮಣ್ಣನ ಮಗ—ನಾಣಿ! ಮೊನ್ನೆ ಹೇಳಲಿಲ್ಲವೇ? ಫಸ್ಟ್‌ಕ್ಲಾಸಿನಲ್ಲಿ ಪ್ಯಾಸ್ ಮಾಡಿದ್ದಾನೆ." ಕಮಲಮ್ಮನ ಮುಖವು

ಅರಳಿತು. ಸಡಗರದಿಂದ ಒಳಗೆ ಹೋಗಿ ಬೆಳ್ಳಿಯ ಲೋಟದಲ್ಲಿ ಕಾಫಿಯನ್ನು ತಂದಿಟ್ಟು ನಾರಾಯಣನನ್ನು ಕಣ್ಣು ತುಂಬ ನೋಡಿದಳು. ಗಂಗಾಧರನು, "ನಾಣಿ! ಕಾಫಿಯನ್ನು ತೆಗೆದುಕೋ!" ಎಂದು ಹೇಳಿದನು. ನಾರಾಯಣನು ಕಾಫಿ ಕುಡಿದನು.

ಗಂಗಾಧರನು "ರಾಮು! ರಾಮು!" ಎಂದು ಕರೆದನು. ರಾಮು ಗಂಗಾಧರನ ಮಗ. ಹದಿನಾಲ್ಕು ವರ್ಷ ವಯಸ್ಸು. ಅವನು ಬಂದು ನಿಂತನು.

ಗಂಗಾಧರನು "ಈ ನಾಣಿಯನ್ನು ಕರೆದುಕೊಂಡು ಹೋಗಿ ಸ್ನಾನಕ್ಕೆ ನೀರು ಕೊಡು." ಎಂದು ಹೇಳಿ ಪುನಃ ಹೊರಗೆ ಹೋಗಿ ತನಗಾಗಿ ಕಾದಿದ್ದ ಕಾಂಗ್ರೆಸ್ ಭಕ್ತರೊಡನೆ ಮಾತನಾಡುತ್ತಾ ಕುಳಿತನು.

ನಾರಾಯಣನು, ರಾಮು ಜೊತೆಯಲ್ಲಿ ಹೋಗಿ ಸ್ನಾನ ಮಾಡಿದನು. ಹೊರಗೆ ಬಂದು ತನ್ನ ಬ್ಯಾಗ್‌ನಲ್ಲಿದ್ದ ಪಂಚೆಯುಟ್ಟು ಬನೀನು ಹಾಕಿಕೊಂಡು ಹಜಾರಕ್ಕೆ ಬರುವ ಹೊತ್ತಿಗೆ ಮಣೆ ಹಾಕಿತ್ತು. ಬೆಳ್ಳಿಯ ತಟ್ಟೆಯಲ್ಲಿ ಉಪ್ಪಿಟ್ಟು, ಕಾಫಿ ಸಿದ್ಧವಾಗಿತ್ತು. ಕಮಲಮ್ಮನವರು ವಾತ್ಸಲ್ಯವನ್ನು ತೋರುತ್ತಾ ಉಪಚಾರೋಕ್ತಿಗಳನ್ನು ಹೇಳುತ್ತಾ ಫಲಾಹಾರವನ್ನು ತಂದಿಟ್ಟರು. ಮಧ್ಯೆ ನಾರಾಯಣನ ಪರೀಕ್ಷೆ—ಮುಂದಿನ ವ್ಯಾಸಂಗಗಳ ವಿಷಯದಲ್ಲಿ ಒಂದೆರಡು ಪ್ರಶ್ನೆಗಳನ್ನು ಹಾಕಿದರು. ನಾರಾಯಣನು ವಿನಯದಿಂದ ಉತ್ತರಗಳನ್ನು ಕೊಟ್ಟು, ಕಾಫೀ ಮುಗಿಸಿ ಹೊರಗೆ ಬಂದನು. ಗಂಗಾಧರರಾಯನು ಹೊರಡಲು ಅನುವಾಗಿ ನಾರಾಯಣನನ್ನು ಕರೆದುಕೊಂಡು ಹೊರಟರು. ದಾರಿಯಲ್ಲಿ— "ನಾಣಿ, ನಿನ್ನನ್ನು ನೋಡಿದ್ದು ಬಹಳ ಸಂತೋಷ. ಏನು ಬಂದೆ?" ಎಂದು ವಿಶ್ವಾಸದಿಂದ ಪ್ರಶ್ನೆ ಮಾಡಿದನು. ನಾರಾಯಣನು "ನನಗೆ ಬಿ. ಎಸ್‌ಸಿ. ಪ್ಯಾಸಾಯಿತು. ತಾಯಿಯವರು ಮುಂದಕ್ಕೆ ಓದಬೇಕೆನ್ನುತ್ತಾರೆ. ನಾನು ಸಂಸಾರ ಭಾರವನ್ನು ನಿರ್ವಹಿಸಬೇಕು. ಕೆಲಸಕ್ಕೆ ಸೇರೋಣವೆಂದಿದ್ದೇನೆ."

"ಅದೆಲ್ಲಾ ಸರಿಯಲ್ಲ ಮಗು! ನೀನು ಇಲ್ಲಿ ಮೆಡಿಕಲ್ ಕಾಲೇಜಿಗೆ ಸೇರು. ಸೀಟು ಕೊಡಿಸುತ್ತೇನೆ. ನಮ್ಮ ಮನೆಯಲ್ಲಿಯೇ ಇರು. ನಿನ್ನ ಯೋಗಕ್ಷೇಮವನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆ. ಎಂ. ಬಿ. ಬಿ. ಎಸ್. ಪ್ಯಾಸ್

ಮಾಡಿದರೆ ದೊಡ್ಡ ಡಾಕ್ಟರಾಗಬಹುದು. ಈಗ ಕೆಲಸಕ್ಕೆ ಹೋದರೆ ಏನು ಸಿಕ್ಕುತ್ತೆ. "

" ತಮಗೆ ಬಹಳ ಥ್ಯಾಂಕ್ಸ್. ಆದರೆ ಅನೇಕ ಕಷ್ಟಗಳಿವೆ. "

" ನಿನ್ನಂಥಾ ಬುದ್ಧಿವಂತನಾದ ಹುಡುಗನಿಗೆ ಕಷ್ಟವೆಂದರೇನು ? "

" ಓದುವುದಕ್ಕೆ ಕಷ್ಟವೆಂದಲ್ಲ. ಸಂಸಾರ ತಾಪತ್ರಯಗಳು ಬಹಳ. "

ಗಂಗಾಧರನು ನಕ್ಕನು. " ಸಂಸಾರ ತಾಪತ್ರಯವೆಂದರೇನಯ್ಯಾ ! ನಿಮ್ಮ ತಾಯಿ ಒಬ್ಬರ ಜೀವನವು ಕಷ್ಟವೇ ? "

ನಾರಾಯಣನು ಮಾತನಾಡಲಿಲ್ಲ. ಅವನಿಗೆ ಗಂಗಾಧರನ ಮಾತುಗಳು ಅರ್ಥವಾಗಲಿಲ್ಲ.

ಗಂಗಾಧರನು ಆತನನ್ನು ಕಾಂಗ್ರೆಸ್ ಆಫೀಸಿಗೆ ಕರೆದುಕೊಂಡು ಹೋದನು. ಅಲ್ಲಿ ಅನೇಕರು ಕಾಂಗ್ರೆಸ್‌ನವರು ಬಂದಿದ್ದರು. ಎಲ್ಲರೂ ಸೇರಿ ಸ್ವಲ್ಪ ಹೊತ್ತು ಹರಟೆ ಹೊಡೆದರು. ಗಂಗಾಧರನು ಅಲ್ಲಿಂದ ಮಾರ್ಕೆಟ್ಟಿಗೆ ಹೋಗಿ ಹಣ್ಣುಗಳನ್ನು ಕೊಂಡುಕೊಂಡನು. ಮನೆಗೆ ಹಿಂತಿರುಗಿ ಬರುತ್ತಾ, " ನಾಣಿ ! ಈ ಕಾಂಗ್ರೆಸ್ಸಿನವರ ಮಾತುಗಳು ಹೇಗೆ ಕಾಣುತ್ತವೆ ? " ಎಂದನು.

" ಅದು ಹೇಗೆ ಹೇಳಲು ಸಾಧ್ಯ. ಆ ವಿಷಯಗಳೆಲ್ಲಾ ನಮಗೆ ಸಂಬಂಧ ವಿಲ್ಲದ ವಿಷಯಗಳು. "

" ಹಾಗೆಂದರೇನಯ್ಯಾ ! ಅವರುಗಳು ಮಾತನಾಡಿದ್ದೆಲ್ಲಾ ಸರಿ ಎಂದು ಹೇಳಲಾಗುವುದಿಲ್ಲ. ಆದರೆ ಕಾಂಗ್ರೆಸ್ಸಿನವರಿಗೂ ನಿಮಗೂ ಸಂಬಂಧವಿಲ್ಲವೆಂದು ಹೇಳಲಾಗುವುದೇ ? ನೀವೆಲ್ಲಾ ಕಾಂಗ್ರೆಸ್ಸಿನವರೇ ಆಗಬೇಕು " ನಾಣಿಯು ಮಾತನಾಡಲಿಲ್ಲ. ಒಪ್ಪಿಗೆಯನ್ನು ಸೂಚಿಸುವಂತೆ ತಲೆದೂಗಿದನು.

ಗಂಗಾಧರನು ಅಧಿಕಾರಿಗಳ ಅಹಂಭಾವ, ಸರ್ಕಾರದ ಈ ವಿಷಯಗಳ ಲೆಲ್ಲಾ ದೊಡ್ಡ ಉಪನ್ಯಾಸವನ್ನೇ ಮಾಡಿದನು. ನಾರಾಯಣನು ಅದನ್ನೆಲ್ಲಾ ಶ್ರದ್ಧೆಯಿಂದ ಕೇಳುತ್ತಾ ಗಂಗಾಧರನ ಜೊತೆಯಲ್ಲಿ ನಡೆದನು.

ಮನೆಗೆ ಬರುವ ಹೊತ್ತಿಗೆ ಹನ್ನೆರಡು ಗಂಟೆಯಾಗಿತ್ತು. ಬಾಗಿಲಿ ನಲ್ಲಿಯೇ ವಾಸುದೇವನು ಕುಳಿತಿದ್ದನು. ಅವನು ಗಂಗಾಧರನ ಹಿರಿಯ ಮಗ. ಸುಮಾರು ಇಪ್ಪತ್ತುನಾಲ್ಕು ವರ್ಷ ವಯಸ್ಸಾಗಿರಬಹುದು. ಗಂಗಾಧರನು

" ವಾಸು ! ಇಗೋ ಇವನೇ ನಾರಾಯಣ. ನಮ್ಮ-ಶ್ಯಾಮು ಮಗ ! ಬಿ.ಎಸ್‌ಸಿ. ಫಸ್ಟ್‌ಕ್ಲಾಸಿನಲ್ಲಿ ಪ್ಯಾಸ್ ಮಾಡಿದ್ದಾನೆ. ಇಲ್ಲಿ ಮೆಡಿಕಲ್ ಕಾಲೇಜಿಗೆ ಸೇರುವುದಕ್ಕೆ ಬಂದಿದ್ದಾನೆ. " ಎಂದು ಹೇಳಿದನು.

ವಾಸು ಮುಗುಳ್ನಗೆಯಿಂದ ನಾರಾಯಣನಿಗೆ ' ಷೇಕ್‌ಹ್ಯಾಂಡ್ ' ಮಾಡಿದನು. ಎಲ್ಲರೂ ಮನೆಯೊಳಗೆ ಹೋದರು.

ಹಜಾರದಲ್ಲಿ ಭೋಜನಕ್ಕೆ ಎಲ್ಲಾ ಸಿದ್ಧವಾಗಿತ್ತು. ಮಣೆ, ಬಾಳೆಲೆ ಹಾಕಿ, ಬೆಳ್ಳಿಯ ಲೋಟಾಗಳಲ್ಲಿ ನೀರು ಇಟ್ಟಿದ್ದರು. ಎಲ್ಲರೂ ಊಟಕ್ಕೆ ಕುಳಿತರು. ವಾಸುವು ನಾರಾಯಣನ ಪಕ್ಕದಲ್ಲಿ ಕುಳಿತಿದ್ದ. ಕಮಲಮ್ಮನವರೇ ಬಡಿಸುವುದಕ್ಕೆ ಬಂದರು. ಸೊಗಸಾದ ಔತಣದ ಭೋಜನ. ಕಾಲೇಜುಗಳಲ್ಲಿ ಸೀಟು ಕೊಡುವ ಮಾತು, ಪಕ್ಷಪಾತ, ಶಿಫಾರಸುಗಳು, ಬುದ್ಧಿವಂತರಿಗೆ ಸೀಟುಗಳಿಲ್ಲ, ಈ ಮಾತುಗಳು ಮುಂದೆ ಸಾಗಿದುವು.

ವಾಸುವು " ಹೀಗೆಯೇ ನಡೆಯುತ್ತಿರಲಿ. ವಿದ್ಯಾವಂತರಿಗೆಲ್ಲಾ ನಿರುತ್ಸಾಹವಾಗುತ್ತದೆ. ಕ್ರಾಂತಿಯು ಹೊಗೆಯಾಡಲಾರಂಭವಾಗುತ್ತದೆ " ಎಂದನು.

ಗಂಗಾಧರನಿಗೆ ರೇಗಿತು, " ಬಾಯಿ ಮುಚ್ಚು ! ಬುದ್ಧಿಯಿಲ್ಲದ ಹುಡುಗರು ' ಕ್ರಾಂತಿ—ಕ್ರಾಂತಿ ' ಎನ್ನುವುದು. ನಾಲ್ಕು ಪುಸ್ತಕಗಳನ್ನೋದಿದರೆ ರಾಜಕೀಯ ಪ್ರವೀಣರಾಗಿ ಬಿಡುತ್ತಾರೇನು ? "

" ಅಪ್ಪಾ ! ನಿಮಗೇಕೆ ಇಷ್ಟು ಕೋಪ. ಐಶ್ವರ್ಯವಂತರು, ಜಮೀನುದಾರರು. ವ್ಯಾಪಾರಿಗಳು ದೊಡ್ಡ ಲಾಯರುಗಳು ಎಲ್ಲಾ ಸೇರಿ ನಿಮ್ಮ ಕಾಂಗ್ರೆಸ್ಸು ! ಇಂಗ್ಲೀಷರ ಕೈಲಿರುವ ಅಧಿಕಾರ ನಿಮ್ಮ ಕೈಗೆ ಬರಬೇಕೆನ್ನುತ್ತೀರಿ —ಅದೇ ಸ್ವರಾಜ್ಯ. "

" ಅಲ್ಲ ಕಣೊ ' ಫೂಲ್ ! ' ಮಹಾತ್ಮಾ ಗಾಂಧಿಯವರು ಜಮೀನುದಾರರೇನೋ ! ಐಶ್ವರ್ಯವಂತರೇನೋ ! ಅವರು ದರಿದ್ರನಾರಾಯಣನ ಅವತಾರ ! ತ್ಯಾಗದ ಪ್ರತ್ಯಕ್ಷಮೂರ್ತಿ. "

ಅಲ್ಲಿಗೆ ವಾಸುವಿನ ಮಾತು ನಿಂತಿತು. ಕಮಲಮ್ಮನವರು ಪಾಯಸವನ್ನು ತಂದು ಬಡಿಸಿದರು. ಜಿಲೇಬಿಯೂ ಬಂತು. ವಾಸುವು ಉಪಚಾರ ಮಾಡಿ ನಾಣಿಗೆ ಮತ್ತೆರಡು ಜಿಲೇಬಿ ಹಾಕಿಸಿದನು.

ವಾಸುವು ನಾಣಿಯನ್ನು ಮಹಡಿಯ ಮೇಲೆ ತನ್ನ ಕೋಣೆಗೆ ಕರೆದು ಕೊಂಡು ಹೋದನು. ಅಲ್ಲಿ ಅವರು ಮಾತನಾಡುತ್ತಾ ಕುಳಿತರು. ನಾಣಿ ವಾಸು ವಿನ ಮೇಜಿನ ಮೇಲಿದ್ದ ಪುಸ್ತಕಗಳನ್ನು ಒಂದೊಂದಾಗಿ ನೋಡಿದನು. ಟ್ರಾಟ್ಸ್ಕಿಯು ಬರೆದ ರಷ್ಯದ ಕ್ರಾಂತಿ, ಮಾರ್ಕ್ಸ್ ಸಿದ್ಧಾಂತ— ಹೀಗೇ ಒಂದೊಂದಾಗಿ ಪುಸ್ತಕಗಳನ್ನು ಮಗುಚಿ ಹಾಕಿದನು.

" ವಾಸುದೇವರಾವ್ ! ನಿಮಗೆ ಈ ಪುಸ್ತಕಗಳಲ್ಲಿಯೇ ಅಭಿರುಚಿಯೇ ! "

" ಹಾಗೇನೂ ಇಲ್ಲ. ಎಲ್ಲಾ ಪುಸ್ತಕಗಳನ್ನೂ ಓದುತ್ತೇನೆ. ಅಲ್ಲಿ ನೋಡು. ಷೇಕ್ಸ್‌ಪಿಯರನ ನಾಟಕಗಳಿವೆ. ಇಲ್ಲಿ ಬರ್ನಡ್ ಷಾನ ಪುಸ್ತಕಗಳಿವೆ. ನೆಹರೂ ಬರೆದಿರುವ ' ಆಟೋಬಯಾಗ್ರಫಿ ' ಇದೆ. "

" ನೀವು ಲಾ ಪರೀಕ್ಷೆಗೆ ಓದುತ್ತೀದ್ದೀರೆಂದು ಕೇಳಿದ್ದೆ. "

" ಏಕೆ ನಾಣಿ ! ಸರಿಯಾಗಿಯೇ ಕೇಳು. ಮದರಾಸಿನಲ್ಲಿ ಲಾ ಓದು ತ್ತಿದ್ದೆ. ಫೇಲಾಯಿತು. ಮನೆಗೆ ಬಂದುಬಿಟ್ಟೆ. "

" ಆಮೇಲೆ ? "

ವಾಸುವು ನಕ್ಕನು. " ಆಮೇಲೆ ಏನು, ಈಗಲೂ ಪರೀಕ್ಷೆಗೆ ಕಟ್ಟಿ ಪ್ಯಾಸ್ ಮಾಡಬಹುದು. ಕಕ್ಷಿಗಾರರನ್ನು ಕಟ್ಟಿಕೊಂಡು ಕೋರ್ಟಿಗೆ ಅಲೆಯ ಬಹುದು. ಅದೇನು ಮಹಾ ಕಾರ್ಯ. ಯಾರಿಗೆ ಉಪಕಾರ ! ನನ್ನ ತಂದೆ ಯವರು ದೊಡ್ಡ ಲಾಯರು. ಈಗೇನೋ ಪ್ರ್ಯಾಕ್ಟೀಸು ಬಿಟ್ಟಿದ್ದಾರೆ. ನಾನೂ ಹಾಗೆಯೇ ಒಬ್ಬ ಲಾಯರಾಗಬಹುದು. "

" ಬಿ. ಎಲ್. ಪ್ಯಾಸ್ ಮಾಡಿದರೆ ಓದು ಮುಗಿದಂತಾಗುತ್ತದೆ. ಸಮಾಜ ದಲ್ಲಿ ಅದಕ್ಕೊಂದು ಗೌರವವಿದೆ ! "

" ಗೌರವವೇ! ಗೌರವ ! ನಾಣೀ, ಇದೆಲ್ಲಾ ಏನೆಂದು ತಿಳಿದುಕೊಂಡಿದ್ದಿ. ಇಂಗ್ಲಿಷರು ಕಟ್ಟಿರುವ ರಕ್ಷಾ ಬಂಧನಗಳು. ಈ ಲಾಯರುಗಳು— ಈ ವಿಶ್ವ ವಿದ್ಯಾನಿಲಯ— ಈ ವ್ಯಾಪಾರ— ಈ ಅಧಿಕಾರಿ ವರ್ಗ ಇದೆಲ್ಲವೂ ಇದ್ದರೆ ಇಂಗ್ಲೀಷ್ ರಾಜ್ಯಭಾರವು ಶಾಶ್ವತವಾಗಿರುತ್ತದೆ. ಇದು ಅವರು ನಮಗೆ ಮಾಡಿ ರುವ ಉಪಕಾರ. "

ನಾಣಿಯು ಅಪ್ರತಿಭನಾದನು. " ವಾಸುದೇವರಾವ್ ! ಮಹಾತ್ಮಾ

ಗಾಂಧಿಯವರ ತಪಸ್ಸಿನಿಂದ ಇಂಗ್ಲಿಷ್ ರಾಜ್ಯವು ನಾಶವಾಗುವುದಿಲ್ಲವೇ ? ”
ವಾಸುವು ತಲೆಯಾಡಿಸಿದನು. “ ಮಹಾ ಕ್ರಾಂತಿಯಾಗದೇ ನಿಜವಾದ ಸ್ವರಾಜ್ಯವು ಬರುವುದೇ ಇಲ್ಲ. ”

ಕೆಳಗಡೆ ಏನೋ ಗದ್ದಲ, ಸಡಗರ. ವಾಸುವಿನ ರಾಜಕೀಯ ವೇದಾಂತಕ್ಕೂ ಕೆಳಗಿನ ಹಜಾರದ ಸಡಗರಕ್ಕೂ ಸಂಬಂಧವೇ ಇಲ್ಲ. ಮಧ್ಯಾಹ್ನ ಮೂರು ಗಂಟೆಯ ಸಮಯ. ರಾಮುವು ಬಂದು, “ ಕಾಫಿ ತೆಗೆದುಕೊಳ್ಳಲು ಕೆಳಗೆ ಬರಬೇಕಂತೆ ” ಎಂದು ಕರೆದುಹೋದನು. ವಾಸುವು ನಾಣಿಯನ್ನು ಕರೆದುಕೊಂಡು ಕೆಳಗಿಳಿದನು.

ಹಜಾರದಲ್ಲಿ ರತ್ನಗಂಬಳಿ ಹಾಸಿತ್ತು. ಮತ್ತೊಂದು ಕಡೆ ಲೋಡುದಿಂಬುಗಳನ್ನು ಇಟ್ಟಿತ್ತು. ನಾರಾಯಣನು ಇದೇನು ಸಿದ್ಧತೆ ಎಂದುಕೊಂಡು ಹಜಾರವನ್ನು ದಾಟಿ ನಡುಮನೆಗೆ ಹೋದನು.

ಅಲ್ಲಿ ಮಣೆಗಳನ್ನು ಹಾಕಿದ್ದರು. ಉಪಾಹಾರದ ತಟ್ಟೆಗಳು ಸಿದ್ಧವಾಗಿದ್ದುವು. ತಟ್ಟೆಯಲ್ಲಿ ತೇಂಗೊಳಲು, ಬೋಂಡ, ಹಣ್ಣು ಚೂರುಗಳು ಎಲ್ಲವೂ ಇದ್ದುವು. ಗಂಗಾಧರರಾಯನೂ ಒಬ್ಬಿಬ್ಬರು ಗಾಂಧೀ ಭಕ್ತರೂ ಕುಳಿತಿದ್ದರು. “ ಬಾ ನಾಣಿ, ಮಣೆಯ ಮೇಲೆ ಕುಳಿತುಕೋ ! ” ಎಂದು ಗಂಗಾಧರನು ಹೇಳಿದ. ನಾರಾಯಣನು ಕುಳಿತುಕೊಂಡನು. ವಾಸು, ರಾಮು ಪಕ್ಕದಲ್ಲಿ ಕುಳಿತರು.

ಗಂಗಾಧರನು “ ನೋಡಿ, ವಿಠಲರಾವ್ ಈ ಹುಡುಗನು ನಮ್ಮ ಶ್ಯಾಮಣ್ಣನವರ ಮಗ. ನಾನು ಶ್ಯಾಮು ಬಾಲ್ಯ ಸ್ನೇಹಿತರು. ಇವನು ಬಿ.ಎಸ್‌ಸಿ. ಫಸ್ಟ್‌ಕ್ಲಾಸ್ ! ಇವನಿಗೆ ನಮ್ಮ ತಾರಾನ್ನ ಕೊಡೋಣವೆಂದು ಯೋಚನೆ ಮಾಡಿದ್ದೇನೆ. ಏನು ಹೇಳುತ್ತೀರಿ ”

ವಿಠಲರಾಯರು ಉಪಾಹಾರವನ್ನು ಸಾಗಿಸುತ್ತಾ, “ ಸೊಗಸಾದ ವರ ಸಾಮ್ಯ. ನಿಮಗೇನು ಸ್ವಾಮೀ, ಎಲ್ಲಿಯೂ ಲಾಭವೇ ! ನಮಗೆ ನಾಲ್ಕಾರು ದಿನಗಳು ದಿವ್ಯಭೋಜನ ! ಸಂಗೀತ ! ಸಂಭ್ರಮಗಳು. ಮದುವೆ ಮಾಡಿಬಿಡಿ. ಮತ್ತೆ ಪುನಃ ಯಾವಾಗ ಜೈಲಿಗೆ ಹೋಗಬೇಕೋ ? ” ಎಂದು ನಕ್ಕರು.

ನಾರಾಯಣನಿಗೆ ಬೆಳಗಿನಿಂದ ನಡೆದ ವಿಶ್ವಾಸ, ಆಚಾರ ಉಪಚಾರಗಳು ಅರ್ಥವಾಯಿತು. ಅವನು ಮೌನವಾಗಿ ಉಪಾಹಾರವನ್ನು ಮುಗಿಸಿದನು.

'ತಾರಾ, ತಾರಾ' ಆ ಹುಡುಗಿಯು ಮಾತ್ರ ನಾಣಿಯ ಕಣ್ಣಿಗೆ ಬೀಳ ಲಿಲ್ಲ. ವಾಸುವಿನ ತಂಗಿ ವಾಸುವಿನ ಹಾಗೆಯೇ ಇರಬಹುದೆಂದು ಭಾವಿಸಿದನು. ಕಾಫಿ ಕೊಡುತ್ತಿದ್ದ ಕಮಲಮ್ಮನವರನ್ನೊಂದು ಬಾರಿ ತಲೆ ಎತ್ತಿ ನೋಡಿದನು. ಹುಡುಗಿಯು ತಾಯಿಯಂತೆ ಇರಬಹುದು. ಅಲ್ಲಿಂದ ಹಜಾರಕ್ಕೆ ಬಂದು ಎಲ್ಲರೂ ಕುಳಿತರು. ಗಂಗಾಧರನು ನಾರಾಯಣನನ್ನು ಪಕ್ಕದಲ್ಲಿ ಕೂಡಿಸಿ ಕೊಂಡನು. ಎದುರಿಗೆ ಸಿದ್ಧವಾಗಿದ್ದ ರತ್ನಗಂಬಳಿಯ ಮೇಲೆ ತಾರಾ ವೀಣೆ ಯನ್ನು ತಂದು ಕುಳಿತುಕೊಂಡಳು. ಗಂಗಾಧರನು, "ತಾರಾ, ಒಂದೆರಡು ಕೀರ್ತನೆಗಳನ್ನು ಹಾಡಮ್ಮಾ" ಎಂದನು. ತಾರಾ ಕಂಠವನ್ನು ಸರಿ ಮಾಡಿ ಕೊಂಡು ಹಾಡಲಾರಂಭಿಸಿದಳು. ಹದಿನೆಂಟು ವರ್ಷ ವಯಸ್ಸಿನ ಕಿಶೋರಿ! ತೆಳುವಾದ ಬಳುಕುವ ಶರೀರ. ಬಿಳಿಯ ಸೀರೆಯನ್ನುಟ್ಟಿದ್ದಳು. ಕರಿಯ ರೇಶಿ ಮೆಯ ರವಿಕೆ ತೊಟ್ಟಿದ್ದಳು. ದಂತದಂತಹ ಬಿಳಿಯ ಮೈ ಬಣ್ಣ. ಪ್ರಭಾವಯುತ ವಾದ ಕಣ್ಣುಗಳು. ಥಳಥಳಿಸುವ ಕಪೋಲಗಳು. ಕಿವಿಗಳಲ್ಲಿ ವಜ್ರದ ಓಲೆಗಳು. ಕೊರಳಲ್ಲಿ ಚಿನ್ನದ ಸರ. ಕೈಗಳಲ್ಲಿ ಖಳಖಳಿಸುವ ಚಿನ್ನದ ಬಳೆಗಳು. ನೆಲದ ಮೇಲೆ ಹರಿಯುತ್ತಿರುವ ಜಡೆ. ತಲೆಯಲ್ಲಿ ಮಲ್ಲಿಗೆಯ ಹೂವಿನ ಕುಚ್ಚು! ಮನೋಹರವಾದ ಕಂಠಧ್ವನಿ. ನಾರಾಯಣನು ನಾಚಿ ನಾಚಿ ಆ ಹುಡುಗಿ ಯನ್ನು ನಾಲ್ಕಾರು ಬಾರಿ ನೋಡಿದನು. ತಾರಾ ಸುಮಾರು ನಾಲ್ಕಾರು ರಾಗ ಗಳನ್ನು ಆಲಾಪನೆ ಮಾಡಿ ಎರಡು ಕೀರ್ತನೆಗಳನ್ನು ಹಾಡಿದಳು. ಗಂಗಾ ಧರನ ಸ್ನೇಹಿತರು 'ಭೇಷ್, ಭೇಷ್' ಎಂದರು. ನಾರಾಯಣನು ತಲೆ ಬಾಗಿ ಕುಳಿತಿದ್ದನು. ಗಂಗಾಧರರಾಯನು "ಸಾಕಮ್ಮಾ ತಾರಾ!" ಎಂದನು. ತಾರಾ ವೀಣೆಯನ್ನು ರತ್ನಗಂಬಳಿಯ ಮೇಲೆ ಇಟ್ಟು ಗಂಭೀರವಾಗಿ ಎದ್ದು ನಿಂತಳು. ನಾರಾಯಣನು ಮತ್ತೊಮ್ಮೆ ಅವಳ ಮುಖವನ್ನು ನೋಡಿದನು. ಕಪೋಲಗಳ ಮೇಲೆ ಬೆವರು ಹನಿಗಳು ಕಾಣುತ್ತಿದ್ದುವು. ಮುಂಗುರುಳುಗಳು ಕೆದರಿ ಹಾರುತ್ತಿತ್ತು. ತಾರಾ ನಿಧಾನವಾಗಿ ಅಡಿಯಿಡುತ್ತಾ ನಡುಮನೆಯೊಳಕ್ಕೆ ಹೊರಟುಹೋದಳು.

ಗಂಗಾಧರರಾಯನು, "ಏನು ನಾಣಿ, ಹುಡುಗಿಯನ್ನು ಒಪ್ಪಿದೆಯಾ?" ಎಂದು ಕೇಳಿದನು. ನಾರಾಯಣನು ತಲೆ ತಗ್ಗಿಸಿದನು. ವಿಠಲರಾಯನು

" ಹುಡುಗಿಯನ್ನು ಒಪ್ಪುವುದೇ! ಇಂತಹ ಹೆಂಡತಿಯು ಸಿಕ್ಕುವುದು ಭಾಗ್ಯ " ಎಂದರು. ಎಲ್ಲರೂ ಎದ್ದು ಹೊರಟರು.

ನಾಣಿಯೂ ವಾಸುವೂ ಮಹಡಿಯ ಮೇಲೆ ಹೋದರು. ವಾಸುವು ಎಲ್ಲಿಯಾದರೂ ಹೋಗಿ ಬರೋಣವೆಂದು ನಾಣಿಯನ್ನು ಕರೆದುಕೊಂಡು ಹೊರಟನು. ಇಬ್ಬರೂ ದೊಡ್ಡಕೆರೆಯ ಏರಿಯ ಮೇಲೆ ಹೊರಟು ರೇಸ್‌ಕೋರ್ಸ್ ಕಡೆಗೆ ಮಾತನಾಡಿಕೊಂಡು ಹೋದರು. ಮದುವೆಯ ವಿಚಾರವಾಗಿ ವಾಸುವು ಒಂದು ಮಾತನ್ನಾದರೂ ಆಡಲಿಲ್ಲ. ನಾರಾಯಣನಿಗೆ ಮನಸ್ಸಿನಲ್ಲಿ ಆ ದಿನ ಪ್ರಾತಃಕಾಲದಿಂದ ನಡೆದ ಅನೇಕ ಘಟನೆಗಳು ಜ್ಞಾಪಕಕ್ಕೆ ಬರುತ್ತಿದ್ದುವು.

ನಾರಾಯಣನು, " ವಾಸು ! ಈ ಊರು ಬಹಳ ಚೆನ್ನಾಗಿದೆ " ಎಂದು ಹೇಳಿದನು.

" ಹೌದು. ಇಂಡಿಯಾ ದೇಶದಲ್ಲಿಯೇ ಇದೊಂದು ಸುಂದರವಾದ ಸಣ್ಣ ನಗರ. ಮಹಾರಾಜರವರು ಬಹಳ ಶ್ರದ್ಧೆ ವಹಿಸಿ ಈ ಊರನ್ನು ಇಷ್ಟು ಚೆನ್ನಾಗಿ ಮಾಡಿಸಿದ್ದಾರೆ. ಇನ್ನೇನು, ನೀನು ಇನ್ನು ಐದು ವರ್ಷಗಳು ಇಲ್ಲಿಯೇ ಇರುತ್ತೀಯಲ್ಲಾ " ಎಂದು ನಕ್ಕನು.

ನಾರಾಯಣನು ದೀರ್ಘ ನಿಶ್ವಾಸವನ್ನು ಬಿಟ್ಟು, " ಇಲ್ಲ ವಾಸು ! ನಾನು ಈ ಊರಿನಲ್ಲಿರುವುದು ಅಸಂಭವ " ಎಂದ.

" ಏಕೆ ನಿನಗೆ ಮೆಡಿಕಲ್ ಕಾಲೇಜಿಗೆ ಸೇರುವುದು ಇಷ್ಟವಿಲ್ಲವೇ ? "

" ಅದರಲ್ಲಿ ಇಷ್ಟಾನಿಷ್ಟಗಳು ಮುಖ್ಯವಲ್ಲ. ನಾನು ಎಲ್ಲಾದರೂ ಕೆಲಸಕ್ಕೆ ಸೇರಬೇಕು. "

ವಾಸು ಅಪ್ರತಿಭನಾಗಿ " ಕೆಲಸವೇ ! ಇದೇನು ಯೋಚನೆ? ನಿನಗಿನ್ನೂ ಚಿಕ್ಕ ವಯಸ್ಸು. ಇಷ್ಟು ಬೇಗ ಏಕೆ ಕೆಲಸಕ್ಕೆ ಸೇರಬೇಕು ? " ಎಂದು ಕೇಳಿದ.

" ವಾಸು ನಿನಗೆ ನನ್ನ ವಿಚಾರವೇ ಗೊತ್ತಿಲ್ಲ. ನನಗೊಬ್ಬ ತಂಗಿ ಇದ್ದಾಳೆ. ಅವಳು ಇಂಟರ್ ಓದುತ್ತಿದ್ದಾಳೆ. ತಾಯಿ ಇದಾರೆ. ಮನೆಯ ಸಂಸಾರ ಭಾರವನ್ನೆಲ್ಲಾ ನಾನೇ ವಹಿಸಬೇಕು. ಎಲ್ಲದಕ್ಕಿಂತಲೂ ಅದು ನನಗೆ ದೊಡ್ಡದು. "

ವಾಸುವು ಮುಂದೆ ಮಾತನಾಡಲಿಲ್ಲ. ಅವನು ಏನೋ ಆಲೋಚಿಸುತ್ತಾ ಆಕಾಶದ ಕಡೆ ನೋಡುತ್ತಿದ್ದನು.

ಚಾಮುಂಡಿಬೆಟ್ಟದ ಮೇಲೆ ದೀಪಮಾಲೆಗಳು ಪ್ರಕಾಶಿಸುತ್ತಿದ್ದುವು. ನಾಣಿ "ಮನೆಗೆ ಹಿಂತಿರುಗಿ ಹೋಗೋಣವೇ ?" ಎಂದನು.

ಇಬ್ಬರೂ ಮನೆಗೆ ಹಿಂತಿರುಗಿದರು. ವಾಸುವು ಬಡತನ—ಐಶ್ವರ್ಯಗಳ ವಿಚಾರಗಳನ್ನು ಮಾತನಾಡುತ್ತಾ ಹೊರಟನು. ಮಾತಿಗೆ ಮಾತು ಬಂದು ಎಲ್ಲೆಲ್ಲಿಗೋ ಹೋಯಿತು. ಯುದ್ಧದ ಮಾತು, ಹಿಟ್ಲರನ ಸಾಹಸ, ಚರ್ಚಿಲ್ಲನ ಕಪಿಮುಷ್ಟಿ ಎಲ್ಲ ಮಾತುಗಳೂ ಲೋಕಾಭಿರಾಮವಾಗಿ ಬಂದುವು. ಇಬ್ಬರೂ ಮನೆಯನ್ನು ಸೇರಿದರು.

ರಾತ್ರಿ ಎಂಟು ಗಂಟೆಯಾಗಿತ್ತು. ಗಂಗಾಧರರಾಯನು ಇನ್ನೂ ಮನೆಗೆ ಬಂದಿರಲಿಲ್ಲ. ಹಜಾರದಲ್ಲಿ ಕಮಲಮ್ಮನವರು ಹುಡುಗರೊಡನೆ ಮಾತನಾಡುತ್ತಾ ಕುಳಿತಿದ್ದರು. ವಾಸುವೂ ನಾಣಿಯೂ ಮನೆಗೆ ಬರುತ್ತಲೇ ಕಮಲಮ್ಮನವರು 'ವಾಸೂ—ವಾಸೂ' ಎಂದು ಕರೆದರು. ವಾಸುವು ಸಮೀಪದಲ್ಲಿ ಹೋಗಿ ನಿಂತನು. ನಾಣಿಯು ಅವನ ಹಿಂದೆ ದೂರದಲ್ಲಿ ನಿಂತಿದ್ದನು. ಕಮಲಮ್ಮನು "ನಾಣಿ! ನಿಮ್ಮ ತಾಯಿಯವರು ಆರೋಗ್ಯವಾಗಿದ್ದಾರೆಯೇ ? ತಂಗಿ ಶ್ಯಾಮಲೆಯು ಏನು ಮಾಡುತ್ತಾಳೆ ?" ಎಂದು ಯೋಗಕ್ಷೇಮವನ್ನು ವಿಚಾರಿಸಿದರು. ಶ್ಯಾಮಣ್ಣನವರು ಮಧ್ಯಮ ವಯಸ್ಸಿನಲ್ಲಿಯೇ ದೈವಾಧೀನರಾಗಿದ್ದಕ್ಕಾಗಿ ವ್ಯಸನವನ್ನು ಸೂಚಿಸಿದರು. ಆ ಕುಟುಂಬದಲ್ಲಿ ಕನಿಕರ ತೋರಿಸಿದರು.

ನಾರಾಯಣನು ಒಂದೊಂದು ಮಾತಿನಲ್ಲಿ ವಿನಯದಿಂದ ಉತ್ತರವಿತ್ತನು. ವಾಸು ಮತ್ತು ನಾರಾಯಣ ಇಬ್ಬರೂ ಮಹಡಿಯ ಮೇಲೆ ಹೋದರು.

ರಾತ್ರಿ ಭೋಜನೋತ್ತರ ಗಂಗಾಧರರಾಯನು ನಾಣಿಯನ್ನು ಹತ್ತಿರ ಕೂರಿಸಿಕೊಂಡು ಲೋಕಾಭಿರಾಮವಾಗಿ ಮಾತನಾಡುತ್ತಿದ್ದನು. ಶ್ಯಾಮಣ್ಣನಿಗೂ ತನಗೂ ಇದ್ದ ಬಾಲ್ಯದ ಸ್ನೇಹದ ಕಥೆಗಳನ್ನು ಎಷ್ಟೋ ಹೇಳಿದನು. ಬಹಳ ಹೊತ್ತಾಗಿತ್ತು. ನಾರಾಯಣನನ್ನು ಮಲಗಲು ವಾಸುವಿನ ಕೋಣೆಗೆ ಕಳುಹಿಸಿದನು. ವಾಸುವಿನ ಹಾಸಿಗೆಯ ಪಕ್ಕದಲ್ಲಿ ಒಂದು ಹಾಸಿಗೆ ಹಾಕಿತ್ತು. ವಾಸುವೂ ನಾರಾಯಣನೂ ಮಾತನಾಡುತ್ತ ಮಲಗಿದ್ದರು. ವಾಸುವಿಗೆ ನಿದ್ರೆ ಬಂದಿತು.

ನಾರಾಯಣನಿಗೆ ಜೋಂಪು ಹತ್ತಿತ್ತೋ ಇಲ್ಲವೋ ಜಗ್ಗನೆ ಎಚ್ಚರವಾಯಿತು. ಸ್ವಲ್ಪ ಹೊತ್ತು ಹಾಗೆಯೇ ಮಲಗಿ ಯೋಚಿಸುತ್ತಿದ್ದನು ನಾನೇಕೆ ಬಂದೆ, ಇದೇನು ಮದುವೆಯ ಮಾತು! ನಮ್ಮ ತಾಯಿ ಏನೆಂದುಕೊಂಡಾಳು-ಎಂದು ಮೊದಲು ಯೋಚನೆ ಬಂತು. ತಾರಾ ಚೆನ್ನಾಗಿದ್ದಾಳೆ. ಐಶ್ವರ್ಯದಲ್ಲಿ ಬೆಳೆದ ಹುಡುಗಿ. ನನ್ನಂಥಾ ಬಡವನಿಗೇಕೆ ಅಂಥಾ ಹೆಂಡತಿ. ಗಂಗಾಧರರಾಯರ ತಪ್ಪೇನೂ ಇಲ್ಲ. ಇದೆಲ್ಲ ಅವರ ಔದಾರ್ಯ.

ನಾನು ಮೆಡಿಕಲ್ ಕಾಲೇಜಿನಲ್ಲಿ ಐದು ವರ್ಷಗಳು ಓದಿದರೆ ನನ್ನ ತಂಗಿ—ತಾಯಿಯನ್ನು ನೋಡಿಕೊಳ್ಳುವರಾರು? ಎಂ.ಎಸ್ಸಿ.ಗೆ ಓದಲೇ —ಕೆಲಸಕ್ಕೆ ಸೇರಲೇ ಎಂದು ಕೇಳುವುದಕ್ಕೆ ಬಂದೆ. ಇರಲಿ. ಈಗ ಏನಾಯಿತು, ನಾಳೆ ಗಂಗಾಧರರಾಯರಿಗೆ ಹೇಳಿ ಬೆಳಗ್ಗೆ ಹೊರಟುಹೋಗುತ್ತೇನೆ, ಎಂದು ನಿರ್ಧಾರ ಮಾಡಿಕೊಂಡನು.

ಅರ್ಧ ನಿದ್ರೆ, ಅರ್ಧ ಎಚ್ಚರ, ಸಣ್ಣ ಸಣ್ಣ ಸ್ವಪ್ನಗಳು-ಹೀಗೆ ಆ ರಾತ್ರಿಯು ಕಳೆಯಿತು. ನಾರಾಯಣನು ಬೆಳಗ್ಗೆ ಎದ್ದು ಕೆಳಗಿಳಿದು ಮುಖ ತೊಳೆದು ಕೊಂಡು ಬಂದನು.

ವಾಸುವೂ ಬಂದನು. ಕಮಲಮ್ಮನವರು ಇಬ್ಬರಿಗೂ ಕಾಫಿ ಕೊಟ್ಟರು. ಆಮೇಲೆ ಸ್ನಾನವಾಯಿತು. ಕಾಫಿ ತಿಂಡಿಯೂ ಆಯಿತು. ನಾರಾಯಣನು ಗಂಗಾಧರರಾಯನನ್ನು ಕಾಯುತ್ತಾ ಹಜಾರದಲ್ಲಿ ಕುಳಿತನು.

ಗಂಗಾಧರರಾಯನು ಎದ್ದು ಬಂದನು. ಅವನು "ಏನಯ್ಯಾ ನಾಣಿ ಆಗಲೇ ಕಾಫಿ ಆಯಿತೋ" ಎಂದು ಹಾಸ್ಯವಾಗಿ ಕೇಳಿದನು. ನಾಣಿಯು ಗಂಭೀರವಾಗಿ "ಆಯಿತು! ಅಪ್ಪಣೆ ಕೊಟ್ಟರೆ ಊರಿಗೆ ಹೊರಡುತ್ತೇನೆ" ಎಂದನು.

ಗಂಗಾಧರರಾಯನು "ಇದೇನು ಒಂದೇ ದಿನ ಇದ್ದು ಹೊರಟುಬಿಟ್ಟೆ!" ಎಂದರು.

"ಹೌದು! ಊರಿನಲ್ಲಿ ಕೆಲಸವಿದೆ. ತಮ್ಮ ಭೇಟಿ ಮಾಡಿಕೊಂಡು ಹೋಗೋಣವೆಂದು ಬಂದೆ."

"ಒಳ್ಳೆಯದು! ಮೆಡಿಕಲ್ ಕಾಲೇಜ್ ತೆಗೆಯುವುದು ಇನ್ನೂ ಒಂದು

ತಿಂಗಳಿದೆ. ಸೀಟಿಗೆ ಏರ್ಪಾಟು ಮಾಡುತ್ತೇನೆ. ಬಂದುಬಿಡು, ನಿಮ್ಮ ತಾಯಿಯವರೊಡನೆ ಎಲ್ಲವನ್ನೂ ಹೇಳು! ನನ್ನ ಮಾತನ್ನು ಅಮ್ಮ ತೆಗೆದು ಹಾಕುವುದಿಲ್ಲ."

"ಇಲ್ಲ! ನಾನು ಮೆಡಿಕಲ್ ಕಾಲೇಜಿಗೆ ಸೇರುವುದು ಸಾಧ್ಯವಿಲ್ಲ. ಎಂ.ಎಸ್‌ಸಿ.ಗೆ ಸೇರಬೇಕು. ಅಥವಾ ಕೆಲಸಕ್ಕೆ ಸೇರಬೇಕು. ನನಗೆ ಬೇರೇ ಮಾರ್ಗವೇ ಇಲ್ಲ."

ಗಂಗಾಧರರಾಯನ ಮುಖವು ಸಪ್ಪಗಾಯಿತು. "ಒಳ್ಳೆಯದು, ಹೋಗಿ ಬಾ! ದೇವರ ಇಚ್ಛೆ" ಎಂದರು.

ನಾರಾಯಣನು ಅಲ್ಲಿಯೇ ನಿಂತಿದ್ದ ಕಮಲಮ್ಮನವರಿಗೆ ವಂದಿಸಿದನು. ಕೋಣೆಯ ಬಾಗಿಲಲ್ಲಿ ನಿಂತಿದ್ದ ತಾರೆಯನ್ನೊಮ್ಮೆ ನೋಡಿ, ಮಹಡಿಯ ಮೇಲಕ್ಕೆ ಹೊರಟುಹೋದನು.

ವಾಸುವಿನೊಡನೆ ತನ್ನ ಪ್ರಯಾಣದ ವಿಷಯವನ್ನು ಹೇಳಿ ರೈಲಿಗೆ ಹೊರಟೇ ಬಿಟ್ಟನು. ವಾಸುವು ನಾಣಿಯನ್ನು ಕಳುಹಿಸಿ ಕೊಡಲು ರೈಲ್ವೆ ಸ್ಟೇಷನ್ನಿಗೆ ಹೋದನು.

ನಾರಾಯಣನು ಮೂರನೆಯ ತರಗತಿಯ ಟಿಕೆಟ್ ತೆಗೆದುಕೊಂಡು ಬಂಡಿಯನ್ನು ಹತ್ತಿ ಕುಳಿತುಕೊಂಡನು. ವಾಸುವು ಬೀಳ್ಕೊಡುವ ಮಾತುಗಳನ್ನಾಡುತ್ತಿದ್ದನು. ಗಾಡಿಯು ಹೊರಡುವ ಹೊತ್ತಾಯಿತು. ವಾಸುವು "ನಾಣೀ ಜ್ಞಾಪಕವಿರಲಿ. ನಮ್ಮಿಬ್ಬರ ಸ್ನೇಹವು ಅಳಿಯದಿರಲಿ!" ಎಂದು ಹೇಳಿದನು.

ನಾರಾಯಣನು ವಾಸುವಿನ ಕೈಹಿಡಿದು ಕುಲುಕುತ್ತಾ "ವಾಸು! ಇನ್ನು ಮೇಲೆ ನಾವು ಆಜೀವ ಸ್ನೇಹಿತರು." ಎಂದು ಹೇಳಿದನು. ಅವನ ದನಿಯು ಗದ್ಗದಿತವಾಗಿತ್ತು. ರೈಲು ಗಾಡಿಯು ಹೊರಟೇಬಿಟ್ಟಿತು.

ವಾಸುವು ನಾಣಿಯು ಕಣ್ಣಿಗೆ ಕಾಣುವ ವರೆಗೂ ನೋಡುತ್ತ ನಿಂತಿದ್ದು ಮನೆಗೆ ಹಿಂತಿರುಗಿದನು.

ನಾರಾಯಣನು ಮನೆಗೆ ಬಂದನು. ಮೈಸೂರಿನ ವೃತ್ತಾಂತವನ್ನೇನೂ ತಾಯಿಗೆ ವಿವರವಾಗಿ ಹೇಳಲಿಲ್ಲ. ತಾಯಿಯು, " ಮಗೂ ! ಗಂಗಾಧರರಾಯರೇನು ಹೇಳಿದರು ? "

" ಮೆಡಿಕಲ್ ಕಾಲೇಜಿಗೆ ಸೇರಬೇಕೆಂದು ಒತ್ತಾಯಪಡಿಸಿದರು. "

" ಆ ಕಾಲೇಜಿಗೆ ಸೇರಿ ಡಾಕ್ಟರಾದರೆ ಚೆನ್ನಾಗಿರುತ್ತೆ. "

" ಹೌದಮ್ಮಾ, ಚೆನ್ನಾಗಿರುತ್ತೆ. ಐದು ವರ್ಷಗಳು ಓದಬೇಕು. ಬಹಳ ಹಣ ಖರ್ಚಾಗುತ್ತೆ. "

" ಏನು ಮಾಡುವುದು. ನಮ್ಮ ಬಡತನ ಹಾಗಿದೆ. ಯಾರೂ ಸಹಾಯ ಮಾಡುವುದಿಲ್ಲ. " ಎಂದು ಪಾರ್ವತಮ್ಮನು ನಿಟ್ಟುಸಿರು ಬಿಟ್ಟಳು.

ನಾಣಿಯು, " ಹಾಗಲ್ಲವಮ್ಮಾ ಗಂಗಾಧರರಾಯರು ಐಶ್ವರ್ಯವಂತರು. ಅವರ ಮನೆಯಲ್ಲೇ ನನ್ನನ್ನು ಇಟ್ಟುಕೊಳ್ಳುವುದಾಗಿ ಹೇಳಿದರು. ಎಲ್ಲಾ ಖರ್ಚನ್ನೂ ಅವರೇ ವಹಿಸುವುದಾಗಿ ಹೇಳಿದರು. ಅವರ ಮನೆಯವರೆಲ್ಲಾ ಬಹಳ ಒಳ್ಳೆಯವರು. "

ಪಾರ್ವತಮ್ಮನು ಸಂತೋಷದಿಂದ " ಮತ್ತೇನು ಬೇಕು. ನೀನು ಹೋಗಿ ಆ ಕಾಲೇಜಿಗೆ ಸೇರು, ಮುಂದಕ್ಕೆ ಬರುತ್ತಿ " ಎಂದರು.

" ಹೌದಮ್ಮಾ! ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುವವರಾರು ? ಇದೇನು ಮಾತು—ಆಗಹೋಗದ ಮಾತು. "

" ಮಗು ! ನಮ್ಮ ಯೋಗಕ್ಷೇಮವೇನು ದೇವರು ನೋಡಿಕೊಳ್ಳುತ್ತಾನೆ. ನೀನು ಯೋಚಿಸಬೇಡ ; ಮೈಸೂರಿಗೆ ಹೋಗಿ ಓದಿಕೋ. "

" ಇಲ್ಲವಮ್ಮಾ ಇಲ್ಲ ! ನಾನು ಎಂ.ಎಸ್‌ಸಿ.ಗೆ ಓದುವುದನ್ನು ನಿರ್ಧರಿಸಿದ್ದೇನೆ. ನೀನು ಮತ್ತೇನೂ ಹೇಳಬೇಡ. ನಿನ್ನ ಆಶೀರ್ವಾದವಿದ್ದರೆ ಹೇಗೋ

ಮುಂದಕ್ಕೆ ಬರುತ್ತೇನೆ. ” ಪಾರ್ವತಮ್ಮನು ಕಣ್ಣೊರಸಿಕೊಳ್ಳುತ್ತಾ ಹೊರಟು ಹೋದಳು.

ಕಾಲೇಜು ಬಾಗಿಲು ತೆಗೆಯುತ್ತಲೇ ನಾರಾಯಣನು ಎಂ.ಎಸ್‌ಸಿ. ತರಗತಿಗೆ ಸೇರಿ ವ್ಯಾಸಂಗವನ್ನು ಮುಂದುವರಿಸಿದನು. ನಾರಾಯಣನು ಹೈಸ್ಕೂಲಿನಲ್ಲಿ ಓದುವ ಹುಡುಗರಿಗೆ ಮನೆಯಲ್ಲಿ ಪಾಠ ಹೇಳಲು ಉಪಕ್ರಮಿಸಿದನು. ಅದರಿಂದ ತಿಂಗಳಿಗೆ ಐವತ್ತು ರೂಪಾಯಿಗಳು ಬರುತ್ತಿತ್ತು. ಅದು ಮನೆಯ ಖರ್ಚಿಗೆ ಉಪಯೋಗವಾಗುತ್ತಿತ್ತು. ಸಾಲದೆ, ಕೊಂಚಕೊಂಚವಾಗಿ ಸಾಲಕ್ಕೂ ಪ್ರಾರಂಭವಾಯಿತು. ಶ್ಯಾಮಲೆಯೂ ಕಾಲೇಜಿಗೆ ಹೋಗುತ್ತಿದ್ದಳು.

ಮದುವೆಯ ಕಾಲವು ಸಮೀಪಿಸುತ್ತ ಬಂತು. ಕಮಲಮ್ಮನವರು ಮದುವೆಯನ್ನು ನಿಶ್ಚಯ ಮಾಡಬೇಕೆಂದು ಗಂಗಾಧರರಾಯರನ್ನು ಒತ್ತಾಯಪಡಿಸುತ್ತಿದ್ದಳು. ಗಂಗಾಧರನು, ನಾರಾಯಣನ ವಿಚಾರವೇನು ? ಅವನು ಮದುವೆಗೆ ಒಪ್ಪಿದನೇ ಇಲ್ಲವೇ ? ನಾರಾಯಣನು ಮೈಸೂರಿನಿಂದ ಹೊರಡುವ ವರೆಗೆ ಅಸಮ್ಮತಿಯನ್ನು ಸೂಚಿಸಲಿಲ್ಲ. ಮೆಡಿಕಲ್ ಪರೀಕ್ಷೆಗೆ ಓದುವುದು ಅವನಿಗೆ ಇಷ್ಟವಿಲ್ಲದೇ ಇರಬಹುದು. ಅದು ಅವನ ಇಷ್ಟ—ಎಂದು ಆಲೋಚಿಸಿದನು. ಬೆಂಗಳೂರಿಗೆ ಹೋಗಿ ಬರುವುದೇ ಉತ್ತಮವೆಂದು ನಿರ್ಧರಿಸಿಕೊಂಡನು

ಮಾರನೆಯ ದಿನವೇ ಮೈಸೂರಿನಿಂದ ಬೆಂಗಳೂರಿಗೆ ಬಂದನು. ಮಾಡರ್ನ್ ಹೋಟೆಲಿನಲ್ಲಿ ಇಳಿದುಕೊಂಡು, ಕಾಫೀ ಕುಡಿದು ಜಟಕಾ ಬಂಡಿಯಲ್ಲಿ ಕುಳಿತು ಮಲ್ಲೇಶ್ವರದಲ್ಲಿರುವ ನಾರಾಯಣನ ಮನೆಗೆ ಬಂದನು. ನಾರಾಯಣನು ಜಗಲಿಯ ಮೇಲೆ ಹುಡುಗರಿಗೆ ಪಾಠ ಹೇಳುತ್ತಿದ್ದನು. ಗಂಗಾಧರರಾಯರನ್ನು ಮರ್ಯಾದೆಯಿಂದ ಸ್ವಾಗತಿಸಿ ಹಜಾರದಲ್ಲಿ ಚಾಪೆಯ ಮೇಲೆ ಕೂರಿಸಿದನು. ಗಂಗಾಧರರಾಯನು ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದನು. ಅಷ್ಟರಲ್ಲಿ ಪಾರ್ವತಮ್ಮನು ಕಾಫಿಯನ್ನು ಮಾಡಿ ಶ್ಯಾಮಲೆಯ ಕೈಯ್ಯಲ್ಲಿ ಕೊಟ್ಟು ಕಳಿಸಿದಳು. ನಾಣಿಯು ಗಂಗಾಧರರಾಯರಿಗೆ ಉಪಚಾರ ಹೇಳಿ ಕಾಫಿಯನ್ನು ಕೊಟ್ಟನು. ರಾಯರು ಕಾಫಿ ಕುಡಿದು ಮಾತಿಗೆ ಆರಂಭಿಸಿದರು.

“ ಏನಯ್ಯಾ ! ನಾಣಿ. ನೀನು ಎಂ.ಎಸ್‌ಸಿ. ಕ್ಲಾಸಿಗೆ ಸೇರಿದ್ದೀಯೋ ?”

" ಹೌದು. "

" ಒಳ್ಳೇದಾಯಿತು. ಇದು ಬೇಗ ಪೂರೈಸುತ್ತದೆ. "

ನಾಣಿಯು ತಲೆದೂಗಿದನು.

" ನಾನು ನಿಮ್ಮ ತಾಯಿಯವರೊಡನೆ ಮಾತನಾಡಲು ಬಂದಿದ್ದೇನೆ. ದಯವಿಟ್ಟು ಕರೆಯುವೆಯಾ ? "

ಈ ಮಾತು ಕೇಳಿ. ಒಳಗಡೆ ನಿಂತಿದ್ದ ಪಾರ್ವತಮ್ಮನಿಗೆ ಆಶ್ಚರ್ಯವಾಯಿತು. ನಾರಾಯಣನು ಒಳಗೆ ಹೋಗಿ ತಿಳಿಸಿದನು. ಪಾರ್ವತಮ್ಮನವರು ಹಜಾರಕ್ಕೆ ಬಂದು ನಿಂತುಕೊಂಡರು. ಗಂಗಾಧರರಾಯನು ಅವರೊಡನೆ ಸಾಧಾರಣವಾಗಿ ಯೋಗಕ್ಷೇಮವನ್ನು ವಿಚಾರಿಸಿ ಮದುವೆಯ ಮಾತನ್ನೆತ್ತಿದನು.

" ಪಾರ್ವತಮ್ಮನವರೇ ! ನಿಮ್ಮ ಮಗ ಬಹಳ ಬುದ್ಧಿವಂತ. ನಮ್ಮ ಮನೆಯವರಿಗೆಲ್ಲಾ ಅವನನ್ನು ನೋಡಿ ಬಹಳ ಸಂತೋಷವಾಗಿದೆ ನನ್ನ ಹಿರೇ ಮಗಳು ತಾರಾಗೆ ಹದಿನೆಂಟು ವರ್ಷ ವಯಸ್ಸಾಗಿದೆ. ಅವಳನ್ನು ನಾರಾಯಣನಿಗೆ ಕೊಟ್ಟು ಮದುವೆ ಮಾಡಬೇಕೆಂದು ನಾವೆಲ್ಲಾ ನಿಶ್ಚಯಿಸಿದ್ದೇವೆ. ನಾನೂ ನಿಮ್ಮ ಯಜಮಾನರೂ ಬಹಳ ಸ್ನೇಹಿತರು ಈ ಸಂಬಂಧ ಆದರೆ ಬಹಳ ಚೆನ್ನಾಗಿರುತ್ತದೆ. ದಯಮಾಡಿ ನೀವು ಒಪ್ಪಿಕೊಳ್ಳಬೇಕು "

ಪಾರ್ವತಮ್ಮನು ತಲೆತಗ್ಗಿಸಿಕೊಂಡು, " ನನ್ನದೇನಿದೆ ? ಹೆಣ್ಣುಹೆಂಗಸು ಹುಡುಗ ಒಪ್ಪಿದರೆ ಸರಿ " ಎಂದಳು.

" ನಿಮ್ಮ ಹುಡುಗ ಮೈಸೂರಿಗೆ ಬಂದಿದ್ದಾಗ ಹುಡುಗಿಯನ್ನು ಒಪ್ಪಿದ್ದಾನೆ. ಹುಡುಗಿಯೂ ನಾರಾಯಣನನ್ನೇ ಮದುವೆಯಾಗಬೇಕೆಂದು ಹಠ ಹಿಡಿದಿದ್ದಾಳೆ. ನೀವು ಒಪ್ಪಿದರೆ ಎಲ್ಲವೂ ಶುಭವಾಗುತ್ತದೆ. "

" ಹುಡುಗ ಒಪ್ಪಿದ್ದರೆ ಸರಿ. ನಾವು ಬಡವರು — ನೀವು ಭಾಗ್ಯವಂತರು."

ಗಂಗಾಧರನು, " ಬಡತನ, ಭಾಗ್ಯ ಇದೊಂದೂ ಶಾಶ್ವತವಲ್ಲ. ಗುಣ, ಶೀಲಗಳು ಮುಖ್ಯ. ನಮಗೂ ನಿಮ್ಮ ಮನೆಗೂ ಹಿಂದಿನ ಸಂಬಂಧಗಳು ಕಲತೇ ಇದೆ. ನಮ್ಮ ಸೋದರ ಮಾವಂದಿರ ಮಗನಿಗೇ ನಿಮ್ಮ ಸಹೋದರಿಯನ್ನು ಕೊಟ್ಟಿತ್ತು " ಎಂದು ಹೇಳಿದನು.

ಪಾರ್ವತಮ್ಮನು " ಅದೆಲ್ಲಾ ಸರಿ ! ಆದರೆ ಶ್ಯಾಮಲೆಯೂ ಪ್ರಾಪ್ತ

ವಯಸ್ಕಳಾಗಿದ್ದಾಳೆ. ಯಜಮಾನರು ಇದ್ದಾಗಲೇ ಮದುವೆ ಮಾಡಬೇಕೆಂದಿದ್ದರು. ನಮಗೆ ಆ ಭಾಗ್ಯವಿಲ್ಲ. ಈಗಲೂ ಹುಡುಗಿಯ ಲಗ್ನವಾಗದೆ ಹುಡುಗನ ಲಗ್ನ ಮಾಡಿದರೆ ಬಂಧುಗಳು ಆಡಿಕೊಳ್ಳುತ್ತಾರೆ. ನೀವು ಹಿರಿಯರು, ನೀವೇ ನೋಡಿ!"

ಗಂಗಾಧರನು "ಅದೆಲ್ಲಾ ಭಗವನ್ನಿಯಾಮಕ. ಅವಳಿಗೂ ಮದುವೆಯಾಗುತ್ತೆ. ಅದಕ್ಕೇನು! ಈಗ ನಮ್ಮ ಹುಡುಗಿಯ ಮದುವೆ ಮಾಘಮಾಸಕ್ಕೆ ಸಿದ್ಧ ಮಾಡಿಬಿಟ್ಟಿದ್ದೇವೆ. ನೀವು ದೊಡ್ಡ ಮನಸ್ಸುಮಾಡಿ ಒಪ್ಪಿಕೊಳ್ಳಬೇಕು."

ಪಾರ್ವತಮ್ಮನು ನಗು ಮುಖವನ್ನು ಮಾಡಿ ತಲೆ ತಗ್ಗಿಸಿದಳು. ನಾರಾಯಣನು ಮೌನವಾಗಿ ನಿಂತಿದ್ದನು. ಶ್ಯಾಮಲೆಯೂ ತಾಯಿಯ ಬಳಿಯಲ್ಲಿ ನಿಂತಿದ್ದಳು. ಗಂಗಾಧರರಾಯನು ಶ್ಯಾಮಲೆಯನ್ನು ಮಾತನಾಡಿಸಿದನು. ಕುಳಿತವರು ಮೇಲಕ್ಕೆದ್ದು "ಹೋಗಿ ಬರುತ್ತೇನಮ್ಮಾ, ಒಳ್ಳೆಯ ದಿನ ನೋಡಿ ಲಗ್ನಪತ್ರಿಕೆ ಮಾಡೋಣ" ಎಂದು ಹೇಳಿ ಹೊರಟನು.

ನಾರಾಯಣನೂ ಅವರ ಹಿಂದೆ ಹೋದನು. ನಾರಾಯಣನ ಕಡೆ ತಿರುಗಿ "ನಾಣಿ, ಬಾ! ನಾನು ಹೋಟಲಿನಲ್ಲಿ ಇಳಿದಿದ್ದೇನೆ. ಭಾನುವಾರವಾಗಿದೆ. ಬಾ, ಅಲ್ಲಿಯ ವರೆಗೆ ಹೋಗಿಬರೋಣ" ಎಂದು ಕರೆದನು. ನಾಣಿಯೂ ಅವನ ಜೊತೆಯಲ್ಲಿ ಹೊರಡಲು ಸಿದ್ಧನಾದನು. ಜಟಕಾ ಬಂಡಿಯಲ್ಲಿ ಇಬ್ಬರೂ ಹೋಗಿ ಕುಳಿತರು. ಗಂಗಾಧರನು ನಾಣಿಯ ಕಾಲೇಜಿನ ವ್ಯಾಸಂಗ, ಶ್ಯಾಮಲೆಯ ಓದು ಇವುಗಳನ್ನು ವಿಚಾರಿಸಿದನು. ಮಾತಿನ ಮಧ್ಯೆ ಗಂಗಾಧರನು, "ಜೀವನಕ್ಕೆ ಏನು ಮಾಡುತ್ತೀರಿ?" ಎಂದು ಕೇಳಿದನು.

ನಾಣಿಯು ನಗುತ್ತಾ "ಅದೇ ದೊಡ್ಡ ಪ್ರಶ್ನೆ. ಹೇಗೋ ನಡೆಯುತ್ತಿದೆ ಅದೇ ಕಷ್ಟ" ಎಂದನು.

ಗಂಗಾಧರನು, "ಹೌದು ಈ ಕಾಲದಲ್ಲಿ ಜೀವನದ ಪ್ರಶ್ನೆಯೇ ದೊಡ್ಡದು. ಆದರೂ ಹೇಗೋ ಆಗುತ್ತೆ. ನೀನು ವಿದ್ಯಾವಂತನಾಗಿದೀಯೆ. ಎಲ್ಲಿಯಾದರೂ ಶಿಫಾರಸ್ಸು ಮಾಡಿ ಒಳ್ಳೆಯ ಕೆಲಸ ಕೊಡಿಸುತ್ತೇನೆ" ಎಂದನು. ಆ ಮಾತು ಅಲ್ಲಿಗೇ ಪೂರೈಸಿತು. ಗಾಡಿಯು ಮಾಡರ್ನ್ ಹೋಟೆಲ್ ಬಾಗಿಲಿನಲ್ಲಿ ನಿಂತಿತು. ಇಬ್ಬರೂ ಗಾಡಿಯಿಂದ ಇಳಿದರು. ಮಹಡಿಯ ಮೇಲಿನ ರೂಮಿನಲ್ಲಿ ಹೋಗಿ ಕುಳಿತುಕೊಂಡರು.

ಗಂಗಾಧರನು ನಾಣಿಯನ್ನು ಕುರಿತು, " ನಾಣೀ ! ಇಲ್ಲಿಯೇ ಊಟ ಮಾಡಬಹುದಲ್ಲಾ ? " ಎಂದನು.

ನಾಣಿಯು, " ಇಲ್ಲ ರಾಯರೇ, ನಾನು ಮನೆಗೇ ಹೋಗಬೇಕು. ನೀವು ದೊಡ್ಡವರು. ನಮ್ಮ ತಂದೆಯವರ ಸ್ನೇಹಿತರು. ನಿಮಗೊಂದು ಮಾತನ್ನು ಹೇಳಬೇಕಾಗಿದೆ " ಎಂದನು.

" ಹೇಳು ನಾಣಿ! ಏನೂ ಸಂಕೋಚಪಟ್ಟುಕೊಳ್ಳಬೇಡ ! "

" ಏನೂ ಇಲ್ಲ. ಅದು ನನ್ನ ಮದುವೆಯ ಮಾತು. ತಾವು ನಮ್ಮ ತಾಯಿಯವರೊಂದಿಗೆ ಹೇಳಿದ್ದನ್ನೆಲ್ಲಾ ಕೇಳಿದೆ. ನಾನು ತಮ್ಮ ಮನೆಗೆ ಬಂದಿದ್ದಾಗಲೇ ಆ ಮಾತು ಸ್ಪಷ್ಟವಾಗಿತ್ತು. ನಾನು ಈಗ ಮದುವೆಯಾಗುವುದು ಸರಿಯಲ್ಲ! ಅದು ಸಾಧ್ಯವೂ ಇಲ್ಲ. "

ಗಂಗಾಧರರಾಯನು ಗಾಬರಿಯಿಂದ, " ಇದೇನು ಎಲ್ಲಾ ನಿಶ್ಚಯವಾಗಿದೆಯಲ್ಲಾ, ನೀನು ಹುಡುಗಿಯನ್ನು ಒಪ್ಪಲಿಲ್ಲವೇ ? " ಎಂದು ಕೇಳಿದನು.

" ಚೆನ್ನಾಗಿದ್ದಾಳೆ. ಆದರೆ ನನ್ನ ಈ ಸ್ಥಿತಿಯಲ್ಲಿ ಮದುವೆಯಾಗುವಂತಿಲ್ಲ. "

" ದೊಡ್ಡವರು ಹೇಳಿದ್ದನ್ನು ಕೇಳಬೇಕು. ನಿನ್ನ ಸ್ಥಿತಿ ಏನಾಗಿದೆ. ಒಳ್ಳೆಯ ವಿದ್ಯಾವಂತ. ಯಾವ ದೇಶಕ್ಕೆ ಹೋದರೂ ಜೀವನ ಮಾಡಬಲ್ಲೆ. ನಿನಗೇನು ಕಷ್ಟ ? "

" ರಾಯರೇ ! ಸಂಸಾರದ ಕಷ್ಟಗಳು ಬೇಕಾದಷ್ಟಿವೆ ಯೋಗ್ಯತೆಯಿದ್ದರೆ ಸಾಲದು. ನನ್ನಂತೆ ಯೋಗ್ಯತೆ ಸಂಪಾದಿಸಿರುವ ಎಷ್ಟೋ ಮಂದಿ ತರುಣರು ಜೀವನಕ್ಕಿಲ್ಲದೇ ಅಲೆಯುತ್ತಿದ್ದಾರೆ. ನಾನು ಏಕಾಕಿಯಲ್ಲ. ತಾಯಿ, ತಂಗಿ ಇಬ್ಬರು ಇದ್ದಾರೆ. ತಮ್ಮ ಮಗಳನ್ನು ಮದುವೆಯಾಗಿ ಇಲ್ಲಿ ತಂದಿಟ್ಟುಕೊಂಡರೆ ನಾನು ಹೇಗೆ ತಾನೇ ಈ ಸಂಸಾರ ನಿರ್ವಹಣ ಮಾಡಲಾದೀತು. ಯಾರಾದರೂ ಪುಣ್ಯವಂತರನ್ನು ನೋಡಿ ನಿಮ್ಮ ಮಗಳಿಗೆ ಲಗ್ನಮಾಡಿ. ಹುಡುಗಿಯು ಸುಖವಾಗಿ ಬದುಕಲಿ " ಗಂಗಾಧರರಾಯನಿಗೆ ಮನಸ್ಸು ಒಡೆದುಹೋಯಿತು. ಕೋಪ ಬಂತು. ಹಾಗೆಯೇ ತಡೆದುಕೊಂಡು " ನಾಣಿ ! ನೀನು ಹುಡುಗ. ಚೆನ್ನಾಗಿ ಯೋಚನೆ ಮಾಡು. ನಿಮ್ಮ ತಾಯಿಯವರೊಡನೆಯೂ ಆಲೋಚನೆ ಮಾಡು. ಭಗವದಿಚ್ಛೆ ಇದ್ದಂತಾಗುವುದು " ಎಂದನು.

ನಾರಾಯಣನು ವಂದನೆ ಮಾಡಿ ಮನೆಗೆ ಹೊರಟುಹೋದನು.

ಮನೆಗೆ ಹೋಗಿ ತಾಯಿಯೊಡನೆ ಎಲ್ಲಾ ಸಮಾಚಾರಗಳನ್ನೂ ತನ್ನ ನಿರ್ಧಾರವನ್ನೂ ತಿಳಿಸಿದನು. ಪಾರ್ವತಮ್ಮನವರ ಮನಸ್ಸು ಆ ಹುಡುಗಿಯು ತನ್ನ ಮಗನಿಗೆ ಮದುವೆಯಾದರೂ ಆಗಲಿ ಎಂದಿತ್ತು. ಆದರೆ ಮಗನ ನಿರ್ಧಾರವು ಸರಿಯೆಂದು ಭಾವಿಸಿದಳು.

ಗಂಗಾಧರರಾಯನು ಮೈಸೂರಿಗೆ ಹಿಂದಿರುಗಿ ಹೋಗಿ ಎಲ್ಲ ಸಂಗತಿಯನ್ನೂ ತನ್ನ ಹೆಂಡತಿಗೆ ತಿಳಿಸಿದನು. ಮದುವೆಯ ವಿಷಯದಲ್ಲಿ ಮನಸ್ಸನ್ನು ಖಚಿತ ಮಾಡಿಕೊಂಡಿದ್ದ ಕಮಲಮ್ಮನವರಿಗೆ ಆಶಾಭಂಗವಾಯಿತು. ಕಮಲಮ್ಮನ ಮನಸ್ಸಿನಲ್ಲಿ, ಆ ಹುಡುಗನನ್ನು ಬಿಡಲು ಇಷ್ಟವಿರಲಿಲ್ಲ. ಹುಡುಗನೂ ತಾಯಿಯೂ ಸೇರಿ ವರದಕ್ಷಿಣೆಯನ್ನು ವಸೂಲು ಮಾಡಬೇಕೆಂದು ಆಲೋಚಿಸಿರಬಹುದು ; ವರದಕ್ಷಿಣೆ ಕೊಟ್ಟರೂ ಬಾಧಕವಿಲ್ಲ. ಹುಡುಗಿಗೆ ತಕ್ಕ ವರ. ಆದ್ದರಿಂದ ಆ ಪುರೋಹಿತ ರಾಮಾಶಾಸ್ತ್ರಿಯನ್ನು ಹಿಡಿದು ಈ ಮದುವೆಯನ್ನು ಸಾಧಿಸಲೇಬೇಕು, ಎಂದು ನಿರ್ಧಾರ ಮಾಡಿಕೊಂಡಳು.

೬

ನಾರಾಯಣನಿಗೆ ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. ಮುಂದೇನು ಮಾಡಬೇಕೆಂಬುದು ದೊಡ್ಡ ಸಮಸ್ಯೆಯಾಯಿತು. ೧೯೪೨. ಮಹಾತ್ಮಾ ಗಾಂಧಿಯವರಿಗೂ ಬ್ರಿಟಿಷ್ ಸರ್ಕಾರಕ್ಕೂ ಸಂಧಿಯಾಗುವುದೋ ಮುರಿದು ಬೀಳುವುದೋ ಎಂಬುದನ್ನು ಇಡೀ ಪ್ರಪಂಚವೇ ನಿರೀಕ್ಷಿಸುತ್ತಿತ್ತು. ಹೀಗೆ ತಳಮಳಿಸುತ್ತಾ, "ಕ್ವಿಟ್ ಇಂಡಿಯಾ" ಚಳುವಳಿಯು ಬಂದೇ ಬಿಟ್ಟಿತು. ವಿದ್ಯಾರ್ಥಿಗಳು ಸಭೆಗಳನ್ನು ಮಾಡಲಿಲ್ಲ. ಅಂತರಂಗ ಚಿತಾವಣೆಯಿಲ್ಲ. ಕಾಂಗ್ರೆಸ್ಸಿನ ಮುಖಂಡರಿಗೂ ವಿದ್ಯಾರ್ಥಿಗಳಿಗೂ ಸಂಬಂಧವೇ ಇರಲಿಲ್ಲ. ಇದ್ದಕ್ಕಿದ್ದಂತೆ ವಿದ್ಯಾರ್ಥಿಗಳ ಚಳುವಳಿಯು ಜ್ವಾಲಾಮುಖಿಯಂತೆ ಎದ್ದು ಬಿಟ್ಟಿತು. ಆ ಕಾಲದಲ್ಲಿ ಬೆಂಗಳೂರು ನಗರ ಯುದ್ಧಭೂಮಿಯಂತೆ ಕಳಕಳಿಸಿತು. ಎಲ್ಲೆಲ್ಲಿಯೂ ಗುಂಡುಹಾರಿದುವು. ಬಿಳಿಯ ಸೈನಿಕರು ನಗರವನ್ನೆಲ್ಲಾ ಆಕ್ರಮಿಸಿದರು.

ಆ ಸಮಯದಲ್ಲಿ ಒಂದು ಘಟನೆಯು ನಡೆಯಿತು. ಬೆಂಗಳೂರು ನ್ಯಾಷನಲ್ ಸ್ಕೂಲಿನ ಮುಂದೆ ಪೋಲೀಸರು ಲಾಠಿ ಛಾರ್ಜು ಮಾಡಿದರು. ಗುಂಡುಹಾರಿತು. ವಿದ್ಯಾರ್ಥಿಗಳ ಗುಂಪಿನಲ್ಲೊಬ್ಬ ಹುಡುಗನು ಆರ್ತನಾದ ಮಾಡುತ್ತಾ ಕೆಳಗೆ ಬಿದ್ದನು. ದೂರದಲ್ಲಿ ನೋಡುತ್ತಾ ನಿಂತಿದ್ದ ನಾರಾಯಣನು ಗುಂಪಿನಲ್ಲಿ ನುಗ್ಗಿ ಆ ಹುಡುಗನನ್ನು ಎರಡು ತೋಳುಗಳಲ್ಲಿಯೂ ಎತ್ತಿಕೊಂಡನು. ಪೋಲೀಸ್ ಅಧಿಕಾರಿಯು ಆ ಹುಡುಗನನ್ನು ತಮ್ಮ ವಶಕ್ಕೆ ಬಿಡಬೇಕೆಂದು ಕೇಳಿದನು. ಅದಕ್ಕೆ ನಾರಾಯಣನು "ಏಕೆ ಕೊಡಬೇಕು? ನಿಮ್ಮ ಕೈಗೆ ಕೊಟ್ಟರೆ ಅವನು ಸತ್ತು ಹೋಗುತ್ತಾನೆ. ನಾನು ನಿಮ್ಮ ವಶಕ್ಕೆ ಕೊಡುವುದಿಲ್ಲ." ಎಂದು ಉತ್ತರ ಹೇಳಿದನು.

"ಆ ಹುಡುಗನು ನಿನಗೇನಾಗಬೇಕು?"

" ಏನೂ ಇಲ್ಲ. ಅವನ ರಕ್ಷಣೆಯ ಭಾರವನ್ನು ನಾನು ಹೊತ್ತಿದ್ದೇನೆ."

" ಪೋಲೀಸು ಅಧಿಕಾರಿಯು ಆ ಹುಡುಗನನ್ನು ಎಳೆದುಕೊಳ್ಳುವುದಕ್ಕೆ ಪ್ರಯತ್ನಿಸಿದನು. ನಾರಾಯಣನು ಬಿಡಲಿಲ್ಲ. ಇತರ ಹುಡುಗರು ಮುತ್ತಿಕೊಂಡು ಗೊಂದಲವೆಬ್ಬಿಸಿದರು. ಈ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಪೋಲೀಸು ಸೂಪರಿಂಟೆಂಡೆಂಟರು ಬಂದರು. ಅವರು ಆ ಗದ್ದಲವನ್ನು ಸಮಾಧಾನಪಡಿಸುತ್ತಿದ್ದರು. ಹು ಡು ಗ ರು ದೂರದಲ್ಲಿ ಕೂಗುತ್ತಿದ್ದರು. ಸೂಪರಿಂಟೆಂಡೆಂಟರು ನಾರಾಯಣನ ಕೈ ಹಿಡಿದುಕೊಂಡು, " ಏನಯ್ಯಾ ಇದು ? " ಎಂದು ಕೇಳಿದರು.

ನಾರಾಯಣನು " ನೋಡಿ ! ತಲೆಯೊಡೆದು ರಕ್ತ ಸೋರುತ್ತಿದೆ. ಆ ಅಧಿಕಾರಿಯು ಈ ಹುಡುಗನನ್ನು ತನ್ನ ವಶಕ್ಕೆ ಕೊಡಬೇಕೆನ್ನುತ್ತಾನೆ. ನಾನು ಆಸ್ಪತ್ರೆಗೆ ಸಾಗಿಸುತ್ತೇನೆ. " ಎಂದು ಹೇಳಿದನು. ಪೋಲೀಸು ಅಧಿಕಾರಿಯು " ಈ ಹುಡುಗನಿಗೆ ಪೆಟ್ಟು ಬಿತ್ತು. ಇವನು ಆ ಹುಡುಗನನ್ನು ಎತ್ತಿಕೊಂಡು ಇಲ್ಲಿರುವ ಹುಡುಗರನ್ನೆಲ್ಲಾ ರೇಗಿಸುತ್ತಿದ್ದಾನೆ. ಈ ಪೆಟ್ಟುಬಿದ್ದ ಹುಡುಗನನ್ನು ಮೆರವಣಿಗೆ ಮಾಡುತ್ತಾರಂತೆ " ಎಂದನು.

ಭರಭರನೆ ಮಿಲಿಟರಿ ವ್ಯಾನುಗಳು ಬಂದುವು. ಮಾರ್ಕೆಟ್ ಚೌಕದಲ್ಲಿ ಬಹಳಗದ್ದಲವಾಗುತ್ತಿದೆಯೆಂದೂ ಸಮಾಚಾರ ಬಂತು. ಸಿಟಿ ಪೋಸ್ಟಾಫೀಸಿಗೆ ಬೆಂಕಿ ಹಾಕಿದ್ದಾರಂತೆ, ಎಂಬ ವರ್ತಮಾನ ಹರಡಿತು. ಸೂಪರಿಂಟೆಂಡೆಂಟರಿಗೆ ಸಾವಧಾನ ತಪ್ಪಿತು. ಈ ಹುಡುಗನನ್ನು ಅರೆಸ್ಟ್‌ಮಾಡಿ ಎಂದು ಅಪ್ಪಣೆ ಮಾಡಿದರು. ಕೂಡಲೇ ಪೋಲೀಸು ಅಧಿಕಾರಿಗಳು ನಾರಾಯಣನನ್ನು ದಸ್ತಗಿರಿ ಮಾಡಿ ವ್ಯಾನಿಗೆ ತುಂಬಿದರು. ವ್ಯಾನು ಹೊರಟುಹೋಯಿತು.

ನಾರಾಯಣನು ರಾತ್ರಿಯಾದರೂ ಮನೆಗೆ ಬರಲಿಲ್ಲ. ಪಾರ್ವತಮ್ಮನ ಎದೆಯು ಬಡಿದುಕೊಳ್ಳಲಾರಂಭಿಸಿತು. ಅವಳು ಆ ದಿವಸವೆಲ್ಲಾ ಊಟ ಮಾಡಿರಲಿಲ್ಲ. ಆ ದಿನ ಬೆಂಗಳೂರಿನಲ್ಲೆಲ್ಲಾ ಅವಾಂತರಗಳು ಆಗಿ ಹೋಗಿದೆಯೆಂದು ಕಥೆಗಳು ಹಬ್ಬಿದುವು. ರಾತ್ರಿ ಸುಮಾರು ಒಂಭತ್ತು ಘಂಟೆಗೆ ರಾಮಾಶಾಸ್ತ್ರಿಯು ಮನೆಗೆ ಬಂದನು. ಪಾರ್ವತಮ್ಮನವರ ದೀನಾವಸ್ಥೆಯನ್ನು ನೋಡಿದನು. ಮೆಲ್ಲನೆ ದನಿಯಿಂದ " ನಾಣಿ ! ಮನೆಗೆ ಬರಲಿಲ್ಲವೇ ? " ಎಂದು ಪ್ರಶ್ನೆಮಾಡಿದನು.

ಪಾರ್ವತಮ್ಮನು ಗಾಬರಿಯಿಂದ, “ ಏನು ಸಮಾಚಾರ ? ” ಎಂದು ಕೇಳಿದಳು. ರಾಮಾಶಾಸ್ತ್ರಿಯು “ ಪೋಲೀಸನವರು ತಂಡ ತಂಡವಾಗಿ ಹುಡುಗರನ್ನು ದಸ್ತಗಿರಿ ಮಾಡಿದ್ದಾರೆ. ಲಾಠೀ ಛಾರ್ಜು ಮಾಡಿದ್ದಾರೆ. ಗುಂಡು ಹಾರಿಸಿದ್ದಾರೆ. ನಾಣಿಯೂ ಎಲ್ಲಿ ಸಿಕ್ಕಿಕೊಂಡಿರಬಹುದೋ ಎಂದು ಸಂದೇಹ ಬಂತು, ಇಲ್ಲಿಗೆ ಓಡಿ ಬಂದೆ ” ಎಂದನು.

ಪಾರ್ವತಮ್ಮ ಗೋಳೋ ಎಂದು ಅಳಲಾರಂಭಿಸಿದಳು. ಶ್ಯಾಮಲೆಯೂ ಅತ್ತಳು. ರಾಮಾಶಾಸ್ತ್ರಿಯು ಎಷ್ಟೋ ಸಮಾಧಾನ ಮಾಡಿದನು. ಕೊನೆಗೆ ದೇವರು “ ನಿಮಗೆ ಅಂಥಾ ಕಷ್ಟ ಕೊಡುವುದಿಲ್ಲ. ನೀವು ಪೇಚಾಡ ಬೇಡಿ, ಒಳ್ಳೆಯದಾಗುತ್ತದೆ ” ಎಂದು ಹೇಳಿ ಹೊರಟುಹೋದನು.

ರಾತ್ರಿ ಹೊತ್ತು ಮೀರಿತು, ಅರ್ಧ ರಾತ್ರಿಯಾಯಿತು. ಪಾರ್ವತಮ್ಮನು ಅಳುತ್ತಲೇ ಇದ್ದಳು. ಒಂದೆರಡು ಬಾರಿ ಜ್ಞಾನ ತಪ್ಪಿದಂತಾಯಿತು. ಶ್ಯಾಮಲೆಯ ಶರೀರವೆಲ್ಲವೂ ನಡುಗುತ್ತಿತ್ತು. ಅವಳು ಅತ್ತು ಅತ್ತು ಮಲಗಿದಳು. ಬೆಳಕು ಹರಿಯಿತು. ಶ್ಯಾಮಲೆಯು ಎದ್ದು ತಾಯಿಯ ಮುಖವನ್ನು ನೋಡಿದಳು. ತಾಯಿಯ ಮುಖದಲ್ಲಿ ಹುಚ್ಚಿನ ಚಿಹ್ನೆ ಕಂಡಿತು ! ಶ್ಯಾಮಲೆ ಆಪಾದ ಮಸ್ತಕ ಬೆವರಿದಳು. ಧೈರ್ಯ ತಂದುಕೊಂಡು ತನ್ನ ಕೋಣೆಗೆ ಹೋಗಿ ಬೇರೆ ಸೀರೆಯನ್ನುಟ್ಟುಕೊಂಡು ಹೊರಗೆ ಬಂದು, “ಅಮ್ಮಾ ಅಳಬೇಡ! ಧೈರ್ಯದಿಂದಿರು. ನಾನು ಅಣ್ಣನನ್ನು ಕರೆತರುತ್ತೇನೆ” ಎಂದು ಹೇಳಿ ಉತ್ತರವನ್ನು ನಿರೀಕ್ಷಿಸದೆಯೇ ಹೊರಟುಹೋದಳು.

ಪಾರ್ವತಮ್ಮನಿಗೆ ಕಣ್ಣು ಕಟ್ಟಿ ಕಾಡಿನಲ್ಲಿ ಬಿಟ್ಟಂತಾಯಿತು. ಆಕೆಗೆ ತನ್ನದೆಂಬ ವಸ್ತುಗಳೆಲ್ಲಾ ಹಾರಿ ಹೋದಂತಾಯಿತು. ಅವಳು ನಿರ್ವಿಣ್ಣಳಾಗಿ ಕುಳಿತಳು.

ಶ್ಯಾಮಲೆಯು ಮನೆಯಿಂದ ಹೊರಟು, ಎಲ್ಲಿಗೆ ಹೋಗಬೇಕೆಂದು ಕ್ಷಣ ಹೊತ್ತು ಯೋಚಿಸಿದಳು. ಏನೂ ತೋರಲಿಲ್ಲ. ನೆಟ್ಟಗೆ ಸೆಂಟ್ರಲ್ ಜೈಲು ಬಾಗಿಲಿಗೆ ಹೋದಳು. ಅಲ್ಲೆಲ್ಲಾ ಮಿಲಿಟರಿ ಪಹರೆ ಇತ್ತು. ಶ್ಯಾಮಲೆಯು ಧೈರ್ಯವಾಗಿ ಹೆಬ್ಬಾಗಿಲಿಗೆ ಹೋದಳು. ಅಲ್ಲಿದ್ದ ಅಧಿಕಾರಿಯು “ಯಾರಮ್ಮಾ! ನೀನು ಇಲ್ಲಿಗೇಕೆ ಬಂದೆ ?” ಎಂದು ಕೇಳಿದರು. ಶ್ಯಾಮಲೆಯು “ ಈ ಜೈಲಿನಲ್ಲಿ

ನಮ್ಮಣ್ಣನು ಇದಾನೆಯೇ ಎಂದು ವಿಚಾರಿಸಲು ಬಂದೆ"

"ಅದೆಲ್ಲಾ ನಮಗೆ ಗೊತ್ತಿಲ್ಲ. ನೀನು ಪೋಲೀಸು ಐ. ಜಿ. ಆಫೀಸಿಗೆ ಹೋಗಿ ವಿಚಾರಿಸು. ತಿಳಿಯುಬಹುದು."

ಶ್ಯಾಮಲೆಯು "ಆ ಆಫೀಸು ಇರುವುದೆಲ್ಲಿ?" ಎಂದು ಕೇಳಿದಳು. ಅಧಿಕಾರಿಯು ದಾರಿಯನ್ನು ಹೇಳಿದನು. ಶ್ಯಾಮಲೆಯು ಮಿಂಚಿನ ವೇಗ ದಿಂದ ಆ ಕಛೇರಿಯ ಕಡೆಗೆ ಹೊರಟಳು. ದಾರಿಯಲ್ಲಿ ಹೆಜ್ಜೆ ಹೆಜ್ಜೆಗೂ ಪೋಲೀಸರ ಕಾವಲಿತ್ತು. ಆದರೆ ಯಾರೂ ಈ ಹುಡುಗಿಯನ್ನು ತಡೆಯಲಿಲ್ಲ.

ಶ್ಯಾಮಲೆಯು ಐ. ಜಿ. ಆಫೀಸಿನ ಮುಂದೆ ಹೋಗಿ "ಇದೇ ಐ. ಜಿ. ಸಾಹೇಬರ ಕಛೇರಿಯೇನು?" ಎಂದು ಕೇಳಿದಳು.

ಪಹರೆಯವನು "ಏಕಮ್ಮಾ?" ಎಂದು ಪ್ರಶ್ನೆಮಾಡಿದನು.

"ನಾನು, ಸಾಹೇಬರ ಭೇಟಿ ಮಾಡಬೇಕು."

"ಈಗ ಐ. ಜಿ ಯವರಿಗೆ ಪುರುಸೊತ್ತಿಲ್ಲ. ಮಿನಿಸ್ಟರು ಬಂದಿದ್ದಾರೆ. ಅವರೊಡನೆ ಮಾತಾಡುತ್ತಿದ್ದಾರೆ." ಎಂದು ಪಹರೆಯವ ಆಕೆಯನ್ನು ತಡೆದ. "ಇಲ್ಲ! ಇಲ್ಲ! ನನ್ನನ್ನು ತಡೆಯ ಬೇಡಿ ಬಿಡಿ" ಎಂದು ಶ್ಯಾಮಲೆ ನುಗ್ಗು ವುದಕ್ಕೆ ಹೋದಳು. ಅಷ್ಟರಲ್ಲಿ ಆಫೀಸಿನ ಬಾಗಿಲು ತೆರೆಯಿತು. ಎದುರಿಗೆ ಸಿಲ್ಕು ಸೂಟನ್ನು ಧರಿಸಿದ ಕಲಾಪತ್ತು ರುಮಾಲಿನ ಪ್ರಸನ್ನ ಮುಖ ಮುದ್ರೆಯ ದೊಡ್ಡ ಮನುಷ್ಯರೊಬ್ಬರು ನಿಂತಿದ್ದರು. ಅವರು ಕೈ ಬೀಸಿದರು. ಪೋಲೀಸ ರೆಲ್ಲಾ ದೂರ ಸರಿದರು.

ಆ ಅಧಿಕಾರಿಗಳು ಮೃದುವಾಣಿಯಿಂದ "ನೀನಾರಮ್ಮ? ನಿನಗೇನು ಬೇಕು?" ಎಂದರು.

ಶ್ಯಾಮಲೆಯು ಗಾಬರಿಯಿಂದ ಗದ್ಗದ ಕಂಠದಿಂದ "ನಾನು ಐ. ಜಿ. ಸಾಹೇಬರ ಭೇಟಿಮಾಡಬೇಕು. ನೀವೇ ಐ. ಜಿ. ಸಾಹೇಬರೋ?" ಎಂದು ಕೇಳಿದಳು. ಅವರು ಮುಗುಳು ನಗುವನ್ನು ನಗುತ್ತಾ, "ನಾನು ಐ. ಜಿ. ಸಾಹೇಬರಲ್ಲ. ನಾನೊಬ್ಬ ಸರಕಾರಿ ಅಧಿಕಾರಿ. ಅಗೋ, ಅವರು ಐ. ಜಿ. ಸಾಹೇಬರು. ನಿನಗೇನು ಬೇಕು ಹೇಳು. ಈ ಕುರ್ಚಿಯ ಮೇಲೆ ಕುಳಿತುಕೋ! ಗಾಬರಿಪಡಬೇಡಮ್ಮ" ಎಂದು ಹೇಳಿದರು.

ಶ್ಯಾಮಲೆಯು “ ನಮ್ಮಣ್ಣನು ಎಲ್ಲಿದ್ದಾನೆ ? ಬದುಕಿದ್ದಾನೆಯೇ ” ಎಂದು ಕೇಳಿದಳು. ಆ ಅಧಿಕಾರಿಗಳು ಮಿನಿಸ್ಟರ್ ರಾಮನಾಥನ್. ಅವರಿಗೆ ಕಣ್ಣುಗಳಲ್ಲಿ ನೀರು ತುಂಬಿತು. ಅವರು ಶ್ಯಾಮಲೆಯ ಕೈಹಿಡಿದು ಕುರ್ಚಿಯ ಮೇಲೆ ಕೂರಿಸಿದರು. “ ನಿಮ್ಮಣ್ಣನ ಹೆಸರೇನಮ್ಮ ?” ಎಂದು ಕೇಳಿದರು.

“ ನಮ್ಮಣ್ಣನ ಹೆಸರು, ನಾರಾಯಣ. ಎಂ. ಎಸ್‌ಸಿ. ಪಾಸ್ ಮಾಡಿದ್ದಾನೆ. ನಿನ್ನೆ ಬೆಳಗ್ಗೆ ಮನೆ ಬಿಟ್ಟು ಹೋದವನು ಮನೆಗೆ ಬಂದಿಲ್ಲ. ನಮ್ಮ ತಂದೆಯಿಲ್ಲ. ತಾಯಿಯು ದುಃಖಿಸುತ್ತಿದ್ದಾಳೆ. ಪೋಲೀಸರು ಲಾಠಿ ಛಾರ್ಜು ಮಾಡಿದ್ದಾರಂತೆ; ಗುಂಡು ಹಾರಿಸಿದ್ದಾರಂತೆ. ನಮ್ಮಣ್ಣನು ಬದುಕಿದ್ದಾನೋ ಸತ್ತು ಹೋದನೋ ....” ಎನ್ನುತ್ತಾ ಗಟ್ಟಿಯಾಗಿ ಅಳ ತೊಡಗಿದಳು.

“ ಅಳಬೇಡಮ್ಮಾ ನಿಮ್ಮ ಅಣ್ಣ ಬದುಕಿದ್ದಾನೆ. ಈಗಲೇ ವಿಚಾರಿಸಿ ಹೇಳುತ್ತೇನೆ. ಸ್ವಲ್ಪ ಸಮಾಧಾನ ತಂದುಕೋ !” ಎಂದು ಹೇಳಿ ಕುರ್ಚಿಯ ಮೇಲೆ ಮಂತ್ರಿಗಳು ಕುಳಿತು ಕೊಂಡು, ಐ. ಜಿ. ಯವರಿಗೆ ಸನ್ನೆ ಮಾಡಿದರು. ಐ. ಜಿ. ಯವರು ಎರಡು ಮೂರು ಕಡೆ ಫೋನ್ ಮಾಡಿದರು. ಹುಡುಗಿಯ ಹತ್ತಿರ ಬಂದು, “ ನಿಮ್ಮ ಅಣ್ಣನ ಹೆಸರು ಬಿ. ಎಸ್. ನಾರಾಯಣ ಅಲ್ಲವೇ?” ಎಂದರು.

“ ಹೌದು !”

“ ಅವರು ನಿನ್ನೆ ದಸ್ತಗಿರಿಯಾಗಿದ್ದಾರೆ. ಜೈಲಿನಲ್ಲಿದ್ದಾರೆ. ”

ಶ್ಯಾಮಲೆಯು ಮಂತ್ರಿಗಳ ಮುಂದೆ ನಿಂತುಕೈಮುಗಿದು, “ನಮ್ಮಣ್ಣನು ಕಾಂಗ್ರೆಸ್ ಸೇರಿದವನಲ್ಲ. ಅವನೇನೂ ತಪ್ಪುಮಾಡಿಲ್ಲ. ಅವನನ್ನು ಬಿಟ್ಟು ಬಿಡಿ. ನಮ್ಮ ಅಮ್ಮನು ಬದುಕಿಕೊಳ್ಳುತ್ತಾಳೆ. ಕಾಪಾಡಿರಿ ” ಎಂದು ದೈನ್ಯದಿಂದ ಕೇಳಿಕೊಂಡಳು.

ಮಂತ್ರಿಗಳು, “ ಯಾರು ಕಾಂಗ್ರೆಸ್ಸಿನವರೋ ಯಾರು ಅಲ್ಲವೋ, ಯಾರು ತಪ್ಪಿತಸ್ಥರೋ ತಪ್ಪಿತಸ್ಥರಲ್ಲವೋ ಒಂದನ್ನೂ ಹೇಳಲಾಗುವುದಿಲ್ಲ. ಈ ಚಳುವಳಿಯು ಕಾಡುಕಿಚ್ಚು ಹಬ್ಬಿದಂತೆ ವ್ಯಾಪಿಸಿದೆ. ಇದನ್ನು ಮೊದಲು ಹತೋಟಿಗೆ ತರುವುದು ನಮ್ಮ ಕೆಲಸ. ಒಂದೆರಡು ದಿವಸಗಳಲ್ಲಿ ಹತೋಟಿಗೆ ಬರುತ್ತದೆ. ನಿಮ್ಮಣ್ಣನದೇನೂ ತಪ್ಪಿಲ್ಲದಿದ್ದರೆ ಬಿಟ್ಟುಬಿಡುತ್ತೇವೆ ” ಎಂದರು.

" ನಮ್ಮಣ್ಣನು ಬದುಕಿದ್ದಾನೆಂದು ನಾನು ಹೇಗೆ ನಂಬಲಿ ? "

" ನಾನು ಹೇಳುತ್ತೇನೆ, ನೀನು ನಂಬು. ನನಗೂ ನಿನ್ನಂತಹ ಮಗಳಿದ್ದಾಳೆ. "

" ನಿಮ್ಮ ಮಗನನ್ನೂ ಜೈಲಿನಲ್ಲಿಟ್ಟಿದ್ದಾರೇನು ?"

ಆ ಮಾತು ಕೇಳಿ ಮಂತ್ರಿಗಳು ಅವಾಕ್ಕಾದರು. ಅಷ್ಟರಲ್ಲಿ ಅವರಿಗೆ ಎಲ್ಲಿಂದಲೋ ಫೋನು ಬಂತು. " ಒಳ್ಳೆಯದು, ಹೊರಡಮ್ಮ, ನೀನು ನೆಟ್ಟಗೆ ಮನೆಗೆ ಹೋಗು ! " ಎಂದರು. ಶ್ಯಾಮಲೆಯು ಬಿಕ್ಕಿ ಬಿಕ್ಕಿ ಅಳುತ್ತಾ, "ನಮ್ಮ ಅಣ್ಣನನ್ನು ಒಂದು ಬಾರಿ ತೋರಿಸಲಿ, ನಾನು ಧೈರ್ಯದಿಂದ ಹೋಗುತ್ತೇನೆ " ಎಂದಳು. ರಾಮನಾಥನ್‌ರವರು ಸ್ವಲ್ಪ ಹೊತ್ತು ಯೋಚಿಸಿ, " ಆಗಲಿ ! ಈ ಹುಡುಗಿಯನ್ನು ಜೈಲಿಗೆ ಕಳಿಸಿ ಇವಳ ಅಣ್ಣನನ್ನು ತೋರಿಸಿ, ಮನೆಗೆ ಕಳಿಸಿರಿ " ಎಂದು ಐ. ಜಿ. ಯವರಿಗೆ ಹೇಳಿ ಹೊರಟುಹೋದರು.

ಐ. ಜಿ. ಸಾಹೇಬರು ಒಬ್ಬ ಪೋಲೀಸು ಅಧಿಕಾರಿಯನ್ನು ಕರೆದು ಅಪ್ಪಣೆ ಮಾಡಿದರು.

ಆ ಅಧಿಕಾರಿಯು ಶ್ಯಾಮಲೆಯನ್ನು ಒಂದು ವ್ಯಾನಿನಲ್ಲಿ ಕೂಡಿಸಿಕೊಂಡು ಹೋಗಿ ಜೈಲಿಗೆ ಕರೆದುಕೊಂಡು ಹೋದನು. ಸೂಪರಿಂಟೆಂಡೆಂಟರ ಆಫೀಸಿಗೆ ಕರೆದುಕೊಂಡು ಹೋಗಿ, ಅವರಿಗೆ ಮಂತ್ರಿಗಳ ಅಪ್ಪಣೆಯನ್ನು ತಿಳಿಸಿದನು. ಅವರಿಗೆ ಆಶ್ಚರ್ಯವಾಯಿತು. ಇಬ್ಬರಿಗೂ ಕುಳಿತುಕೊಳ್ಳುವಂತೆ ಹೇಳಿದರು. ಒಬ್ಬ ಜವಾನನ ಕೈಗೆ ಒಂದು ಚೀಟಿ ಬರೆದುಕೊಟ್ಟು ಕಳುಹಿಸಿದರು.

ಆ ಜವಾನ ಹತ್ತು ನಿಮಿಷಗಳೊಳಗಾಗಿ ನಾರಾಯಣನನ್ನು ಆಫೀಸಿಗೆ ಕರೆತಂದನು. ನಾರಾಯಣನು ಅಲ್ಲಿ ಶ್ಯಾಮಲೆಯನ್ನು ಕಂಡು ಆಶ್ಚರ್ಯಚಕಿತನಾದನು. ಶ್ಯಾಮಲೆಯು ಓಡಿಹೋಗಿ ನಾರಾಯಣನನ್ನು ಅಪ್ಪಿಕೊಂಡಳು. ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು. ನಾರಾಯಣನು ನಗುತ್ತಿದ್ದನು. " ಏಕೆ ಶ್ಯಾಮಲಾ ! ಏಕೆ ಅಳುತ್ತೀ ? ಇಲ್ಲಿಗೇಕೆ ಬಂದೆ ? ಹೇಗೆ ಬಂದೆ ? " ಎಂದು ಕೇಳಿದನು.

ಶ್ಯಾಮಲೆಯು " ಅಣ್ಣಾ ! ಊರಿನಲ್ಲೆಲ್ಲಾ ಗಲಾಟೆ. ನೀನು ಸತ್ತು ಹೋಗಿರಬಹುದೆಂದು ಅಮ್ಮ ಅಳುತ್ತಿದ್ದಾಳೆ. ನನಗೆ ಒಂದೂ ತೋರುವುದಿಲ್ಲ.

ನಾನು ಜೈಲಿನಲ್ಲೇ ಇದ್ದು ಬಿಡಲೇ ಎನಿಸಿಬಿಡುತ್ತಿದೆ. ಮಂತ್ರಿಗಳನ್ನು ಕೇಳಿ ಕೊಂಡೆ. ಅವರು ಕರುಣಾಳುಗಳಂತೆ ಕಾಣುತ್ತಾರೆ. ಅವರ ದಯದಿಂದಲೇ ನಿನ್ನನ್ನು ಕಣ್ಣಾರೆ ಕಂಡೆ" ಎಂದು ಹೇಳಿದಳು.

ನಾರಾಯಣನು "ನೀನು ಬಹಳ ಗಟ್ಟಿಗಿತ್ತಿ! ಮಂತ್ರಿಗಳನ್ನು ನೋಡುವ ಧೈರ್ಯ ಹೇಗೆ ಬಂದಿತೋ ದೇವರಿಗೆ ಗೊತ್ತು. ಒಳ್ಳೆಯದು! ನನಗೆ ಇಲ್ಲಿ ಏನೂ ಕಷ್ಟವಿಲ್ಲ. ಸುಖವಾಗಿದ್ದೇನೆ. ಅಮ್ಮನಿಗೆ ಹೇಳು! ಧೈರ್ಯದಿಂದ ಇರಿ, ಬಂದುಬಿಡುತ್ತೇನೆ" ಎಂದು ಸಮಾಧಾನ ಹೇಳಿದನು.

ಶ್ಯಾಮಲೆಯು ಸೂಪರಿಂಟೆಂಡೆಂಟರಿಗೆ ವಂದಿಸಿ ಹೊರಟಳು. ಜೈಲಿನ ಗೇಟು ದಾಟುತ್ತಲೇ ಪೋಲೀಸು ಅಧಿಕಾರಿಗೆ ವಂದಿಸಿ "ಬಹಳ ಉಪಕಾರ ಮಾಡಿದಿರಿ, ವಂದನೆಗಳು. ನಾನು ಮನೆಗೆ ಹೋಗುತ್ತೇನೆ" ಎಂದಳು.

ಅಧಿಕಾರಿಯು, "ಆಗಲಮ್ಮಾ! ನೀವು ವ್ಯಾನಿನಲ್ಲಿ ಕುಳಿತುಕೊಳ್ಳಿರಿ. ನಿಮ್ಮ ಮನೆಗೆ ಬಿಟ್ಟುಬರಬೇಕೆಂದು ಅಪ್ಪಣೆಯಾಗಿದೆ'' ಎಂದನು. ಶಾಮಲೆಯು ವ್ಯಾನ್ ಹತ್ತಿದಳು. ಅವಳು ಹೇಳಿದ ಗುರ್ತಿನ ಮೇಲೆ ವ್ಯಾನು ಅವರ ಮನೆಯ ಬಾಗಿಲಿನ ಮುಂದೆ ಬಂದು ನಿಂತಿತು. ಆ ಮೋಟಾರಿನ ಸದ್ದು ಕೇಳಿ ಪಾರ್ವತಮ್ಮನು ಹೊರ ಬಾಗಲಿಗೆ ಬಂದಳು. ಶ್ಯಾಮಲೆಯು ಮೋಟಾರಿನಿಂದ ಇಳಿಯುತ್ತಿದ್ದಳು.

ಅವಳು ನಸುನಗುತ್ತಾ ಮನೆಯೊಳಗೆ ಹೋಗಿ "ಅಮ್ಮಾ! ಅಣ್ಣನನ್ನು ನೋಡಿಕೊಂಡು ಬಂದೆ. ಅವನು ಸಂತೋಷವಾಗಿ ನಗುನಗುತ್ತಿದ್ದಾನೆ'' ಎಂದಳು. ಪಾರ್ವತಮ್ಮನ ಮುಖದಲ್ಲಿ ನಗುವಿನ ಬೆಳಕು ಮೂಡಿತು. "ಶ್ಯಾಮಲಾ! ನಾಣಿ ಎಲ್ಲಿದ್ದಾನೆ? ನಾಣಿ ಎಲ್ಲಿದ್ದಾನೆ? ನೀನು ಎಲ್ಲಿ ನೋಡಿದೆ? ಈ ಮೋಟಾರಿನಲ್ಲಿ ಯಾರು ನಿನ್ನನ್ನು ಕರೆತಂದವರು?" ಎಂದು ಕೇಳಿದಳು.

"ಅಣ್ಣಾ ಜೈಲಿನಲ್ಲಿದ್ದಾನೆ. ಇದು ಸರ್ಕಾರದ ವ್ಯಾನು" ಎಂದು ಹೇಳಿ ಶ್ಯಾಮಲೆ ತಾನು ಹೋಗಿ ಬಂದ ಕಥೆಯನ್ನೆಲ್ಲಾ ವಿವರಿಸಿ ಹೇಳಿದಳು. ಪಾರ್ವತಮ್ಮನಿಗೆ ಮಗ ಜೈಲಿನಲ್ಲಿದ್ದಾನೆಂದು ದುಃಖವಾದರೂ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು.

## ೭

ಒಂದು ತಿಂಗಳು ಕಳೆಯಿತು. ಎಲ್ಲವೂ ಶಾಂತವಾಗಿತ್ತು. ಶ್ಯಾಮಲೆಯೂ ಪಾರ್ವತಮ್ಮನೂ ನಾರಾಯಣನು ಇಂದು, ನಾಳೆ ಬರುವನೆಂದು ನಿರೀಕ್ಷಣೆ ಮಾಡಿದರು. ಶ್ಯಾಮಲೆಗೆ ಬಹಳ ಧೈರ್ಯ ಬಂದಿತ್ತು. ಅವಳು ಕಛೇರಿಗೆ ಹೋಗಿ ವಿಚಾರಿಸಿದಳು. ನಾರಾಯಣನಿಗೆ ಮೂರು ವರ್ಷಗಳ ಕಠಿಣ ಶಿಕ್ಷೆ ಯಾಗಿದೆಯೆಂದು ಆಗ ತಿಳಿಯಿತು. ತಾಯಿ ಮಕ್ಕಳಿಬ್ಬರೂ ಕೊರಗಿ ಕೊರಗಿ ದಿಕ್ಕು ಕಾಣದಾದರು.

ಮುಂದೇನು ಮಾಡಬೇಕು? ಎಂಬ ಸಮಸ್ಯೆಯು ಅವರಿಬ್ಬರನ್ನೂ ಪ್ರತಿದಿನವೂ ಬಾಧಿಸುತ್ತಿತ್ತು. ರಾಮಾಶಾಸ್ತ್ರಿಯೊಬ್ಬನೇ ಆ ಮನೆಗೆ ಸಹಾ ಯಕ. ಪಾರ್ವತಮ್ಮನು ಅವನೊಡನೆ ಯೋಚನೆ ಮಾಡಿದಳು. ರಾಮಾ ಶಾಸ್ತ್ರಿಯು ಆ ಮನೆಯನ್ನು ಯಾರಿಗಾದರೂ ಬಾಡಿಗೆಗೆ ಕೊಡಬೇಕೆಂದು ಸಲಹೆಯಿತ್ತನು. ಪಾರ್ವತಮ್ಮನು ಸರಿಯಾದವರು ಯಾರಾದರೂ ಸಿಕ್ಕಿದರೆ ಆಗಬಹುದೆಂದು ಹೇಳಿದಳು.

ಸುಬ್ರಹ್ಮಣ್ಯಶಾಸ್ತ್ರಿಗಳೆಂಬುವರು ದಕ್ಷಿಣ ದೇಶದವರು. ಅವರು ಮೈಸೂರು ಮಹಾರಾಜರವರ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ಆ ಪಾಠಶಾಲೆಯಲ್ಲಿ ಬ್ರಾಹ್ಮಣೇತರರನ್ನು ಸೇರಿಸಬೇಕೆಂಬ ಆಜ್ಞೆ ಬಂತು. ಅವರು ಶ್ರೀಮನ್ಮಹಾರಾಜರವರ ಭೇಟಿಮಾಡಿ ತಾವು ಆ ಆಜ್ಞೆಯನ್ನು ಪಾಲನೆ ಮಾಡ ಲಾಗುವುದಿಲ್ಲವೆಂದೂ ಪ್ರಾಚೀನ ಸಂಪ್ರದಾಯವನ್ನು ತಾವು ನಂಬಿದವರೆಂದೂ ಅರಿಕೆ ಮಾಡಿದರು; ತಮ್ಮ ಕೆಲಸಕ್ಕೆ ರಾಜೀನಾಮೆಯನ್ನು ಒಪ್ಪಿಸಿದರು. ಅವರು ಬೆಂಗಳೂರಿಗೆ ಬಂದು ಕೆಲವು ಗೃಹಸ್ಥರನ್ನು ಆಶ್ರಯಿಸಿ ವೇದಾಂತ ಪಾಠಕ್ಕೆ ಏರ್ಪಾಡು ಮಾಡಬೇಕೆಂದು ಪ್ರಯತ್ನಿಸಿದರು. ಅನೇಕರು ಸದ್ಗೃಹ ಸ್ಥರು ಸೇರಿ ಚಂದಾ ಹಾಕಿ ಅವರಿಗೆ ತಿಂಗಳಿಗೆ ಒಂದು ನೂರು ರೂಪಾಯಿಗಳ

ಸಂಭಾವನೆ, ಮನೆ ಬಾಡಿಗೆ ಮೂವತ್ತು ರೂಪಾಯಿಗಳನ್ನು ಕೊಡತಕ್ಕದ್ದೆಂದು ನಿರ್ಧಾರ ಮಾಡಿದರು.

ಸುಬ್ರಹ್ಮಣ್ಯಶಾಸ್ತ್ರಿಗಳು ನಿಷ್ಠಾವಂತ ಬ್ರಾಹ್ಮಣರೇ ಗಂಡಹೆಂಡಿರಿಬ್ಬರು ಇರುವವರು. ಅರುವತ್ತು ವರ್ಷಗಳ ಮೇಲೆ ವಯಸ್ಸಾಗಿರುವ ವೃದ್ಧಬ್ರಾಹ್ಮಣ. ರಾಮೂಶಾಸ್ತ್ರಿಯ ಮಾತಿನ ಮೇಲೆ ಮೂವತ್ತು ರೂಪಾಯಿಗಳ ಬಾಡಿಗೆಗೆ ಅವರಿಗೆ ಕೊಡುವುದೆಂದು ತೀರ್ಮಾನವಾಯಿತು. ಎರಡು ರೂಮುಗಳನ್ನು ಮಾತ್ರ ತಮಗಾಗಿ ಇಟ್ಟುಕೊಂಡರು. ಅದರಿಂದ ತಾಯಿಮಕ್ಕಳ ಜೀವನಕ್ಕೆ ಅನುಕೂಲವಾಯಿತು.

ಶ್ಯಾಮಲೆಗೆ ಇಪ್ಪತ್ತು ವರ್ಷಗಳು ತುಂಬಿಹೋಗುತ್ತಿದೆ. ಪ್ರಾಯದ ಹೆಣ್ಣಿಗೆ ಮದುವೆ ಮಾಡದಿರುವುದು ಕಳಂಕ. ನಾರಾಯಣನು ಬರುವ ವರೆಗೂ ಕಾಯುವಂತಿಲ್ಲ. ಈ ಮದುವೆಯ ಪ್ರಸ್ತಾಪ ಆಗಾಗ ರಾಮೂಶಾಸ್ತ್ರಿಯೊಡನೆ ಮಾಡುತ್ತಿದ್ದಳು. ರಾಮೂಶಾಸ್ತ್ರಿಯು ನಾಲ್ಕೈದು ಕಡೆ ನೋಡಿದನು. ಗಂಡಿನವರೂ ಬಂದು ಹೆಣ್ಣನ್ನು ನೋಡಿಕೊಂಡು ಹೋದರು. ಒಬ್ಬರು ಒಪ್ಪಿದರೆ ಮತ್ತೊಬ್ಬರು ಒಪ್ಪುತ್ತಿರಲಿಲ್ಲ. ಅಂತೂ ಯಾವ ಸಂಬಂಧವೂ ಕೂಡಲಿಲ್ಲ. ಹೀಗೆಯೇ ಆರು ತಿಂಗಳುಗಳು ಕಳೆದುವು.

ರಾಮೂಶಾಸ್ತ್ರಿಯ ಅಣ್ಣಂದಿರಾದ ಶಾಮೂಶಾಸ್ತ್ರಿಗಳು ಬಹಳ ಅಪರೂಪವಾಗಿ ತಮ್ಮನ ಮನೆಗೆ ಬಂದರು. ಊಟ ಉಪಚಾರಗಳೆಲ್ಲವೂ ನಡೆಯಿತು.

ಶಾಮೂಶಾಸ್ತ್ರಿಯು ಭೋಜನೋತ್ತರ ತಮ್ಮನೊಡನೆ ಮಾತನಾಡುತ್ತಾ " ನೋಡು ರಾಮು ! ನಾನೊಂದು ಹೆಣ್ಣು ನೋಡಲು ಬಂದಿದ್ದೇನೆ. ಹೆಣ್ಣು ಚೆನ್ನಾಗಿರಬೇಕು. ಬೆಳೆದ ಹುಡುಗಿಯಾಗಿರಬೇಕು. ದೊಡ್ಡವರ ಮನೆಗೆ ಮಾತನಾಡುವ ಹೆಣ್ಣು. ನೀನು ಕೇಳಿರಬಹುದು. ರಂಗಪ್ಪನ ಮೊದಲನೇ ಸಂಬಂಧವು ತಪ್ಪಿ ಆರು ತಿಂಗಳುಗಳಾದುವು. ಮಕ್ಕಳಿಲ್ಲ. ಅವನಿಗೆ ಮೂವತ್ತೈದು ವರ್ಷ. ನಾನು ಸುಳ್ಳು ಹೇಳುವುದಿಲ್ಲ. ಮೂವತ್ತು ವರ್ಷದವನಂತೆ ಕಾಣುತ್ತಾನೆ. ಲಕ್ಷಣವಾಗಿದ್ದಾನೆ. ಐಶ್ವರ್ಯವಂತೂ ಹೇಳತೀರದು. ದೇವರು ಎಷ್ಟೊಂತ ಕೊಟ್ಟಿದ್ದಾನೋ ಏನೋ ಅದನ್ನು ಅನುಭವಿಸಲು ಯಾವ ಸೌಭಾಗ್ಯವತಿ ಬರುತ್ತಾಳೋ. ನನಗೆ ಗಂಟುಬಿದ್ದಿದ್ದಾನೆ. ನಾನು ಒಪ್ಪಿದ ಹೆಣ್ಣು ಅವನಿಗೆ ಸಮ್ಮತ. " ಎಂದು ಹೇಳಿದರು.

ರಾಮಾಶಾಸ್ತ್ರಿಯು "ಒಬ್ಬ ಹೆಣ್ಣೇನೋ ಇದ್ದಾಳೆ. ರೂಪಲಕ್ಷಣಗಳಂತೂ ಕೇಳಬೇಕಾಗಿಲ್ಲ. ಸಾಕ್ಷಾತ್ ಲಕ್ಷ್ಮಿಯಂತಿದ್ದಾಳೆ. ಆದರೆ ಎರಡನೆಯ ಸಂಬಂಧಕ್ಕೆ ಕೊಡಲು ಅವಳ ತಾಯಿ ಒಪ್ಪುತ್ತಾಳೋ ಇಲ್ಲವೋ ಸಂದೇಹ" ಎಂದನು.

"ಸರಿ! ಮೊದಲು ಹೆಣ್ಣು ನೋಡೋಣ. ವರನ ಐಶ್ವರ್ಯ ಲಕ್ಷಣಗಳನ್ನೆಲ್ಲಾ ಹೇಳಿ ನೋಡು! ಒಪ್ಪಿಕೊಂಡರೆ ಆಯಿತು. ಇಲ್ಲದಿದ್ದರೆ ಅವರ ಇಷ್ಟ. ಒಳ್ಳೆಯ ಕೆಲಸ, ಪ್ರಯತ್ನಮಾಡಿ ನೋಡೋಣ."

ರಾಮಾಶಾಸ್ತ್ರಿಯು ಒಪ್ಪಿದನು. ರಂಗಪ್ಪನ ಹೆಸರು ಈಗ ರಂಗರಾಯ! ಮಂಡಿಪೇಟೆಯಲ್ಲಿ ದೊಡ್ಡ ಅಂಗಡಿ ಚೌಬೀನೆ ವ್ಯಾಪಾರ ಬೇರೆ! ಲಕ್ಷ್ಮೀಪುರದಲ್ಲಿ ದೊಡ್ಡಮನೆ ಕಟ್ಟಿದ್ದಾನೆ. ದಾನ ಧರ್ಮಗಳಲ್ಲಿ ಎತ್ತಿದ ಕೈ. ವ್ಯಾಪಾರಸ್ಥರ ಮಧ್ಯೆ ಅವನಿಗೆ ಗಣಸ್ಥಾನವಿದೆ. ವೈದೀಕ ಬ್ರಾಹ್ಮಣರಿಗಂತೂ ಕಲ್ಪ ವೃಕ್ಷ.

ಅಣ್ಣ ತಮ್ಮಂದಿರಿಬ್ಬರೂ ಪಾರ್ವತಮ್ಮನ ಮನೆಗೆ ಹೊರಟರು. ಇವರು ಹೋಗುವ ಹೊತ್ತಿಗೆ ಸುಮಾರು ಹತ್ತು ಗಂಟೆಯ ಸಮಯ. ಶ್ಯಾಮಲೆಯು ಮಡಿಯುಟ್ಟುಕೊಂಡು ತುಳಸೀಪೂಜೆ ಮಾಡುತ್ತಿದ್ದಳು. ರಾಮಾಶಾಸ್ತ್ರಿಯು "ನೋಡಣ್ಣಾ! ಇವಳೇ ಹುಡುಗಿ" ಎಂದು ತೋರಿಸಿದನು. ಮನೆಯೊಳಗೆ ಹೋಗಿ ಇಬ್ಬರೂ ಚಾಪೆಯ ಮೇಲೆ ಕುಳಿತುಕೊಂಡರು.

ರಾಮಾಶಾಸ್ತ್ರಿಯು ಮನೆಯೊಳಗೆ ಹೋಗಿ, ಪಾರ್ವತಮ್ಮನವರೇ ನಮ್ಮ ಅಣ್ಣ ಶಾಮಾಶಾಸ್ತ್ರಿಗಳು ಬಂದಿದ್ದಾರೆ. ಅವರು ಕನ್ಯಾರ್ಥಿಗಳಾಗಿ ಬಂದಿದ್ದಾರೆ. ನಾನು ಚೆನ್ನಾಗಿ ಬಲ್ಲೆ! ವರನು ಎಲ್ಲದರಲ್ಲಿಯೂ ಶ್ರೇಷ್ಠ. ಆದರೆ ಎರಡನೆಯ ಮದುವೆ. ಅದನ್ನೂ ನೀವು ನೋಡಬೇಕು" ಎಂದು ಹೇಳಿ ಪಾರ್ವತಮ್ಮನವರನ್ನು ಹಜಾರಕ್ಕೆ ಕರೆತಂದನು.

ಶಾಮಾಶಾಸ್ತ್ರಿಯು ವಾಚಾಳಿ! ವರನ ಐಶ್ವರ್ಯವನ್ನು ಸ್ವಾರಸ್ಯವಾಗಿ ಬಣ್ಣಿಸಿದನು. ಅವನ ದಾನಧರ್ಮಗಳನ್ನು ಹೊಗಳಿದನು. ಆರೋಗ್ಯದೃಢಕಾಯನಾಗಿದ್ದಾನೆಂದು ಹೇಳಿದನು. ಮೊದಲನೆಯ ಸಂಬಂಧದಲ್ಲಿ ಮಕ್ಕಳಿಲ್ಲ. ಮೂವತ್ತೈದೇ ವರ್ಷ ವಯಸ್ಸು. ನಾನು ಅಂಥ ಸಂಬಂಧಗಳು ಸುಖವಾಗಿ

ರುವುದನ್ನು ಎಷ್ಟೋ ನೋಡಿದ್ದೇನೆ. ನಿಮ್ಮ ಮಗಳೂ ವಯಸ್ಸಾದ ಹುಡುಗಿ ! ಅವಳು ಒಪ್ಪಿದರೆ, ನೀವು ಸಮ್ಮತಿಸಿದರೆ ನಾನು ಈ ಸಂಬಂಧವನ್ನು ಮಾಡಿಸುತ್ತೇನೆ " ಎಂದು ಭರವಸೆಕೊಟ್ಟನು.

ಪಾರ್ವತಮ್ಮನು " ನಮಗೆ ಹಿರಿಯರು ಯಾರೂ ಇಲ್ಲ. ನೀವೇ ಹಿರಿಯರು. ನೀವೆಲ್ಲಾ ಹೇಳಿದ ಹಾಗೆ !'' ಎಂದಳು.

ಅಷ್ಟರಲ್ಲಿ ಸುಬ್ರಹ್ಮಣ್ಯ ಶಾಸ್ತ್ರಿಗಳು— ಕಾಡು ಮಲ್ಲೇಶ್ವರ ದೇವಾಲಯದಲ್ಲಿ ವೇದಾಂತ ಪಾಠವನ್ನು ಮುಗಿಸಿಕೊಂಡು ಬಂದರು. ಈ ಅಣ್ಣ ತಮ್ಮಂದಿರು ಎದ್ದು ಶಾಸ್ತ್ರಿಗಳಿಗೆ ಅಭಿವಾದನ ಮಾಡಿದರು. ಸುಬ್ರಹ್ಮಣ್ಯ ಶಾಸ್ತ್ರಿಗಳು ಇಬ್ಬರ ಯೋಗಕ್ಷೇಮವನ್ನೂ ವಿಚಾರಿಸಿದರು. ಬಂದಿರುವ ಕಾರ್ಯಕ್ರಮವೇನೆಂದು ಪ್ರಶ್ನೆಮಾಡಿದರು.

ಶಾಮಾಶಾಸ್ತ್ರಿಯು ತಾನು ಬಂದಿರುವ ಸಂಗತಿಯನ್ನು ಪುನಃ ಪಠನ ಮಾಡಿದನು. ಕೊನೆಯಲ್ಲಿ " ತಾವು ದೊಡ್ಡವರು. ದೇವರ ಹಾಗಿದ್ದೀರಿ. ತಮ್ಮ ಬಾಯಲ್ಲಿ ಏನು ಬರುತ್ತೋ ಅದು ಶುಭ, ಹೇಳಿಬಿಡಿ!" ಎಂದು ಹೇಳಿದನು.

ಆ ವೇದಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳಿಗೂ ಎರಡನೆಯ ಸಂಬಂಧ. ಶಾಸ್ತ್ರಿಗಳವರು ಎದೆ ತಟ್ಟುತ್ತಾ " ಓಹೋ ! ಅದಕ್ಕೇನು. ನನಗೂ ಎರಡನೆಯ ಲಗ್ನ. ನೋಡಿ, ಇಪ್ಪತ್ತು ವರ್ಷವಾಯಿತು ಮದುವೆಯಾಗಿ. ಆಗ ನನಗೆ ನಲವತ್ತು ವರ್ಷ. ನನ್ನ ಹೆಂಡತಿಗೆ ಹದಿನೈದು ವರ್ಷ. ಅನ್ನಪೂರ್ಣೇ, ಇಲ್ಲಿ ಬಾ ! " ಎಂದು ಹೆಂಡತಿಯನ್ನು ಕೂಗಿದರು.

ಆಕೆಯು ಸಡಗರದಿಂದ ಹಜಾರಕ್ಕೆ ಬಂದಳು. " ನೋಡು ! ಈ ಮನೆ ಶ್ಯಾಮಲಾ ! ಚಿನ್ನದಂಥಾ ಹುಡುಗಿ ! ಸದ್ಗುಣ ಸಂಪನ್ನೆ ! ಇವಳಿಗೆ ಒಂದು ವರ ಬಂದಿದೆ. ಮೂವತ್ತೈದು ವರ್ಷವಂತೆ ! ಭಾರಿ ಐಶ್ವರ್ಯವಂತರಂತೆ ! ಮೊದಲನೆಯ ಸಂಬಂಧದಲ್ಲಿ ಮಕ್ಕಳಿಲ್ಲ. ಏನು ಹೇಳುತ್ತೀ ? ಸಂಬಂಧವನ್ನು ಒಪ್ಪಬಹುದೋ ಇಲ್ಲವೋ ನೀನೇ ಹೇಳು, ನೀನೇ ಅದಕ್ಕೆ ಸಾಕ್ಷಿ !" ಎಂದರು.

ಅನ್ನಪೂರ್ಣಮ್ಮನವರು " ನಿಮ್ಮಂಥಾ ದೊಡ್ಡ ದೊಡ್ಡ ಪಂಡಿತರ ಎದುರಿಗೆ ನಾನು ಹೇಳಬೇಕೆ ! ಅದೆಲ್ಲಾ ಹೆಣ್ಣಿನ ಭಾಗ್ಯ. ವಯಸ್ಸು ಪ್ರಧಾನವಲ್ಲ. ಹೆಂಗಸು ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯದಂತೆ ಗಂಡನು ಸಿಕ್ಕುತ್ತಾನೆ.

ಶ್ಯಾಮಲೆಯನ್ನು ಒಂದು ಮಾತು ಕೇಳಿ ನಿಶ್ಚಯ ಮಾಡಿಬಿಡಿ" ಎಂದು ಹೇಳಿದರು.

ಅನ್ನಪೂರ್ಣಮ್ಮನವರ ಮಾತಿಗೆ ಎಲ್ಲರೂ "ತಥಾಸ್ತು" ಎಂದರು.

ಶಾಮಾಶಾಸ್ತ್ರಿಯು "ನಾಳೆ ಬೇಡ. ನಾಡಿದ್ದು ಬರುತ್ತೇವೆ. ನೀವು ಎಲ್ಲಾ ಯೋಚನೆಮಾಡಿ ನಿಶ್ಚಯಿಸಿಕೊಳ್ಳಿ" ಎಂದು ಹೇಳಿ ಎದ್ದು ಹೊರಟನು. ಹೊರಡುವಾಗ ಶಾಸ್ತ್ರಿಗಳಿಗೂ, ಅವರ ಧರ್ಮಪತ್ನಿಯವರಿಗೂ ನಮಸ್ಕರಿಸಿ ಪಾರ್ವತಮ್ಮನವರ ಅಪ್ಪಣೆ ಕೇಳಿ ಅಣ್ಣ ತಮ್ಮಂದಿರು ಮನೆಗೆ ಹೊರಟರು.

ಮನೆಗೆ ಹೋಗುತ್ತಾ ಶಾಮಾಶಾಸ್ತ್ರಿಯು "ರಾಮು, ನಮ್ಮ ಕೆಲಸವು ಕೈಗೂಡಿದಂತಿದೆ. ದೇವರು ಫಲ ಕೊಡುವ ಸಮಯದಲ್ಲಿ ಹೀಗೆ ತಂದು ಒದಗಿಸಿ ಕೊಡುತ್ತಾನೆ. ಸುಬ್ರಹ್ಮಣ್ಯಶಾಸ್ತ್ರಿಗಳವರಿಗೆ ಎರಡನೆಯ ಸಂಬಂಧವೆಂದು ಯಾರಿಗೆ ಗೊತ್ತು ? ಅವರಿಂದ ಬಹಳ ಸಹಾಯವಾಯಿತು. ಪಾರ್ವತಮ್ಮನವರ ಮುಖವನ್ನೇ ನೋಡುತ್ತಿದ್ದೆ. ಅವರೇನೋ ಒಪ್ಪಿಯೇ ಇದ್ದಾರೆ. ಹುಡುಗಿಯು ಏನು ಮಾಡುತ್ತಾಳೆಯೋ ? ನೋಡೋಣ ! ದೇವರಿದ್ದಾನೆ" ಎಂದನು.

ರಾಮಾಶಾಸ್ತ್ರಿಯು "ಅನ್ನಪೂರ್ಣಮ್ಮನವರು ತುಂಬಾ ಜಾಣರು. ಅವರು ಹುಡುಗಿಯನ್ನು ಒಪ್ಪಿಸಿಬಿಡುತ್ತಾರೆ. ನಾಳೆ ನಾವು ಹೋಗುವ ಹೊತ್ತಿಗೆ ಎಲ್ಲವೂ ಪಕ್ವವಾಗಿರುತ್ತದೆ" ಎಂದನು. ಇಬ್ಬರೂ ಮನೆಯನ್ನು ಸೇರಿದರು.

ಆ ದಿನವೇ ಶಾಮಾಶಾಸ್ತ್ರಿಯು ರಂಗರಾಯನಿಗೊಂದು ಕಾಗದವನ್ನು ಬರೆದರು. "ಇಲ್ಲೊಂದು ಶ್ರೇಷ್ಠವಾದ ಹೆಣ್ಣು ಸಿಕ್ಕಿದೆ. ಹನ್ನೆರಡಾಣೆ ಭಾಗ ಗೊತ್ತಾದಂತೆಯೇ ! ನೀವು ತಕ್ಷಣ ಹೊರಟು ಬರುವುದು" ಎಂದು ಬರೆದನು.

ರಂಗಪ್ಪನು ಮಾರನೆಯ ದಿನ ಸಂಧ್ಯಾಕಾಲಕ್ಕೆ ಹಾಜರಾಗಿಬಿಟ್ಟನು. ಮೈಸೂರಿನಿಂದ ವಿಳ್ಳೆದೆಲೆ, ಹೂವು, ಹಣ್ಣುಗಳ ಬುಟ್ಟಿಗಳನ್ನು ತಂದಿದ್ದನು. ಅರಿಶಿನ, ಕುಂಕುಮದ ಪೊಟ್ಟಣಗಳನ್ನು ತಂದಿದ್ದನು. ಅವನು ಬಂದಿದ್ದುದು ಮದುವೆಗೆ ಸಿದ್ಧವಾಗಿ ಬಂದಂತಿತ್ತು. ಅವನ ಉತ್ಸಾಹವೂ ಹಾಗೆಯೇ ಇತ್ತು ಅತ ರಾಮಾಶಾಸ್ತ್ರಿಯ ಮನೆಗೆ ಬಂದಿಳಿದನು. ಆ ದಿನದ ಊಟ ಉಪಚಾರಗ

ಳನ್ನಂತೂ ಹೇಳತೀರದು. ರಾಮಾಶಾಸ್ತ್ರಿಗೆ ರಂಗಪ್ಪನ ಪರಿಚಯವಿರಲಿಲ್ಲ. ಆಕಸ್ಮಿಕವಾಗಿ ಅವನೇ ತಮ್ಮ ಮನೆಗೆ ಬಂದಿರುವಾಗ ಎಷ್ಟು ಹೆಮ್ಮೆ.

ಆ ರಾತ್ರಿಯೇ ಶಾಮಾಶಾಸ್ತ್ರಿಯು ಹುಡುಗಿಯ ವರ್ಣನೆಯನ್ನು ಮಾಡಿದನು. ದೈವಿಕವಾಗಿ ಬಂದ ಸುಬ್ರಹ್ಮಣ್ಯಶಾಸ್ತ್ರಿಗಳ ನೆರವನ್ನು ತಿಳಿಸಿದನು. ಅನ್ನಪೂರ್ಣಮ್ಮನವರ ವಾಕ್ಸಹಾಯವನ್ನು ಹೇಳಿದನು.

ಇದೆಲ್ಲಾ ಕೇಳಿ ರಂಗಪ್ಪನಿಗೆ ಸ್ವರ್ಗಕ್ಕೆ ಮೂರೇ ಬೆಟ್ಟು ಬಿಟ್ಟಂತಾಯಿತು. ರಾತ್ರಿ ಸೊಗಸಾದ ಭೋಜನವಾಯಿತು. ಮೂವರೂ ಮಾತನಾಡುತ್ತಾ ಮಲಗಿದರು. ಮದುವೆಯ ಮಾತೇ ಮಾತು. ರಂಗಪ್ಪನು ಎರಡು ಖರ್ಚುಗಳನ್ನೂ ತಾನೇ ವಹಿಸುವುದಾಗಿ ಹೇಳಿದನು. ಈ ಮದುವೆಯ ಸಮಸ್ತ ಯಾಜಮಾನ್ಯವನ್ನೂ ಶಾಮಾಶಾಸ್ತ್ರಿಯೇ ವಹಿಸಿಕೊಳ್ಳಬೇಕೆಂದು ಹೇಳಿದನು. ಹೆಣ್ಣಿನ ಕಡೆ ರಾಮಾಶಾಸ್ತ್ರಿ ಗಂಡಿನ ಕಡೆ ಶಾಮಾಶಾಸ್ತ್ರಿ, ಎಂದು ಎಲ್ಲವೂ ಗೊತ್ತಾಗಿ ಹೋಯಿತು.

ಬೆಳಗ್ಗೆ ಎದ್ದು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ರಾಮಾಶಾಸ್ತ್ರಿಯು ತಾನು ಪಾರ್ವತಮ್ಮನವರ ಮನೆಗೆ ಹೋಗಿ ಬರುವುದಾಗಿ ಹೇಳಿ ಹೊರಟನು.

ಪಾರ್ವತಮ್ಮನವರೊಡನೆ ಮಾತನಾಡಿದನು. "ಪಾರ್ವತಮ್ಮನವರೇ, ಮೈಸೂರಿನಿಂದ ರಂಗರಾಯರೇ ಬಂದುಬಿಟ್ಟಿದ್ದಾರೆ. ಕನ್ಯೆಯನ್ನು ನೋಡಲು ಕರತರಲೇ ?" ಎಂದು ಕೇಳಿದನು.

ರಾಮಾಶಾಸ್ತ್ರಿಯ ಧ್ವನಿ ಕೇಳುತ್ತಲೇ ಅನ್ನಪೂರ್ಣಮ್ಮನವರು ಬಂದು, ಶಾಸ್ತ್ರಿಗಳೇ, ಅದೆಲ್ಲಾ ಸರಿ! ಒಡವೆವಸ್ತು ಏನಿಡುತ್ತಾರೊ?" ಎಂದು ಕೇಳಿದರು.

"ನೋಡಿ ! ಕಿವಿಗೆ ವಜ್ರದ ಬೆಂಡೋಲೆ ಇಡಬೇಕು. ವಜ್ರದ ಜಡೇಬಿಲ್ಲೆ. ಕೊರಳಿಗೆ ನಾಲ್ಕು ಎಳೆ ಚೈನುಸರ. ಕೈಗೆ ಬಳೆಗಳು. ಚಿನ್ನದ ಡಾಬು ! ಇಷ್ಟೂ ಇಟ್ಟೇ ಇಡಬೇಕು. ಸೀರೆಗಳು ಉಡುಗೊರೆ ಅದೆಲ್ಲಾ ಅವರ ಇಷ್ಟ. ಅದನ್ನೆಲ್ಲಾ ಸರಿಯಾಗಿಯೇ ಮಾಡುತ್ತಾರೆ" ಎಂದರು.

ರಾಮಾಶಾಸ್ತ್ರಿಯು "ಅದೆಲ್ಲಾ ಅವರು ಸಿದ್ಧಮಾಡಿಯೇ ಬಿಟ್ಟಿದ್ದಾರೆ. ನಾವೇನೂ ಹೇಳಬೇಕಾಗಿಲ್ಲ. ಅವರ ಅಂತಸ್ತಿಗೆ ತಕ್ಕಹಾಗೆ ನಗ – ನಾಣ್ಯಗಳು–ಇಡಲೇಬೇಕು. ಅವರನ್ನು ಇಲ್ಲಿಗೆ ಕರೆತರುತ್ತೇನೆ" ಎಂದು ಹೇಳಿ ಹೊರಟುಹೋದರು.

ಅನ್ನಪೂರ್ಣಮ್ಮನವರು ಶ್ಯಾಮಲೆಗೆ ಜಡೆಹಾಕಿ ಹೊಸ ಸೀರೆ ಉಡಿಸಿದರು. ತಮ್ಮದೇ ಎರಡು ನಗಗಳನ್ನು ತಂದಿಟ್ಟು, ಶ್ಯಾಮಲೆಗೆ ಬಲು ಚೆನ್ನಾಗಿ ಅಲಂಕಾರ ಮಾಡಿದರು. ಪಾರ್ವತಮ್ಮನವರಿಗೆ ಎರಡನೆಯ ಮದುವೆ ಎಂಬ ಶಂಕೆಯಿದ್ದರೂ ನಿರಾಯಾಸವಾಗಿ ಶ್ಯಾಮಲೆಯ ಮದುವೆಯಾಗುತ್ತಲ್ಲಾ ಎಂಬ ಸಂತೋಷ. ಅನ್ನಪೂರ್ಣಮ್ಮನವರು ಶ್ಯಾಮಲೆಗೆ ಬೋಧಿಸಿ, ಬೋಧಿಸಿ ಸಿದ್ಧಪಡಿಸಿಯೇ ಬಿಟ್ಟಿದ್ದರು.

ರಾಮಾಶಾಸ್ತ್ರಿಯು ಮನೆಗೆ ಬಂದು " ಎಲ್ಲವೂ ಸಿದ್ಧಪಡಿಸಿಯೇ ಬಿಟ್ಟಿದ್ದೇನೆ " ಎಂದು ಹೇಳಿದನು. ಮುಹೂರ್ತವನ್ನು ನೋಡಿ ರಾಮಾಶಾಸ್ತ್ರಿಯು ರಂಗರಾಯನನ್ನು ಮನೆಯಿಂದ ಹೊರಡಿಸಿದನು. ರಾಮಾಶಾಸ್ತ್ರಿಯ ಹೆಂಡತಿ ಲಕ್ಷಮ್ಮನವರು, ಶಿಷ್ಯ ವೆಂಕಟರಾಮು ಹಣ್ಣು ಹೂವು, ಅರಿಸಿನ, ಕುಂಕುಮದ ತಟ್ಟೆಗಳನ್ನು ತೆಗೆದುಕೊಂಡು ಹೊರಟರು. ಆ ಮನೆ ಸಮೀಪದಲ್ಲಿಯೇ ಇದ್ದುದರಿಂದ ಕಾಲು ನಡಗೆಯಲ್ಲೇ ಹೊರಟರು. ಪಾರ್ವತಮ್ಮನವರ ಮನೆಯ ಬಾಗಿಲಿನಲ್ಲಿ ಅನ್ನಪೂರ್ಣಮ್ಮನವರೇ ಸ್ವಾಗತಿಸಿದರು. ಎಲ್ಲರೂ ಒಳಗೆ ಬಂದು ಹಜಾರದಲ್ಲಿ ಹಾಕಿದ್ದ ರತ್ನಗಂಬಳಿಯ ಮೇಲೆ ಕುಳಿತರು. ಅನ್ನಪೂರ್ಣಮ್ಮನವರು ಸುಬ್ರಹ್ಮಣ್ಯಶಾಸ್ತ್ರಿಗಳವರನ್ನು ತಮ್ಮ ಮನೆಯಿಂದ ಕರೆತಂದು ಮಣೆಯ ಮೇಲೆ ಕೂರಿಸಿದರು. ವೇದಾಂತಿ ಶಾಸ್ತ್ರಿಗಳು ಬಂದು ಕೂಡುತ್ತಲೇ, ರಾಮಾಶಾಸ್ತ್ರಿಯೂ ರಂಗರಾಯನೂ ಎದ್ದು ಅಭಿವಾದನ ಮಾಡಿದರು. ರಾಮಾಶಾಸ್ತ್ರಿಯು ಒಳಕ್ಕೂ ಹೊರಕ್ಕೂ ಓಡಾಡುತ್ತಿದ್ದನು. ರಾಮಾಶಾಸ್ತ್ರಿಯ ಹೆಂಡತಿ ಲಕ್ಷಮ್ಮನವರು ಮನೆಯ ಯಜಮಾನಿ ಪಾರ್ವತಮ್ಮನವರೊಂದಿಗೆ ಮಾತನಾಡುತ್ತಾ ಕುಳಿತರು. ಸುಬ್ರಹ್ಮಣ್ಯಶಾಸ್ತ್ರಿಗಳೇ ರಂಗರಾಯರ ಯೋಗ ಕ್ಷೇಮವನ್ನು ವಿಚಾರಿಸಿದರು. ರಾಮಾಶಾಸ್ತ್ರಿಯು ರಂಗರಾಯರ ಐಶ್ವರ್ಯ, ಅವರ ಗಣ್ಯತೆ, ಔದಾರ್ಯ ಎಲ್ಲ ಪ್ರವರಗಳನ್ನೂ ಬಣ್ಣಿಸಿ ಹೇಳಿದನು. ಸುಬ್ರಹ್ಮಣ್ಯಶಾಸ್ತ್ರಿಗಳು ಒಂದೇ ಮಾತಿನಲ್ಲಿ "ಬ್ರಾಹ್ಮಣರ ಪ್ರಭು ಎನ್ನಿ, ಸಾಕು. ಈ ನಾಸ್ತಿಕ ಕಾಲದಲ್ಲಿ ಇಂಥವರೊಬ್ಬರಿಲ್ಲದಿದ್ದರೆ ಹೇಗೆ ತಾನೇ ಬ್ರಾಹ್ಮಣ್ಯವು ಉಳಿದೀತು " ಎಂದು ಹೇಳಿದರು.

ಇಷ್ಟರಲ್ಲಿ ಅನ್ನಪೂರ್ಣಮ್ಮನವರು ಶ್ಯಾಮಲೆಯನ್ನು ಜೊತೆಯಲ್ಲಿ ಕರೆತಂದು ಚಾಪೆಯ ಮೇಲೆ ಕೂರಿಸಿದರು. ಒಳಗಿನಿಂದ ಲಕ್ಷಮ್ಮನವರು ಬಂದು

" ಒಂದು ಹಾಡು ಹೇಳು ಶ್ಯಾಮಲಾ ! " ಎಂದರು. ಶ್ಯಾಮಲೆಯು ಗಂಭೀರ ವಾಗಿ ಒಂದೆರಡು ಹಾಡುಗಳನ್ನು ಹಾಡಿದಳು. ವರನು ಕನ್ಯೆಯನ್ನು ನೋಡಿ ಒಪ್ಪಿದ್ದಾಯಿತು. ಕನ್ಯೆಯೂ ವರನನ್ನು ನೋಡಿ ಮನಸ್ಸಿನಲ್ಲೇ, ಹುಡುಗನಲ್ಲ ದಿದ್ದರೂ ಮುದುಕನಲ್ಲ, ಎಂದುಕೊಂಡಳು.

ಮಾತು ಕಥೆಗಳನ್ನೆಲ್ಲಾ ರಾಮಾಶಾಸ್ತ್ರಿಯೇ ಆಡಿ ಮುಗಿಸಿದನು. ಮುಂದಿನ ತಿಂಗಳು ಮದುವೆಯೆಂದು ಗೊತ್ತಾಯಿತು. ಮೈಸೂರಿನಲ್ಲಿ ಮದುವೆ ಮಾಡುವುದೇ ಯುಕ್ತವೆಂದು ಇತ್ಯರ್ಥವಾಯಿತು. ರಂಗರಾಯನು ಸುಬ್ರ ಹ್ಮಣ್ಯಶಾಸ್ತ್ರಿಗಳನ್ನೂ ಅವರ ಕುಟುಂಬವನ್ನೂ ಮದುವೆಗೆ ಬಂದೇ ಬರ ಬೇಕೆಂದು ಕರೆದನು. ಅವರೂ ಒಪ್ಪಿಕೊಂಡರು. ರಾಮಾಶಾಸ್ತ್ರಿಯೇ ರಂಗ ರಾಯನಿಗೂ ಶಾಮಾಶಾಸ್ತ್ರಿಗೂ ಫಲತಾಂಬೂಲಗಳನ್ನು ತಂದು ಕೊಟ್ಟನು. ಲಕ್ಷ್ಮಮ್ಮನವರಿಗೆ ಶ್ಯಾಮಲೆಯ ಕೈಯಿಂದ ಅರಿಸಿನ ಕುಂಕುಮವನ್ನು ಕೊಡಿ ಸಿದನು. ರಾಮಾಶಾಸ್ತ್ರಿಗೂ ಅವನ ಶಿಷ್ಯ ವೆಂಕಟರಾಮನಿಗೂ ಶ್ಯಾಮಲೆಯೇ ಫಲತಾಂಬೂಲಗಳನ್ನು ಕೊಟ್ಟಳು. ರಾಮಾಶಾಸ್ತ್ರಿಯು ಶಾಸ್ತ್ರಿಗಳ ಒಡನೆಯೂ ಅವರ ಧರ್ಮ ಪತ್ನಿಯವರೊಡನೆಯೂ ಒಡವೆ ವಸ್ತುಗಳ ವಿಷಯವನ್ನೆಲ್ಲಾ ವಿವರವಾಗಿ ಆಡಿದನು. ಶಾಸ್ತ್ರಿಗಳು " ಶುಭಸ್ಯ ಶೀಘ್ರಂ " ಎಂದರು. ಎಲ್ಲರೂ ಶುಭ ವಾಕ್ಯಗಳನ್ನು ಸುರಿದರು. ಶಾಮಾಶಾಸ್ತ್ರಿಯು ಒಳಗೆ ಹೋಗಿ ಪಾರ್ವ ತಮ್ಮನವರನ್ನು ಮಾತನಾಡಿಸಿದನು. "ಎಲ್ಲವೂ ನಿಮಗೆ ಒಪ್ಪಿಗೆಯಷ್ಟೆ ?" ಎಂದನು.

ಅವರು ಗಂಭೀರವಾಗಿ, " ನೀವುಗಳೆಲ್ಲಾ ದೊಡ್ಡವರು. ನೀವು ಹೇಳು ವುದು ನಮಗೆ ಒಪ್ಪಿಗೆ " ಎಂದರು. ಎಲ್ಲರೂ ರಾಮಾಶಾಸ್ತ್ರಿಯು ಮನೆಗೆ ಹೊರಟರು. ರಂಗರಾಯನು ಶಾಸ್ತ್ರಿಗಳಿಗೂ ಅವರ ಕುಟುಂಬಕ್ಕೂ ಮತ್ತೊಮ್ಮೆ ವಂದಿಸಿ ಹೊರಟುಹೋದನು. ರಾಮಾಶಾಸ್ತ್ರಿಯ ಚಾಕಚಕ್ಯವನ್ನು ಕೊಂಡಾ ಡುತ್ತಾ ಎಲ್ಲರೂ ಮನೆಗೆ ಹೊರಟರು. ದಿವ್ಯವಾದ ಭೋಜನ ನಡೆದ ಮೇಲೆ ಮಧ್ಯಾಹ್ನದ ರೈಲಿನಲ್ಲಿಯೇ ರಂಗರಾಯನೂ ಶಾಮಾಶಾಸ್ತ್ರಿಯೂ ಮೈಸೂರಿಗೆ ಪ್ರಯಾಣ ಬೆಳಸಿದರು.

## ೮

ಮಾಘ ಮಾಸದಲ್ಲಿ ಮೈಸೂರಿನಲ್ಲಿ ಮದುವೆಯು ಬಹು ಸಂಭ್ರಮದಿಂದ ನಡೆಯಿತು. ರಂಗರಾಯರ ಹೊಸ ಮನೆಯಲ್ಲೇ ಮದುವೆ. ಬಹು ಮಂದಿ ವೈದಿಕರು ಲೌಕಿಕ ಮಹಾಜನರೂ ಮದುವೆಗೆ ಬಂದಿದ್ದರು. ರಂಗರಾಯನು ಹಿರೇ ಹೆಂಡತಿಯ ನಗಗಳಿಗೆಲ್ಲಾ ಮೆರಗು ಹಾಕಿಸಿ ಹೊಸದರಂತೆ ಮಾಡಿಸಿದ್ದನು. ಶ್ಯಾಮಲೆಗೆ ನಗಗಳನ್ನಿಟ್ಟು ಭಾರೀ ಸೀರೆಯನ್ನುಡಿಸಿ ಅಲಂಕರಿಸಿದ್ದರು. ಒಂದೇ ದಿನದ ಮದುವೆಯಾದರೂ ಬಹು ಸಂಭ್ರಮದಿಂದ ನಡೆಯಿತು. ಎರಡು ಮೂರು ದಿನಗಳು ಔತಣಗಳೂ ಸಂಗೀತಗಳೂ ನಡೆದುವು. ರಂಗರಾಯರಿಗೆ ಬಹು ಮಂದಿ ಸ್ನೇಹಿತರುಗಳು. ಎಲ್ಲರೂ " ಎಂತಹ ಹುಡುಗಿ ! ಎಷ್ಟು ಚೆಲುವೆ ! ಹೇಗೆ ಬೆಳೆದಿದ್ದಾಳೆ ! " ಎಂದು ಮನಸ್ಸಿನಲ್ಲಿಯೇ ಮೆಚ್ಚಿಕೊಂಡರು ದುಡ್ಡಿದ್ದರೆ ಎಲ್ಲವೂ ಸಿಕ್ಕುತ್ತದೆ, ಎಂದು ಕೆಲವರು ಅಂದುಕೊಂಡರು. ಮದುವೆಯು ಸಾಂಗವಾಗಿ ಪೂರೈಸಿತು. ಸುಬ್ರಹ್ಮಣ್ಯಶಾಸ್ತ್ರಿಗಳಿಗೂ ಅವರ ಕುಟುಂಬ ಅನ್ನಪೂರ್ಣಮ್ಮನವರಿಗೂ ಭಾರೀ ಧೋತ್ರ, ಸೀರೆಗಳನ್ನು ಉಡುಗರೆಯಾಗಿ ಬಂದುವು. ರಂಗರಾಯ " ತಾವು ಮದುವೆಗೆ ದಯಮಾಡಿಸಿದ್ದು ಅರುಂಧತೀ ವಸಿಷ್ಠರೇ ಮದುವೆಗೆ ಬಂದಂತಾಯಿತು ಎಂದು ಉಪಚಾರ ಮಾಡಿದನು.

ರಾಮಾಶಾಸ್ತ್ರಿಗೆ ಉಡುಗೊರೆ ದಕ್ಷಿಣೆಗಳಿಗಂತೂ ಕಡಿಮೆಯಿಲ್ಲ. ಅವರೇ ಹಸೆಯ ಮೇಲೆ ಕುಳಿತು ಧಾರೆ ಎರೆದ ದಂಪತಿಗಳು. ಪಾರ್ವತಮ್ಮನವರಿಗೂ ಒಂದು ಸೀರೆಯನ್ನು ಉಡುಗೊರೆ ಕೊಟ್ಟನು. ರಂಗರಾಯನೇ ಎದುರಿಗೆ ನಿಂತು ಬಹಳ ಉಪಚಾರೋಕ್ತಿಗಳನ್ನು ಹೇಳಿದನು.

ಮದುವೆಯ ಸಂಭ್ರಮವೆಲ್ಲಾ ಪೂರೈಸಿದ ಮೇಲೆ ರಾಮಾಶಾಸ್ತ್ರಿಯು ವಧುವನ್ನೂ ಮದುವೆಗೆ ಬಂದಿದ್ದವರನ್ನೂ ಕರೆದುಕೊಂಡು ಬೆಂಗಳೂರಿಗೆ

ಹಿಂತಿರುಗಿದನು. ಫಾಲ್ಗುಣ ಮಾಸದಲ್ಲಿ ವಧುವನ್ನು ಕರೆತಂದು ಶಾಂತಿ ಮುಹೂರ್ತ ಮಾಡಿಸಿಕೊಡುವುದಾಗಿ ಹೇಳಿದನು. ರಾಮಾಶಾಸ್ತ್ರಿಯು ಹೊರಡುವ ದಿನ ರಂಗರಾಯನು ಮಹಡಿಯ ಮೇಲು ಭಾಗದಲ್ಲಿ ಅವನನ್ನು ತನ್ನ ಕೋಣೆಗೆ ಕರೆದುಕೊಂಡು ಹೋಗಿ ಐದು ನೂರು ರೂಪಾಯಿಗಳನ್ನು ಕಾಣಿಕೆಯಾಗಿ ಕೊಟ್ಟನು. ರಾಮಾಶಾಸ್ತ್ರಿಯು ಆ ಹಣವನ್ನು ತೆಗೆದುಕೊಳ್ಳಲು ಹಿಂದೆಗೆದನು. ರಂಗರಾಯನು ಬಹಳ ಉಪಚಾರ ಮಾಡಿ ಆ ಐದು ನೋಟುಗಳನ್ನು ಅವನ ಮಡಿಲಿಗೆ ಕಟ್ಟಿದನು. "ಶಾಸ್ತ್ರಿಗಳೇ! ಹೆಣ್ಣಿನ ಮೇಲೆ ಬಹಳ ಒಡವೆ ವಸ್ತುಗಳಿವೆ. ಸುಮಾರು ಇಪ್ಪತ್ತು ಸಹಸ್ರ ರೂಪಾಯಿಗಳು ಬೆಲೆ ಬಾಳುತ್ತವೆ. ಕೊಂಚ ಜಾಗ್ರತೆಯಾಗಿ ನೋಡಿಕೊಳ್ಳಬೇಕು." ಎಂದು ಎಚ್ಚರಿಕೆ ಕೊಟ್ಟನು. ರಾಮಾಶಾಸ್ತ್ರಿಯು "ಹಾಗೇನೂ ಯೋಚಿಸಬೇಡಿ! ಪಾರ್ವತಮ್ಮನು ಚೆನ್ನಾಗಿಯೇ ಬಾಳಿದ ಹೆಂಗಸು. ಆಕೆಗೂ ಒಡವೆ ವಸ್ತುಗಳಿದ್ದುವು. ದೊಡ್ಡ ಮನುಷ್ಯನ ಹೆಂಡತಿ. ಎಂ ಎಸ್ಸಿ. ಪಾಸ್ ಮಾಡಿರುವ ಮಗನಿದ್ದಾನೆ. ಇಂಥಾ ಸಂಬಂಧವು ಸಿಕ್ಕಿದ್ದು ನಿಮ್ಮ ಪುಣ್ಯ. ಎರಡನೆಯ ಸಂಬಂಧಕ್ಕೆ ಇಂತಹ ವಸ್ತು ದೊರೆಯುವುದು ದುರ್ಲಭ" ಎಂದು ಹೇಳಿದನು.

ರಂಗರಾಯನು ಆ ದಿನವೇ ಔತಣಮಾಡಿಸಿ, ಸುಬ್ರಹ್ಮಣ್ಯಶಾಸ್ತ್ರಿ ದಂಪತಿಗಳು, ರಾಮಾಶಾಸ್ತ್ರಿ ದಂಪತಿಗಳು, ತನ್ನ ಹೆಂಡತಿ ಶ್ಯಾಮಲೆ ಅತ್ತೆ ಪಾರ್ವತಮ್ಮನವರು ಎಲ್ಲರನ್ನೂ ರೈಲಿಗೆ ಕಳಿಸಿದನು. ಒಂದು ಎರಡು ತರಗತಿಯ ಗಾಡಿಯನ್ನು ರಿಜರ್ವ್ ಮಾಡಿಸಿದ್ದನು. ಎರಡು ಮೋಟಾರು ಕಾರುಗಳಲ್ಲಿ ಎಲ್ಲರನ್ನೂ ರೈಲಿಗೆ ಕರೆದುಕೊಂಡು ಬಿಟ್ಟು ಬಂದನು. ದಾರಿಯುದ್ದಕ್ಕೂ ಸುಬ್ರಹ್ಮಣ್ಯಶಾಸ್ತ್ರಿಗಳ ಕುಟುಂಬ ರಾಮಾಶಾಸ್ತ್ರಿಯ ಕುಟುಂಬ ಶ್ಯಾಮಲೆಯ ಭಾಗ್ಯವನ್ನು ಕೊಂಡಾಡುತ್ತಾ ಹೋದರು. ಬೆಂಗಳೂರು ಬಂದೇ ಬಿಟ್ಟಿತು. ಎಲ್ಲರೂ ಇಳಿದು ಗಾಡಿಗಳನ್ನು ಮಾಡಿಕೊಂಡು ಮನೆಗೆ ಬಂದರು.

ಒಂದು ತಿಂಗಳು ಹೊರಳಿತು. ರಂಗರಾಯನು ಈ ಮಧ್ಯೆ ಎರಡಾವರ್ತಿ ಬೆಂಗಳೂರಿಗೆ ಬಂದು ಹೋದನು. ಅತ್ತೆಯ ಮನೆಯಲ್ಲಿ ಉಪಚಾರಗಳೆಲ್ಲಾ ಸರಿಯಾಗಿ ನಡೆದುವು. ಸ್ನಾನಕ್ಕೆ ನೀರು ಕೊಡುವುದು, ಕಾಫಿ ತಂದು ಕೊಡುವುದು, ರಾತ್ರಿ ಹಾಸಿಗೆ ಹಾಸಿ ಕೊಡುವುದು ಇದನೆಲ್ಲಾ ಶ್ಯಾಮಲೆಯೇ ಆದರ

ದಿಂದ ಮಾಡುತ್ತಿದ್ದಳು. ರಂಗರಾಯನ ಸಂತೋಷಕ್ಕೆ ಪಾರವೇ ಇರಲಿಲ್ಲ. ತನ್ನ ಭಾಗ್ಯಕ್ಕೆ ತಕ್ಕ ಹೆಣ್ಣು, ಎಂದು ಕೊಳ್ಳುತ್ತಿದ್ದನು.

ಬೆಂಗಳೂರಿಗೆ ಬಂದಾಗಲೆಲ್ಲಾ ರಾಮಾಶಾಸ್ತ್ರಿಯ ಮನೆಗೆ ಹೋಗಿ ಮಾತನಾಡಿಕೊಂಡು ಬರುತ್ತಿದ್ದನು. ಫಾಲ್ಗುಣ ಮಾಸದಲ್ಲಿ ರಾಮಾಶಾಸ್ತ್ರಿಯೂ ಅವನ ಹೆಂಡತಿ ಪಾರ್ವತಮ್ಮನವರೂ ಶ್ಯಾಮಲೆಯನ್ನು ಮೈಸೂರಿಗೆ ಕರೆತಂದು ಶಾಂತಿ ಮುಹೂರ್ತವನ್ನು ನೆರವೇರಿಸಿ ಶ್ಯಾಮಲೆಯನ್ನು ಅಲ್ಲಿಯೇ ಬಿಟ್ಟು ಪಾರ್ವತಮ್ಮನವರನ್ನು ಕರೆದುಕೊಂಡು ಬೆಂಗಳೂರಿಗೆ ಹಿಂತಿರುಗಿದರು.

ಶ್ಯಾಮಲೆಯು ಈಗ ಗೃಹಿಣಿ! ಮನೆಯಲ್ಲಿ ಅಡಿಗೆಗೆ ಪರಿಚಾರಕರಿದ್ದಾರೆ, ಕೆಲಸದವರಿದ್ದಾರೆ. ರಂಗರಾಯನ ತಾಯಿ ಭಾಗೀರಥಮ್ಮನವರು ದೊಡ್ಡ ಯಜಮಾನಿ! ಪೂಜೆ ಪುರಸ್ಕಾರ ದಾನ ದಕ್ಷಿಣೆ ಮಾಡಿಕೊಂಡಿರುವ ಮಡೀ ಹೆಂಗಸು. ಸುಮಾರು ಅರುವತ್ತೈದು ವರ್ಷ ವಯಸ್ಸಿನ ಮೇಲಾಗಿದೆ. ಬಹಳ ಗಂಭೀರ. ಔದಾರ್ಯ ಸ್ವಭಾವದಲ್ಲಿ ಗಡಸು! ಶ್ಯಾಮಲೆಯು ಚಿಕ್ಕ ಯಜಮಾನಿ. ರಂಗರಾಯನು ಎಲ್ಲ ಕೆಲಸಗಳನ್ನೂ ಶ್ಯಾಮಲೆಗೇ ಹೇಳುತ್ತಾನೆ. ಅವಳು ಪ್ರತಿಯೊಂದನ್ನೂ ಅತ್ತೆಗೆ ವರದಿ ಮಾಡಬೇಕು. ರಂಗರಾಯನು ಬಹಳ ಧಾರಾಳಸ್ಥನಂತೆ ನಟಿಸುತ್ತಿದ್ದರೂ ಬಹಳ ಲೆಖ್ಖಾಚಾರಸ್ಥ. ಬಿಗಿ ಮುಷ್ಠಿ! ಅದು ಶ್ಯಾಮಲೆಗೆ ಗೋಚರವಾಗುತ್ತಿರಲಿಲ್ಲ. ಏಕೆಂದರೆ ಅವಳು ಬಡತನದಲ್ಲಿಯೇ ಬೆಳೆದವಳು. ಮನೆಗೆ ಬಂದು ಹೋಗುವವರು ಬಹುಮಂದಿ. ಯಾರಾರ ಅಂತಸ್ತುಗಳು ಹೇಗೋ ಶ್ಯಾಮಲೆಗೆ ತಿಳಿಯದು. ಸ್ವಲ್ಪ ವ್ಯತ್ಯಾಸ ವಾದರೆ ರಂಗರಾಯನಿಗೆ ಅಸಮಾಧಾನವಾಗುತ್ತಿತ್ತು. ಆದರೂ ಅವನಿಗೆ ಶ್ಯಾಮಲೆಯ ರೂಪಲಾವಣ್ಯಗಳು ಸೌಮ್ಯ ಸ್ವಭಾವ ಇದರಲ್ಲಿ ಯಾವ ಲೋಪ ದೋಷಗಳೂ ಕಾಣುತ್ತಿರಲಿಲ್ಲ. ಅವನ ವರಮಾನ ಬಹಳವಾಗಿತ್ತು. ಅದನ್ನು ಲೆಖ್ಖ ಹಾಕುವ ಶಕ್ತಿಯು ಶ್ಯಾಮಲೆಗೆ ಇರಲಿಲ್ಲ. ಅದನ್ನೆಲ್ಲಾ ಅವಳು ತಲೆಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಒಂದೊಂದು ಬಾರಿ ಅವಳಿಗೆ ತಾಯಿಯ ನೆನಪು ಬರುತ್ತಿತ್ತು. ಆಗ ತನ್ನ ಕೋಣೆಯಲ್ಲಿ ಕುಳಿತು ತನ್ನ ಮನೆಯವರನ್ನೆಲ್ಲಾ ನೆನೆ ನೆನೆದು ಅತ್ತುಬಿಡುತ್ತಿದ್ದಳು. ರಂಗರಾಯನು ಮೂವತ್ತೈದು ವರ್ಷದವನಲ್ಲ. ಅವನಿಗೆ ನಲವತ್ತೈದು ವರ್ಷ. ಅವನು ಶ್ಯಾಮಲೆಯನ್ನು ಬಹಳವಾಗಿ ಪ್ರೇಮಿ

ಸುತ್ತಿದ್ದನು. ಅವಳಿಗೆ ಪ್ರೇಮವೆಂದರೇನೆಂಬುದೇ ಗೊತ್ತಿರಲಿಲ್ಲ. ಅವಳು ಗೃಹಧರ್ಮದ ಗೃಹಿಣಿ. ಪತಿಭಕ್ತಿಯನ್ನು ಮಾಡುವ ಪತಿವ್ರತೆ. ಅವಳ ರೂಪ ಲಾವಣ್ಯ ತಾರುಣ್ಯಗಳ ಅರಿವು ಅವಳಿಗೆ ಅಷ್ಟಾಗಿ ಇರಲಿಲ್ಲ. ಒಂದೊಂದು ಬಾರಿ ಕನ್ನಡಿಯ ಮುಂದೆ ನಿಂತಾಗ ತಾನು ಚೆಲುವೆ ಎಂದುಕೊಳ್ಳುತ್ತಿದ್ದಳು. ಶ್ಯಾಮಲೆಗೆ ಊಟ ಉಪಚಾರಗಳಲ್ಲಾಗಲೀ ಬಟ್ಟೆಬರೆಗಳಿಗಾಗಲೀ ಯಾವ ಕೊರತೆಯೂ ಇರಲಿಲ್ಲ.

ಶ್ರಾವಣ ಮಾಸ ಬಂತು ಹಬ್ಬಹರಿದಿನಗಳ ತಿಂಗಳು. ಭಾಗೀರಥಮ್ಮನವರು ಎಲ್ಲ ಹಬ್ಬಹರಿದಿನಗಳೂ ಸಂಪ್ರದಾಯ ಪ್ರಕಾರ ಪೂಜೆ ಪುರಸ್ಕಾರಗಳು ನಡೆಯಬೇಕೆಂದು ಆಜ್ಞೆ ಮಾಡಿದರು. ಅದು ಶ್ಯಾಮಲೆಗೂ ಸಂತೋಷ. ಸಂಭ್ರಮದಿಂದ ಮಂಗಳಗೌರಿ ಪೂಜೆ ಮಾಡಿದಳು. ಸುತ್ತಮುತ್ತಿನ ಮನೆಗಳಲ್ಲಿ ಅರಿಶಿನ ಕುಂಕುಮಕ್ಕೆ ಕರೆಯಲು ಹೊರಟಳು. ಅವಳಿಗೆ ಯಾರ ಪರಿಚಯವೂ ಇಲ್ಲ. ಮನೆಯ ಕೆಲಸಕ್ಕೆ ಬರುತ್ತಿದ್ದ ಸಾವಿತ್ರಮ್ಮ ಮುತ್ತೈದೆ. ಆಕೆಯೇ ಹತ್ತಾರು ಮನೆಗಳಲ್ಲಿ ಕರೆಯುವುದಕ್ಕೆ ಶ್ಯಾಮಲೆಯ ಜೊತೆಯಲ್ಲಿ ಹೊರಟಳು. ಪಕ್ಕದ ಬೀದಿಯಲ್ಲಿಯೇ ಗಂಗಾಧರರಾಯನ ಮನೆ. ಅಲ್ಲಿಗೂ ಅರಿಶಿನ ಕುಂಕುಮಕ್ಕೆ ಕರೆಯಲು ಶ್ಯಾಮಲೆಯು ಹೋದಳು. ಗಂಗಾಧರರಾಯನು ಜೈಲಿನಲ್ಲಿದ್ದನು. ಕಮಲಮ್ಮನವರು ಬಂದ ಮುತ್ತೈದೆಯರನ್ನು ರತ್ನಗಂಬಳಿಯ ಮೇಲೆ ಕುಳ್ಳಿರಿಸಿ, ಯಾರ ಮನೆಯವರಮ್ಮಾ ಎಂದು ಕೇಳಿದಳು. ಜೊತೆಯಲ್ಲಿ ಬಂದಿದ್ದ ಸಾವಿತ್ರಮ್ಮನು ' ಇವರು ಸಾಹುಕಾರ್ ರಂಗಪ್ಪನವರ ಹೆಂಡತಿ ' ಎಂದು ಹೇಳಿದಳು. ಕಮಲಮ್ಮನವರು ಮಗಳನ್ನು ಅಪ್ಪಿಕೊಂಡಂತೆ ಅಪ್ಪಿಕೊಂಡು " ನೀನು ನಾಣಿಯ ತಂಗಿಯೇನೆ ? ನಿನ್ನ ಹೆಸರೇನು ಹೇಳು ? " ಎಂದು ಆದರದಿಂದ ಪ್ರಶ್ನಿಸಿದರು. " ನನ್ನ ಹೆಸರು ಶ್ಯಾಮಲಾ "

" ಶ್ಯಾಮಲಾ ! ನೀನು ಶಾಮಣ್ಣನವರ ಮಗಳು. ಈ ಊರಿಗೆ ಮದುವಣಗಿತ್ತಿಯಾಗಿ ಬಂದು ಆರು ತಿಂಗಳುಗಳಾಯಿತು. ನಮ್ಮ ಮನೆಯ ಮಗಳು ನೀನು ! ರಾಯರು ಜೈಲಿನಲ್ಲಿದ್ದಾರೆ. ಆದರಿಂದ ನಿನ್ನ ಮದುವೆಗೆ ಬರಲಿಲ್ಲ. ನಮ್ಮ ಮನೆಗೇಕೆ ನೀನು ಬರಲಿಲ್ಲ ? " ಎಂದರು. " ತಾರಾ ! ತಾರಾ ! ಇಲ್ಲಿ ಬಾ ! " ಎಂದು ಗಟ್ಟಿಯಾಗಿ ಮಗಳನ್ನು ಕೂಗಿದರು. ಮೇಲಿನಿಂದ ಸುಮಾರು

ಹದಿನೆಂಟು ವರ್ಷ ವಯಸ್ಸಿನ ತರುಣಿಯೊಬ್ಬಳು ಇಳಿದು ಬಂದಳು. "ನೋಡು! ಇವಳಾರು ಬಲ್ಲೆಯಾ? ನಾಣಿಯ ತಂಗಿ ಶ್ಯಾಮಲಾ! ರಂಗರಾಯರಿದ್ದಾರಲ್ಲೇ ಅವರ ಹೆಂಡತಿ." ತಾರೆಯು ನಗುತ್ತಾ ಸಮೀಪಕ್ಕೆ ಬಂದು "ಶ್ಯಾಮಲಾ! ಶ್ಯಾಮಲಾ!" ಎನ್ನುತ್ತಾ ಕೈಕುಲಕಿ ಹತ್ತಿರ ಕುಳಿತುಕೊಂಡಳು. ಕಮಲಮ್ಮನವರು "ಶ್ಯಾಮಲಾ! ನಿಮ್ಮಣ್ಣನ ಯೋಗಕ್ಷೇಮವೇನಾದರೂ ತಿಳಿಯಿತೇ?" ಎಂದು ಕುತೂಹಲದಿಂದ ಕೇಳಿದರು. ಶ್ಯಾಮಲೆಯ ಮುಖವು ಬಿಳಿಚಿಕೊಂಡಿತು. "ಇಲ್ಲ!" ಎಂದಳು. ಶ್ಯಾಮಲೆಯ ಕಣ್ಣಿನಲ್ಲಿ ನೀರು ತುಂಬಿತು. ಕಮಲಮ್ಮನವರು ಶ್ಯಾಮಲೆಯ ಕಣ್ಣೊರೆಸುತ್ತಾ "ಹಬ್ಬದ ದಿನ ಕಣ್ಣೀರು ಹಾಕಬಾರದಮ್ಮಾ. ನಾಣಿಯು ಹಾಸನದ ಜೈಲಿನಲ್ಲಿದ್ದಾನೆ. ನಮ್ಮ ಯಜಮಾನರ ಜೊತೆಯಲ್ಲಿಯೇ ಇದಾನೆ. ನಿನ್ನೆ ತಾನೇ ಕಾಗದ ಬಂದಿದೆ. ಕಾಗದದಲ್ಲೆಲ್ಲಾ ನಾಣಿಯ ವಿಷಯವೇ ಇದೆ." ಎಂದು ಹೇಳಿದರು. ಶ್ಯಾಮಲೆಯ ಮುಖವು ಅರಳಿತು. "ಲೋ! ವಾಸು! ವಾಸು! ನಿನ್ನೆ ಬಂದ ರಾಯರ ಕಾಗದ ತೆಗೆದುಕೊಂಡು ಬಾರೋ" ಎಂದು ಗಟ್ಟಿಯಾಗಿ ಕೂಗಿದರು. ಕಮಲಮ್ಮನವರ ಮಗ ವಾಸುವು ಲಕ್ಕೋಟೆಯನ್ನು ಕೈಲಿ ಹಿಡಿದುಕೊಂಡು ನಿಧಾನವಾಗಿ ಕೆಳಗಿಳಿದು ಬಂದು ತಾಯಿಯ ಎದುರಿನಲ್ಲಿ ನಿಂತುಕೊಂಡನು. ಒಂದು ಬಾರಿ ತಾಯಿಯ ಮುಖವನ್ನು ನೋಡಿ ಮತ್ತೊಮ್ಮೆ ಶ್ಯಾಮಲೆಯ ಮುಖವನ್ನೂ ದೃಷ್ಟಿಸಿ ನೋಡಿದನು ಕಮಲಮ್ಮನವರು "ಏನೋ ಹಾಗೆ ನೋಡುತ್ತೀ! ಯಾರೆಂದು ಗೊತ್ತಾಗಲಿಲ್ಲವೇ! ನಾಣಿಯ ತಂಗಿ ಶ್ಯಾಮಲಾ! ಆ ಕಾಗದವನ್ನು ಅವಳ ಕೈಗೆ ಕೊಡು ಓದಿಕೊಳ್ಳಲಿ" ಎಂದು ಹೇಳಿದರು. ವಾಸುವು ಕಾಗದವನ್ನು ಕಮಲಮ್ಮನವರ ಮುಂದಿಟ್ಟನು. ಕಮಲಮ್ಮನವರು ಲಕ್ಕೋಟೆಯಿಂದ ಕಾಗದವನ್ನು ತೆಗೆದು ಶ್ಯಾಮಲೆಯ ಕೈಗೆ ಕೊಡುತ್ತಾ "ಓದಿ ನೋಡಮ್ಮಾ!" ಎಂದರು. ಶ್ಯಾಮಲೆಯು ನೋಡಲಿಲ್ಲ. ಕಮಲಮ್ಮನವರು ಪುನಃ ನೋಡು! ಶ್ಯಾಮಲಾ, ನಮ್ಮಿಬ್ಬರ ಮನೆ ಗೃಹಕೃತ್ಯಗಳು ಬೇರೆ ಬೇರೆಯಲ್ಲ. ಈ ಕಾಗದವೆಲ್ಲಾ ನಾಣಿಯ ಕಥೆಯೇ" ಎಂದರು. ಆ ಕಾಗದದಲ್ಲಿ ಹೀಗಿತ್ತು :—

"ನಾವು ಇಲ್ಲಿ ಸುಖವಾಗಿದ್ದೇವೆ. ನಾಣಿಯು ನಮ್ಮ ಜೊತೆಯಲ್ಲೇ ಇದ್ದಾನೆ. ಸ್ನಾನ, ಊಟ, ಮಲಗುವುದು, ಕುಳಿತುಕೊಳ್ಳುವುದು ಎಲ್ಲವೂ

ಒಂದೇ ಕಡೇ! ನಾಣಿ ಬಲು ದೊಡ್ಡ ಮನಸ್ಸಿನ ಹುಡುಗ! ಅವನು ನಮ್ಮ ತಾರೆಯನ್ನು ಮದುವೆಯಾಗುವುದಿಲ್ಲವೆಂದು ಹೇಳಲಿಲ್ಲ. ಅವನ ತಂಗಿಯ ಮದುವೆಯಾಗಬೇಕು. ಅನಂತರ ಒಂದು ಕೆಲಸ ಸಿಕ್ಕಬೇಕು. ಅನಂತರ ಅವನು ಮದುವೆಗೆ ಸಿದ್ಧ. ಅದೇನೂ ಅಷ್ಟು ದೊಡ್ಡ ವಿಷಯವಲ್ಲ. ನಮಗೆ ಜೈಲಿನಿಂದ ಬಿಡುಗಡೆಯಾಗಬೇಕು. ಅದು ಯಾವಾಗ ಆಗುತ್ತದೋ ದೇವರೇ ಬಲ್ಲ. ನಾಣಿಯು ನನಗೆ ಅಳಿಯನ ಹಾಗೆಯಾದರೂ ಮಗ ನಂತೆಯೇ ಇದ್ದಾನೆ. ಈ ಕಾಗದವನ್ನು ಶ್ಯಾಮಲೆ ಒಂದು ಬಾರಿ ಓದಿ ದಳು. ಮತ್ತೊಮ್ಮೆ ಓದಿಕೊಂಡಳು. ಅವಳಿಗೆ ಅರ್ಧ ಅರ್ಧ ಅರ್ಥವಾಯಿತು. ಆದಾಗ್ಯೂ ಮುಖದಲ್ಲಿ ಸಂದೇಹದ ಚಿಹ್ನೆಯೇ ಇತ್ತು. ಕಮಲಮ್ಮನವರು "ನಿನಗೆ ಆ ಕಾಗದ ಅರ್ಥವಾಗಲಿಲ್ಲವೇ? ಶ್ಯಾಮಲಾ! ಈ ತಾರಾ ನನ್ನ ಮಗಳು., ಇವಳನ್ನು ನಿಮ್ಮಣ್ಣನಿಗೆ ಕೊಟ್ಟು ಲಗ್ನ ಮಾಡುವುದೆಂದು ಗೊತ್ತಾ ಗಿದೆ. ನಿನ್ನ ಮದುವೆಯಾದ ಸಂಗತಿ ಜೈಲಿನಲ್ಲಿರುವ ಅವರಿಗೆ ಗೊತ್ತಿಲ್ಲ ಎಂದು ಹೇಳಿದರು. ಶ್ಯಾಮಲೆಯು ಮತ್ತೊಮ್ಮೆ ತಾರಳ ಕಡೆಗೆ ನೋಡಿದಳು. ಪುನಃ ಕಮಲಮ್ಮನವರನ್ನೊಮ್ಮೆ ನೋಡಿದಳು. ಅವರಿಬ್ಬರನ್ನೂ ಅರಿಶಿನ ಕುಂಕುಮಕ್ಕೆ ಕರೆದು ಮನೆಗೆ ಹೊರಟಳು. ಕಮಲಮ್ಮನವರು ಕುಂಕುಮ ವಿಟ್ಟು ತಾಂಬೂಲವನ್ನು ಕೊಟ್ಟು, ಬಂದೇ ಬರುತ್ತೇನೆಂದು ಹೇಳಿ ಕಳುಹಿ ಸಿದರು.

ವಾಸುವು ಶ್ಯಾಮಲೆಯು ಮನೆ ಬಿಟ್ಟು ಹೋಗುವ ವರೆಗೆ ಅವಳನ್ನೇ ನೋಡುತ್ತಾ ನಿಂತಿದ್ದನು. ಎಂತಹ ಅನ್ಯಾಯ! ಇಷ್ಟು ಸುಂದರಿಯಾದ ಹುಡುಗಿಯನ್ನು ಆ ರಂಗರಾಯನಿಗೆ ಮದುವೆ ಮಾಡಿಕೊಟ್ಟಿದ್ದಾರಲ್ಲಾ! ಬಡತನದ ಮಹಿಮೆ! ಆ ನಾಣಿಗೆ ಗೊತ್ತಿಲ್ಲ. ಅವನು ಹೊರಗೆ ಇದ್ದಿದ್ದರೆ ಈ ಮದುವೆಯನ್ನು ಒಪ್ಪುತ್ತಿದ್ದನೇ? ಸರಿಯಾದ ವರಸಾಮ್ಯವು ಸಿಕ್ಕದಿದ್ದರೆ ಈ ಹುಡುಗಿಗೆ ಮದುವೆಯೇ ಇಲ್ಲದೇ ಇದ್ದಿದ್ದರೆ ತಪ್ಪೇನು? ಇದು ಸಮಾಜದ ಅನ್ಯಾಯ! ಎಂದುಕೊಂಡನು. ಮಹಾ ಸಮುದ್ರದಂತಹ ಸಮಾಜದಲ್ಲಿ ವಾಸು ವಿನಂಥಾ ಮರಳು ಕಣಗಳು ಎಷ್ಟೋ!

೯

ನವರಾತ್ರಿಯ ಸಮಯದಲ್ಲಿ ಶ್ಯಾಮಲೆಯು ಎರಡು ತಿಂಗಳ ಗರ್ಭವತಿಯಾಗಿದ್ದಳು. ರಂಗರಾಯರ ಮನೆಯಲ್ಲಿ ಪೂಜೆ ಪುರಸ್ಕಾರಗಳು ಈ ವರ್ಷ ಬಹಳವಾಗಿ ನಡೆಯಿತು. ಊಟ ಉಪಚಾರಗಳೂ ಸಂಭ್ರಮವಾಗಿ ನಡೆಯುತ್ತಿದ್ದುವು. ವೈದಿಕ ಬ್ರಾಹ್ಮಣರು ಬಂದು ಜಪ-ಪಾರಾಯಣಗಳನ್ನು ಮಾಡುತ್ತಿದ್ದರು. ರಂಗರಾಯನು ಅನೇಕ ಸ್ನೇಹಿತರನ್ನೂ ಕರೆಯುತ್ತಿದ್ದನು. ರಂಗರಾಯನು ಬಹು ಕಷ್ಟಪಟ್ಟು ದರ್ಬಾರಿಗೆ ಕರೆಸಿಕೊಳ್ಳುವ ಗೌರವವನ್ನೂ ಸಂಪಾದಿಸಿದ್ದನು. ರಾಯರು ದರ್ಬಾರಿಗೆ ಹೋಗುವ ವೈಖರಿಯೇ ಬೇರೆ! ದರ್ಬಾರಿಗಾಗಿ ಬಹು ಬೆಲೆ ಬಾಳುವ ದಿರಸನ್ನು ಹೊಲಿಸಿದ್ದನು. ರಂಗರಾಯನು ದರ್ಬಾರ್ ಡ್ರೆಸ್ಸನ್ನು ಹಾಕಿಕೊಳ್ಳುವಾಗ ಶ್ಯಾಮಲೆಯು ಎದುರಿಗೆ ನಿಂತಿರಬೇಕು. ಆ ಅಲಂಕಾರವನ್ನು ಅವಳು ಮೆಚ್ಚಬೇಕು. ದರ್ಬಾರಿನಿಂದ ಹಿಂತಿರುಗಿ ಬರುವ ಸಮಯಕ್ಕೆ ಅವಳು ಬಾಗಿಲಿನಲ್ಲಿ ನಿಂತಿರಬೇಕು. ಅವನನ್ನು ಎದುರುಗೊಂಡು ಡ್ರೆಸ್ಸಿಂಗ್ ರೂಮಿಗೆ ಅವನ ಜೊತೆಯಲ್ಲಿಯೇ ಹೋಗಬೇಕು. ಈ ಸಂಭ್ರಮವೆಲ್ಲವೂ ನವರಾತ್ರಿಯ ಹತ್ತು ದಿನಗಳು ನಡೆದುವು. ಶ್ಯಾಮಲೆಯು ಗರ್ಭವತಿಯಾಗಿದ್ದುದರಿಂದ ಅವನ ಆನಂದಕ್ಕೆ ಪಾರವೇ ಇರಲಿಲ್ಲ.

ನವರಾತ್ರಿ ಹಬ್ಬ ಮುಗಿಯುತ್ತಲೇ ಶ್ಯಾಮಲೆಗೆ ಜ್ವರ ಬರತೊಡಗಿತು. ಡಾಕ್ಟರ್ ಸುಬ್ಬರಾವ್ ಎಂಬುವವರು ದೊಡ್ಡ ಷಾಪ್ ಇಟ್ಟಿದ್ದರು. ಎಂ.ಬಿ.ಬಿ. ಎಸ್. ಪ್ಯಾಸ್ ಮಾಡಿ ಸರ್ಕಾರಿ ಕೆಲಸಕ್ಕೆ ಹೋಗಬಾರದೆಂದೂ ಸ್ವತಂತ್ರ ಜೀವನ ಮಾಡಬೇಕೆಂದೂ ಮೊದಲಿನಿಂದಲೂ ಸಂಕಲ್ಪ ಮಾಡಿದ್ದ ತರುಣ. ಷಾಪನ್ನು ಬಹಳ ಶೀಘ್ರವಿಯಿಂದಲೇ ನಡಸುತ್ತಿದ್ದರು. ಎಲ್. ಎಂ. ಪಿ. ಪ್ಯಾಸ್ ಮಾಡಿದ ಒಬ್ಬ ಅಸಿಸ್ಟೆಂಟ್—ಅವನ ಹೆಸರು ರಾಮಯ್ಯರ್. ಒಬ್ಬ ಕಾಂಪೌಂ

ಡರ್—ಮುನಿಸ್ವಾಮಿ, ಒಬ್ಬ ಆಳು-ಅವನ ಹೆಸರು ಪೆರುಮಾಳ್. ಇಷ್ಟು ಸಿಬ್ಬಂದಿ ಇದ್ದೂ ಒಬ್ಬ ಲೇಡೀ ಡಾಕ್ಟರನ್ನೂ ಇಡುವ ಅಭಿಲಾಷೆ ಇತ್ತು. ಆದರೆ ಕೆಟ್ಟ ಹೆಸರು ಬರಬಹುದೆಂದು ಅಂಜಿಕೆ ಇತ್ತು. ಆತನ ಪ್ರಾಕ್ಟೀಸೂ ಬಹು ಬೇಗನೆ ಅಭಿವೃದ್ಧಿಯಾಗಿತ್ತು. ಆತನಿಗೂ ರಂಗರಾಯನಿಗೂ 'ಜೆಂಟ್ಲ್‌ಮನ್ ಫ್ರೆಂಡ್‌ಷಿಪ್' ಇತ್ತು. ತಕ್ಷಣ ರಂಗರಾಯನು ಡಾಕ್ಟರ್ ಸುಬ್ಬರಾಯರನ್ನು ಕರೆದುಕೊಂಡು ಬರುವಂತೆ ಡ್ರೈವರಿನೊಡನೆ ಹೇಳಿ ಕಳುಹಿಸಿದನು. ಸುಬ್ಬ ರಾಯರು ಬಂದು ನೋಡಿದರು. ಏನೋ ಮಾತ್ರೆಗಳನ್ನೂ ಮತ್ತು ಔಷಧಿ ಯನ್ನೂ ಕಳಿಸುವುದಾಗಿ ಹೇಳಿ ಹೊರಟುಹೋದರು. ಔಷಧಿಯನ್ನು ಕೊಟ್ಟ ದ್ದಾಯಿತು. ಮಾರನೆಯ ದಿನವೂ ಜ್ವರ ಬಿಡಲಿಲ್ಲ. ಬೆಳಗ್ಗೆ ಹತ್ತು ಗಂಟೆಯ ಸಮಯದಲ್ಲಿ ಡಾಕ್ಟರು ಇನ್‌ಜಕ್ಷನ್ ಕೊಟ್ಟರು. ಆ ಸಮಯದಲ್ಲಿ "ಏನಮ್ಮಾ ನೀವು ಗರ್ಭಿಣಿಯೇ ?" ಎಂದು ಕೇಳಿದರು. ಶ್ಯಾಮಲೆಯು "ಹೌದು ! ಎರಡು ತಿಂಗಳು" ಎಂದಳು.

ಡಾಕ್ಟರು ಹೊರಗೆ ಬಂದು ರಂಗರಾಯರೊಡನೆ "ಏನ್ರಿ ಹೀಗೆ ಮಾಡಿ ದಿರಿ ! ನನಗೆ ಮೊದಲೇ ಹೇಳಬೇಡವೆ ? ನಿಮ್ಮ ಪತ್ನಿಯವರು ಗರ್ಭಿಣಿ. ಈ ಜ್ವರದ ವೇಗವನ್ನು ನೋಡಿದರೆ ಗರ್ಭಸ್ರಾವವಾಗಬಹುದು. ಲೇಡೀ ಡಾಕ್ಟ ರನ್ನು ಕರೆಸಿ ಮೊದಲು ತೋರಿಸಬೇಕು. ನನ್ನ ಮೇಲೆ ಭಾರ ಹಾಕ ಬೇಡಿ" ಎಂದು ಹೇಳಿ, ಪುನಃ ಸಂಧ್ಯಾಕಾಲ ಬರುತ್ತೇನೆಂದು ಹೊರಟು ಹೋದರು.

ರಂಗರಾಯನು ಕಾರಿನಲ್ಲಿ ಲೇಡಿ ಮೆಡಿಕಲ್ ಆಫೀಸರನ್ನು ಕರೆತಂದನು. ಅವರು ಬಂದು ಪರೀಕ್ಷೆ ಮಾಡಿದರು ; "ಏನು ಹೇಳುವುದಕ್ಕೂ ಸಾಧ್ಯವಿಲ್ಲ. ಡಾಕ್ಟರು ಸುಬ್ಬರಾಯರೇ ಔಷಧಿ ಕೊಡಲಿ ನಾನು ಯಾವಾಗ ಬೇಕಾದರೂ ಬರುತ್ತೇನೆ" ಎಂದು ಹೇಳಿದರು. ಆದರೆ ಇವರನ್ನು ನೀವು ಒಂದು ವಾರ ನಮ್ಮ ಆಸ್ಪತ್ರೆಯಲ್ಲಿಟ್ಟರೆ ಒಳ್ಳೆಯದೆಂದೂ ಹೇಳಿದರು. ರಂಗರಾಯನಿಗೆ ಜಂಗಾ ಬಲವೇ ಕುಸಿದು ಹೋಯಿತು. ಅವರಿಗೆ ಕೈ ಮುಗಿದು "ತಾಯಿ, ನೀವು ನಮ್ಮ ಮನೆಯಲ್ಲೇ ಚಿಕಿತ್ಸೆ ಮಾಡಬೇಕು. ಎಷ್ಟು ಹಣವಾದರೂ ಕೊಡುತ್ತೇನೆ" ಎಂದು ಕೇಳಿಕೊಂಡನು. ರಂಗರಾಯನ ಮೊದಲನೆಯ ಹೆಂಡತಿ ಆಸ್ಪತ್ರೆಯ

ಲ್ಲಿಯೇ ಮೃತಿ ಹೊಂದಿದ್ದಳು. ಪುನಃ ಶ್ಯಾಮಲೆಯನ್ನು ಆಸ್ಪತ್ರೆಗೆ ಕಳಿಸಲು ರಂಗರಾಯನಿಗೆ ಸುತರಾಂ ಇಷ್ಟವಿರಲಿಲ್ಲ. ಆ ಅಳುಕನ್ನು ಲೇಡೀ ಡಾಕ್ಟರು ಅರ್ಥ ಮಾಡಿಕೊಂಡರು. ಅವರು " ಹಾಗೆಯೇ ಆಗಲಿ! ನಾನು ಪ್ರತಿದಿನವೂ ಎರಡಾವರ್ತಿ ಬಂದು ನೋಡಿಕೊಂಡು ಹೋಗುತ್ತೇನೆ." ಎಂದು ಹೇಳಿ ಹೊರಟು ಹೋದರು. ಐದನೆಯ ದಿನ ರಾತ್ರಿ ಗರ್ಭಸ್ರಾವವಾಗಿ ಹೋಯಿತು. ಡಾಕ್ಟರು ಸುಬ್ಬರಾವ್ ಅಲ್ಲಿಯೇ ಇದ್ದರು. ಜ್ವರದ ವೇಗದಿಂದ ಶ್ಯಾಮಲೆಗೆ ಅಜ್ಞಾನಾವಸ್ಥೆಯು ಪ್ರಾಪ್ತವಾಗಿತ್ತು. ಲೇಡಿ ಡಾಕ್ಟರನ್ನು ಪುನಃ ಕರೆತಂದರು. ರಾತ್ರಿ ಹನ್ನೊಂದು ಘಂಟೆ ಹೊತ್ತಿನಲ್ಲಿ ಪೂರ್ತಿ ಗರ್ಭವು ಸ್ರಾವವಾಗಿ ಹೋಯಿತು. ಡಾಕ್ಟರುಗಳು ಔಷಧಿ ಕೊಟ್ಟರು. ಇನ್‌ಜಕ್ಷನ್ ಕೊಟ್ಟರು. ಇಬ್ಬರು ನರ್ಸ್‌ಗಳನ್ನು ಆಸ್ಪತ್ರೆಯಿಂದ ಕರೆಸಿ ರೋಗಿಯ ಹತ್ತಿರ ಇರಲು ಬಿಟ್ಟು ಇಬ್ಬರು ಡಾಕ್ಟರುಗಳೂ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ಈ ಖಾಯಿಲೆ ಸಮಯದಲ್ಲಿ ಪ್ರತಿದಿನವೂ ಕಮಲಮ್ಮನವರು ವಿಚಾರಿಸಿಕೊಂಡು ಹೋಗುತ್ತಿದ್ದರು. ರಂಗರಾಯನು ತಂತಿ ಕೊಟ್ಟು ಪಾರ್ವತಮ್ಮನವರನ್ನು ಕಳೆಸಿದನು. ಅವರು ವಿಶೇಷವಾಗಿ ರಾತ್ರಿ ಹಗಲೂ ಮಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಡಾಕ್ಟರ್ ಸುಬ್ಬರಾಯರೂ ಎರಡು ಹೊತ್ತೂ ಬಂದು ನೋಡಿಕೊಂಡು ಔಷಧಿ ಕೊಡುತ್ತಿದ್ದರು. ಲೇಡಿ ಡಾಕ್ಟರು ಒಂದು ವಾರ ದಿನವೂ ಬಂದು ಹೋಗುತ್ತಿದ್ದರು. ಎರಡು ತಿಂಗಳುಗಳಲ್ಲಿ ಶ್ಯಾಮಲೆಗೆ ಪೂರ್ತಾ ಗುಣವಾಯಿತು. ಆಗ ರಂಗರಾಯನಿಗೆ ಪರಮಾನಂದವಾಯಿತು. ಈ ಬಾರಿ ದೇವರು ಗಂಡವನ್ನು ಪಾರು ಮಾಡಿದ ಎಂದುಕೊಂಡನು. ಡಾಕ್ಟರ್ ಸುಬ್ಬರಾಯರಿಗೆ ಕಲಾಪತ್ತಿನ ಒಂದು ಜೊತೆ ಪಂಚೆಯನ್ನೂ ಐದುನೂರು ರೂಪಾಯಿಗಳನ್ನೂ ಕೊಟ್ಟನು. ಲೇಡಿ ಡಾಕ್ಟರಿಗೆ ಒಂದು ಸೀರೆಯನ್ನೂ ಇನ್ನೂರು ರೂಪಾಯಿಗಳನ್ನೂ ಕೊಟ್ಟನು. ಅನಂತರ ಡಾಕ್ಟರ್ ಸುಬ್ಬರಾಯರಂತೂ ಮನೆಯವರೇ ಆಗಿಹೋದರು.

ಶ್ಯಾಮಲೆಯು ಆರೋಗ್ಯವಾದ ಮೇಲೆ ಕಮಲಮ್ಮನವರು ಪಾರ್ವತಮ್ಮನವರನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ನಾಣಿಗೆ ತಾರೆಯನ್ನು ಕೊಟ್ಟು ಮದುವೆ ಮಾಡುವ ಮಾತುಗಳನ್ನಾಡಿದರು. ನಾಣಿಯು ಒಪ್ಪಿದ್ದಾ

ನೆಂದು ಹೇಳಿದರು. ಪಾರ್ವತಮ್ಮನು ಭಾವೀ ಸೊಸೆಯನ್ನು ನೋಡಿ ಸಂತಸ ಗೊಂಡರು. ಶ್ಯಾಮಲೆಯು ಕಮಲಮ್ಮನವರ ಮನೆಗೆ ಹೋಗಿ ಬರುತ್ತಿದ್ದಳು. ಪೂರ್ಣ ಅವಳಿಗೆ ಗುಣವಾದ ಮೇಲೆ ಪಾರ್ವತಮ್ಮನು ಬೆಂಗಳೂರಿಗೆ ಪ್ರಯಾಣ ಮಾಡಿದಳು.

ಶ್ಯಾಮಲೆಯು ಪ್ರತಿದಿನವೂ ಮಧ್ಯಾಹ್ನದ ಹೊತ್ತು ಕಮಲಮ್ಮನವರ ಮನೆಗೆ ಹೋಗಿ ಬರುತ್ತಿದ್ದಳು. ಭಾಗೀರಥಮ್ಮನವರು ಒಂದು ದಿನ ಅವಳನ್ನು ಪುರಾಣಕ್ಕೆ ಕರೆದುಕೊಂಡು ಹೋಗಿದ್ದರು. ಆ ರಾತ್ರಿ ಭೋಜನದ ಸಮಯ ದಲ್ಲಿ ರಂಗರಾಯನು "ಇವತ್ತು ಅಮ್ಮಾವರ ಸವಾರಿ ಎಲ್ಲಿ ಹೋಗಿತ್ತು ?" ಎಂದು ಕೇಳಿದನು.

ಭಾಗೀರಥಮ್ಮನವರು "ಮಧ್ಯಾಹ್ನ ಮನೆಯಲ್ಲಿ ಯಾರೂ ಇಲ್ಲ. ಬೇಜಾ ರಾಗುತ್ತದೆಂದು ನಾನೇ ಪುರಾಣಕ್ಕೆ ಕರೆದುಕೊಂಡು ಹೋಗಿದ್ದೆ" ಎಂದರು. ರಂಗರಾಯನು ನಗುತ್ತಾ "ಅಲ್ಲವಮ್ಮಾ! ಮುದುಕರು ಪುರಾಣಕ್ಕೆ ಹೋಗುವುದು ಸರಿ. ಹುಡುಗಿಯರು ಪುರಾಣಕ್ಕೆ ಹೋದರೆ ನೋಡಿದವರು ನಗುವುದಿಲ್ಲವೇ ?" ಎಂದನು. ಭಾಗೀರಥಮ್ಮನವರು ಏನೂ ಮಾತನಾ ಡಲಿಲ್ಲ.

ಶ್ಯಾಮಲೆಯು ಖಾಯಿಲೆ ಬಿದ್ದು ಎದ್ದ ಮೇಲೆ ರಂಗರಾಯನ ಪ್ರೇಮವು ಇಮ್ಮಡಿಯಾಗಿತ್ತು. ಅಂದು ರಾತ್ರಿ ಶ್ಯಾಮಲೆಯು ಮಲಗುವ ಮನೆಗೆ ಬಂದಾಗ ರಂಗರಾಯನು "ಶ್ಯಾಮಲಾ! ಪುರಾಣಿಕರು ಏನು ಪುರಾಣ ಹೇಳಿದರು ?" ಎಂದು ಕೇಳಿದನು.

"ಪುರಾಣಿಕರು ಪುರಾಣವನ್ನು ಚೆನ್ನಾಗಿಯೇ ಹೇಳಿದರು. ಅತ್ತೆಯವ ರೊಡನೆ ನೀವು ಅಲ್ಲಗಳೆದಿರಿ."

"ಶ್ಯಾಮಲಾ! ಪುರಾಣವು ಎಷ್ಟೇ ಚೆನ್ನಾಗಿರಲಿ, ನೀನು ಅಲ್ಲಿ ಹೋಗಿ ಪುರಾಣ ಕೇಳುವುದು ನನಗೆ ನಾಚಿಗೆಗೇಡು. ನಿನಗೆ ಮಧ್ಯಾಹ್ನದ ಹೊತ್ತು ಕಾಲ ಕಳೆಯುವುದು ಕಷ್ಟವಾದರೆ ಸಂಗೀತವನ್ನೋ ವೀಣೆಯನ್ನೋ ಕಲಿಸಿ ಕೊಡಲು ವಿದ್ವಾಂಸರನ್ನು ಗೊತ್ತು ಮಾಡುತ್ತೇನೆ."

"ಅದೆಲ್ಲಾ ನನಗೆ ಬೇಡ. ಮನೆಯ ಕೆಲಸಗಳನ್ನೇ ಮಾಡುತ್ತೇನೆ. ಈ

ಪುರಾಣವನ್ನು ನಮ್ಮ ಮನೆಯಲ್ಲಿಯೇ ಹೇಳಿಸಿದರೆ ಅತ್ತೆಮ್ಮನವರಿಗೂ ಅನು ಕೂಲವಾಗುತ್ತದೆ. ನಾನೂ ಪುಣ್ಯಕಥೆಗಳನ್ನು ಕೇಳಬಹುದು."

"ಅದೂ ಸರಿಯೇ! ನಿನ್ನ ಇಷ್ಟದಂತೆಯೇ ಮಾಡುತ್ತೇನೆ."

"ಶ್ಯಾಮಲಾ! ನೀನು ದಿನವೂ ಕಮಲಮ್ಮನವರ ಮನೆಗೆ ಹೋಗುತ್ತೀ ಯಲ್ಲ—ಅವರಿಗೂ ನಿನಗೂ ಎಲ್ಲಿಯ ಪರಿಚಯ?"

"ನನಗೆ ಪರಿಚಯವಿರಲಿಲ್ಲ. ಅವರ ಮನೆಗೆ ಅರಿಸಿನ ಕುಂಕುಮಕ್ಕೆ ಕರೆಯಲು ಹೋಗಿದ್ದಾಗ ಪರಿಚಯವಾಯಿತು. ಆದರೆ ನಮ್ಮ ತಂದೆಯವರೂ ಕಮಲಮ್ಮನವರ ಯಜಮಾನರೂ ಬಾಲ್ಯ ಸ್ನೇಹಿತರಂತೆ."

"ಶ್ಯಾಮಲಾ! ಆ ಕಮಲಮ್ಮ ಬಹು ಗಂಡುಬೀರಿ. ಗಡಸು ಹೆಂಗ ಸೆಂದೂ ಕೇಳಿದ್ದೇನೆ."

"ಹಾಗೇನೂ ಕಾಣುವುದಿಲ್ಲ. ದೊಡ್ಡ ಸಂಸಾರಿಗಳು. ಮೃದು ಸ್ವಭಾವ! ಸರಳ ಹೃದಯ!"

"ನಿನಗೆ ಎಲ್ಲರೂ ಒಳ್ಳೆಯವರಾಗಿಯೇ ಕಾಣುತ್ತಾರೆ. ನನಗೆ ಗೊತ್ತಿ ಲ್ಲವೇ ಅವರ ಚಾಳಿ. ಆ ಗಂಗಾಧರರಾಯ ಬಲು ಜಂಭಗಾರ. ಹೊರಗೆಲ್ಲಾ ಜಂಭವಾಗಿ ಮಾತನಾಡುತ್ತಾನೆ. ಮನೆಯೊಳಗೆ ಹೋದರೆ ಬೆಕ್ಕಿನಂತೆ ಬಾಲ ಮುದುರಿಕೊಳ್ಳುತ್ತಾನೆ. ಎಲ್ಲವೂ ಕಮಲಮ್ಮನವರ ದರ್ಬಾರೇ! ನೀನೂ ಕಮಲಮ್ಮನವರಂತೆ ನಮ್ಮ ಮನೆಯಲ್ಲಿ ದರ್ಬಾರು ಮಾಡಬೇಕೆಂದು ಆಶೆ ಯೇನು?"

"ಈ ಮನೆಯಲ್ಲಿ ನಾನು ಯಾರ ಮೇಲೆ ದರ್ಬಾರು ಮಾಡಬೇಕು?"

"ನನ್ನ ಮೇಲೆ—ನಾನಿದ್ದೇನಲ್ಲಾ, ನೀನು ಹೇಳಿದ ಹಾಗೆ ಕೇಳುವ ಬೊಂಬೆ!"

"ನಿಮ್ಮ ಮೇಲೆ ನಾನು ದರ್ಬಾರು ಮಾಡುವುದೇ! ನೀವು ನನ್ನ ಸ್ವಾಮಿ ನಾನು ನಿಮ್ಮನ್ನು ದೇವರೆಂದೇ ಭಾವನೆ ಮಾಡಿದ್ದೇನೆ."

ರಂಗರಾಯನ ಆನಂದಕ್ಕೆ ಪಾರವಿಲ್ಲ. ಎರಡು ಕೈಗಳಿಂದಲೂ ಶ್ಯಾಮಲೆ ಯನ್ನು ಬಿಗಿದಪ್ಪಿ ಮುತ್ತಿಟ್ಟನು. ನೀನು ನನ್ನ ಜೀವನದ ಸರ್ವಸ್ವ ಎಂದು ಮತ್ತೊಮ್ಮೆ ಆಲಿಂಗಿಸಿದನು.

ರಂಗರಾಯನ ಸಂಸಾರವು ಸುಖಮಯವಾಗಿತ್ತು. ಅವನ ವ್ಯಾಪಾರವು ದಿನದಿನಕ್ಕೂ ಅಭಿವೃದ್ಧಿಗೊಳ್ಳುತ್ತಿತ್ತು. ತನ್ನ ಹತ್ತಿರ ಬಂದವರಿಗೆ ಇಷ್ಟೋ ಅಷ್ಟೋ ಸಹಾಯ ಮಾಡುತ್ತಿದ್ದನು. ಅವನ ಸ್ನೇಹಿತರೆಲ್ಲರೂ ಅವನನ್ನು ಉದಾರಿಯೆಂದು ಹೊಗಳುತ್ತಿದ್ದರು. ರಂಗರಾಯ ಮಹರ್ಷಿಗಳು ಹೇಳಿರುವ 'ಧನ್ಯೋಗೃಹಸ್ಥಾಶ್ರಮಃ' ಎಂಬ ಮಾತು ತನ್ನಲ್ಲಿಯೇ ಸಂಪೂರ್ಣವಾಗಿದೆ ಎಂದುಕೊಳ್ಳುತ್ತಿದ್ದನು.

## ೧೦

ಶ್ಯಾಮಲೆಯ ಅನಾರೋಗ್ಯ ಸಮಯದಲ್ಲಿ ಡಾಕ್ಟರ್ ಸುಬ್ಬರಾಯರಿಗೂ ರಂಗರಾಯನಿಗೂ ಸ್ನೇಹ ವಿಶ್ವಾಸಗಳು ಬೆಳೆಯಿತು. ಡಾಕ್ಟರು ರಂಗರಾಯನಿಗೆ ಪರಮ ಮಿತ್ರ. ಸಂಧ್ಯಾಕಾಲ ಅವರಿಬ್ಬರೂ ಹೆಚ್ಚಾಗಿ ಸೇರಲು ಆರಂಭವಾಯಿತು. ಆ ಸಹವಾಸದಲ್ಲಿ ರಂಗರಾಯನು ಸ್ವಲ್ಪ ಸ್ವಲ್ಪ ಮದ್ಯ ಸೇವನೆಗೆ ಆರಂಭಿಸಿದನು. ಮೊದಮೊದಲು ಶ್ಯಾಮಲೆಗೆ ಇದು ತಿಳಿಯಲಿಲ್ಲ. ಎರಡು ಮೂರು ತಿಂಗಳುಗಳಲ್ಲಿ ಶ್ಯಾಮಲೆಗೆ ರಂಗರಾಯನು ಮದ್ಯ ಸೇವನೆ ಮಾಡುತ್ತಾನೆಂದು ತಿಳಿದುಹೋಯಿತು. ರಾತ್ರಿ ಮನೆಗೆ ಬರುವುದು ವೇಳೆ ಮೀರುತ್ತಾ ಬಂದಿತು. ಒಂದೆರಡು ಬಾರಿ ಭಾಗೀರಥಮ್ಮನು ಆಕ್ಷೇಪಿಸಿದಳು. ರಂಗರಾಯನು ಏನೇನೋ ನೆವ ಹೇಳಿಬಿಡುತ್ತಿದ್ದನು.

ಶ್ಯಾಮಲೆಯು ರಂಗರಾಯನು ಮನೆಗೆ ಬರುವ ವರೆಗೆ ಊಟ ಮಾಡುತ್ತಿರಲಿಲ್ಲ. ಕಾದು ಕುಳಿತಿರುತ್ತಿದ್ದಳು. ರಂಗರಾಯನು " ನೀನು ಊಟ ಮಾಡಿ ಮಲಗಿಕೋ ! " ಎಂದು ಎರಡು ಮೂರು ಬಾರಿ ಹೇಳಿದ್ದನು. ಒಂದು ದಿನ ರಂಗರಾಯನು ಬರವುದಕ್ಕೆ ಅರ್ಧರಾತ್ರಿ ಮೀರಿತ್ತು. ಮನೆಗೆ ಬರುತ್ತಲೇ ಶ್ಯಾಮಲೆಯು, " ಊಟ ಮಾಡಿ ! " ಎಂದು ಹೇಳಿದಳು. ರಂಗರಾಯನು ' ನನಗೆ ಊಟ ಬೇಡ. ಸಂಧ್ಯಾಕಾಲ ಸ್ನೇಹಿತರೊಡನೆ ತಿಂಡಿ ತಿಂದಿದ್ದೇನೆ " ಎಂದನು. ಶ್ಯಾಮಲೆಯು ಮರುಮಾತಾಡದೇ ತನ್ನ ಮಂಚದ ಮೇಲೆ ಹೋಗಿ ಮಲಗಿದಳು. ರಂಗರಾಯನು " ನಿನಗೆ ಊಟವಾಯಿತೇ ? " ಎಂದು ಕೇಳಿದನು.

" ಇಲ್ಲ ನಾನು ಊಟ ಮಾಡುವುದಿಲ್ಲ. ಈಗ ಅರ್ಧರಾತ್ರಿಯಾಗಿದೆ " ಎಂದು ಹೇಳಿದಳು. ರಂಗರಾಯನಿಗೆ ತಡೆಯಲಾಗದಷ್ಟು ಕೋಪ ಬಂದಿತು. " ಎಲ್ಲಾದರೂ ಹಾಳಾಗಿ ಹೋಗು. ಪುನಃ ಖಾಯಿಲೇ ಬೀಳುತ್ತಿ " ಎಂದು

ಹೇಳಿ ತನ್ನ ಹಾಸಿಗೆಯ ಮೇಲೆ ಹೋಗಿ ಮಲಗಿಕೊಂಡನು. ಶ್ಯಾಮಲೆಗೆ ಅಳು ಬಂತು. ಅತ್ತು ಅತ್ತು ಆ ರಾತ್ರಿಯನ್ನೂ ಕಳೆದಳು.

ಮರುದಿನ ಪ್ರಾತಃಕಾಲ ರಂಗರಾಯನು ಶ್ಯಾಮಲೆಯ ಮುಖವನ್ನೂ ನೋಡಿದನು. ಸಪ್ಪಗಾಗಿತ್ತು. ಕಣ್ಣುಗಳು ಕೆಂಪಾಗಿದ್ದುವು. "ಇದೇನು ಶ್ಯಾಮಲಾ ? ನಿನ್ನ ಮುಖವು ಹೀಗಿದೆ. ಕಣ್ಣುಗಳು ಕೆಂಪಗಿವೆ ?" ಎಂದು ಕೇಳಿದನು.

"ನನಗೇನೂ ಆಗಿಲ್ಲ. ಸರಿಯಾಗಿಯೇ ಇದೇನೆ" ಎಂದು ಹೇಳಿ ಅವಳು ಹೊರಟು ಹೋದಳು.

ರಂಗರಾಯನ ಮನಸ್ಸಿಗೆ ತನ್ನ ಗುಟ್ಟು ಶ್ಯಾಮಲಾಗೆ ತಿಳಿದಿದೆಯೆಂದು ಹೊಳೆಯಿತು. ಆ ದಿನವೆಲ್ಲಾ ಅವನು ಯೋಚನೆಯಲ್ಲಿದ್ದನು. ಮದ್ಯ ಪಾನಕ್ಕಿಂತಲೂ ಶ್ಯಾಮಲೆಯ ಪ್ರೇಮವು ಅಮೋಘವಾದದ್ದೆಂದು ತೋರಿತು. ಮದ್ಯಪಾನವನ್ನು ಬಿಟ್ಟು ಬಿಡಬೇಕು ಎಂದು ನಿರ್ಧಾರ ಮಾಡಿದನು. ಆ ದಿನ ವೆಲ್ಲಾ ಬಿಗಿಯಾಗಿಯೇ ಇದ್ದನು. ಸಂಧ್ಯಾಕಾಲ ಡಾಕ್ಟರ ಮನೆಗೆ ಮಾಮೂಲಿ ನಂತೆ ಹೋಗಿದ್ದನು. "ಡಾಕ್ಟರೇ ಇವತ್ತು ನನಗೆ ಕೆಲಸವಿದೆ" ಎಂದು ಹೇಳಿ ಕಾರಿನಲ್ಲಿ ಕುಳಿತು ಹೊರಟುಬಿಟ್ಟರು. ರಂಗರಾಯನು, ಆ ದಿನ ಯಾವುದೋ ದೊಡ್ಡ ಯುದ್ಧವನ್ನು ಜಯಿಸಿದವನಂತೆ ಸಂತೋಷಪಟ್ಟು ಕೊಂಡನು.

ಅವನು ಆ ದಿನ ಬೇಗನೆ ಮನೆಗೆ ಬಂದನು. ಶ್ಯಾಮಲಾಗೆ ಆಶ್ಚರ್ಯ ವಾಯಿತು. ಮಹಡಿಯ ಮೇಲಿದ್ದ ರಂಗರಾಯನ ಕೋಣೆಗೆ ಹೋದಳು. ರಂಗರಾಯನು ಶ್ಯಾಮಲೆಯ ನಗುಮೊಗವನ್ನು ನೋಡಿ, "ಇದೇನು ಶ್ಯಾಮಲಾ, ಇಷ್ಟು ಸಂತೋಷವಾಗಿರುವೆ ?" ಎಂದು ಕೇಳಿದನು.

"ಏನೂ ಇಲ್ಲ. ನೀವು ಇಷ್ಟು ಬೇಗ ಮನೆಗೆ ಬಂದುದು ಆಶ್ಚರ್ಯ ವಾಗಿದೆ!" ಎಂದಳು.

"ನಿನ್ನ ಆಗ್ರಹಕ್ಕೆ ಭಯಪಟ್ಟು ಬಂದುಬಿಟ್ಟೆ. ನಿನಗಿಂತಲೂ ನನಗೆ ಯಾವುದೂ ದೊಡ್ಡದಲ್ಲ" ಎಂದನು. ಶ್ಯಾಮಲಾ ರಂಗರಾಯನ ಪಕ್ಕದಲ್ಲಿ ಬಂದು ನಿಂತು, "ಅದು ನಿಮ್ಮ ಪ್ರೀತಿ! ನನ್ನ ಭಾಗ್ಯ" ಎಂದಳು. ರಂಗ

ರಾಯನು ಶ್ಯಾಮಲೆಯ ಗಲ್ಲವನ್ನೆತ್ತಿ ಮುದ್ದಿಟ್ಟನು.

ಎಂಟು ಹತ್ತು ದಿನಗಳು ರಂಗರಾಯನು ಡಾಕ್ಟರ ಮನೆಗೆ ಹೋಗಲೇ ಇಲ್ಲ. ಡಾಕ್ಟರೂ ಅದನ್ನು ಗಮನಿಸಲಿಲ್ಲ. ಅವರು ' ಜಂಟ್ಲ್‌ಮನ್.' ಅವರಿಗೆ ಮದ್ಯಪಾನವು ತಪ್ಪೆಂದು ಯಾವಾಗಲೂ ತೋರಿರಲೇ ಇಲ್ಲ. ಅವರು ಏಕಾಂಗಿ. ಅವರಿಗೆ ಹೆಂಡತಿ ಮಕ್ಕಳೂ ಇಲ್ಲ ; ಗುರುಹಿರಿಯರ ಕಾಟವೂ ಇಲ್ಲ. ಸಂಧ್ಯಾ ಕಾಲದಲ್ಲಿ ಅವರಿಗೆ ಮದ್ಯಸೇವನೆಗಿಂತ ಪ್ರಿಯವಾದುದು ಯಾವುದೂ ಇರಲಿಲ್ಲ. ಆದುದರಿಂದ ಅವರ ಬುದ್ಧಿಯಲ್ಲಿ ಯಾವ ವ್ಯತ್ಯಾಸವೂ ಉಂಟಾಗುತ್ತಿರಲಿಲ್ಲ. ಅವರು ರಂಗರಾಯನನ್ನು ಪ್ರಯತ್ನಪೂರ್ವಕವಾಗಿ ಆಶ್ರಯಿಸಿದವರಲ್ಲ. ಹೇಗೋ ಸ್ನೇಹವಾಯಿತು. ಮದ್ಯಪಾನ ಮಾಡದಿದ್ದ ಮಾತ್ರಕ್ಕೆ ಸ್ನೇಹ ಭಾವಕ್ಕೆ ಯಾವ ಲೋಪವೂ ಇರಲಿಲ್ಲ. ರಂಗರಾಯನು ಮದ್ಯಪಾನ ಮಾಡು ವುದರಿಂದ ಡಾಕ್ಟರಿಗೆ ಲಾಭವೇನೂ ಇರಲಿಲ್ಲ.

ರಂಗರಾಯನಿಗೆ ಬ್ರಾಂದಿ, ವಿಸ್ಕಿಯ ಮೇಲಿನ ಚಪಲವೋ ಡಾಕ್ಟರ ಸ್ನೇಹದ ಚಪಲವೋ ಅವನಿಗೆ ಗೊತ್ತಿಲ್ಲ. ಪುನಃ ಡಾಕ್ಟರ್ ಮನೆಗೆ ಹಾಜರ್. ಡಾಕ್ಟರ್ ಗ್ಲಾಸ್ ಟಮ್ಲರ್‌ನಲ್ಲಿ ವಿಸ್ಕಿ ಆಸ್ವಾದನ ಮಾಡುತ್ತಾ " ರಂಗರಾವ್ ! ಏನು ದರ್ಶನ ಕೊಟ್ಟುಬಿಟ್ಟೆ ? ಅಪರೂಪದ ಸಾಹುಕಾರ ! ಏನಯ್ಯಾ ಸಮಾ ಚಾರ ?" ಎಂದರು.

ರಂಗರಾವ್ " ಅದೆಲ್ಲಾ ಇರಲಿ ಡಾಕ್ಟರ್, ನನಗೇನೂ ಉಳಿದಿಲ್ಲವೇ ನಯ್ಯಾ" ಎನ್ನುತ್ತಾ ಆರಾಮ ಕುರ್ಚಿಯ ಮೇಲೆ ಕುಳಿತುಕೊಂಡನು. ಡಾಕ್ಟರ್ ಟಮ್ಲರ್‌ನಲ್ಲಿ ಸೋಡಾ ಹಾಕಿ ವಿಸ್ಕಿ ಬೆರೆಸಿ ರಂಗರಾಯನ ಕೈಲಿ ಕೊಟ್ಟರು. ರಂಗರಾವ್ ಕೊಂಚ ಕೊಂಚವಾಗಿ ಆತ್ಮಾರ್ಪಣ ಮಾಡಿಕೊಂಡನು. ಆ ದಿನ ಕೊಂಚ ಹೆಚ್ಚಾಗಿಯೇ ಕುಡಿದಿರಬಹುದು. ಮನೆಗೆ ಬರುವುದು ಕಷ್ಟವಾಗಿತ್ತು. ಡಾಕ್ಟರ್ ರಂಗರಾಯನನ್ನು ಮನೆಗೆ ಹೋಗಬೇಡವೆಂದು ಎಷ್ಟೋ ತಡೆದರು. ರಂಗರಾಯನು ಮನೆಗೆ ಹೋಗಲೇ ಬೇಕೆಂದು ಹಠ ಹಿಡಿದನು. ಡಾಕ್ಟರೇ ಹೋಗಿ ರಂಗರಾಯನನ್ನು ಮನೆಗೆ ಬಿಟ್ಟು ಬಂದರು. ರಂಗರಾಯನು ತೂಗಾ ಡುತ್ತಾ ಮಹಡಿಯ ಮೆಟ್ಟಲುಗಳನ್ನು ಹತ್ತಿ ತನ್ನ ಕೋಣೆಗೆ ಹೋದನು. ತನ್ನ ಮಂಚದ ಮೇಲೆ ಕುಳಿತುಕೊಂಡು " ಶ್ಯಾಮಲಾ ! ಶ್ಯಾಮಲಾ ! ಇಲ್ಲಿ

ಬಾ!" ಎಂದು ಕೂಗಿದನು. ಆ ಸ್ವರೂಪವನ್ನು ನೋಡಿ ಶ್ಯಾಮಲಾ ನಡ ಗಿದಳು. ಆದರೂ ಎದುರಿಗೆ ಬಂದು ನಿಂತಳು. ರಂಗರಾಯನು ತೊದಲ ನುಡಿಯಿಂದ "ಶ್ಯಾಮಲಾ! ಶ್ಯಾಮಲಾ! ಈ ದಿನ ನಿನ್ನ ಕೈಯಿಂದಲೇ ಮದ ಕುಡಿಯಬೇಕು, ತಂದು ಕೊಡು" ಎಂದು ಗದ್ದರಿಸಿದನು. ಶ್ಯಾಮಲೆಯು ಕಕ್ಕಾಬಿಕ್ಕಿಯಾಗಿ ನಿಂತಳು.

"ಮುಂಡೆ! ಕೊಡುವುದಿಲ್ಲವೇ ನೀನೇ ನನ್ನ ಸುಖಕ್ಕೆ ಅಡ್ಡಿ ನಿನ್ನನ್ನು ಕೊಂದು ಹಾಕಿಬಿಡುತ್ತೇನೆ." ಎಂದು ಕೂಗುತ್ತಾ ಎದ್ದು ಶ್ಯಾಮಲೆಯ ಕಪಾಲಕ್ಕೆ ಒಂದು ಏಟು ಕೊಟ್ಟನು. ಶ್ಯಾಮಲಾ ತಲೆ ತಿರುಗಿ ದೊಪ್ಪನೆ ಕೆಳಕ್ಕೆ ಬಿದ್ದಳು. ರಂಗರಾಯನು ನಗುತ್ತಾ ಹಾಗೆಯೇ ಆಗಬೇಕು ಎಂದ ಕಾಲಿನಿಂದ ಒದೆದು ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡನು.

ಶ್ಯಾಮಲೆಗೆ ಜ್ಞಾನ ಬರುವ ಹೊತ್ತಿಗೆ ಬೆಳಗಿನ ಝಾವವಾಗಿತ್ತು ಉಟ್ಟ ಬಟ್ಟೆಯನ್ನು ಸರಿಪಡಿಸಿಕೊಳ್ಳುತ್ತಾ ಮೇಲಕ್ಕೆದ್ದಳು ದೀಪವು ಹಾಗೆಯೆ ಉರಿಯುತ್ತಿತ್ತು. ಒಂದು ಬಾರಿ ರಂಗರಾಯನ ಕಡೆ ತಿರುಗಿ ನೋಡಿ ತನ್ನ ಮಂಚದ ಮೇಲೆ ಹೋಗಿ ಕುಳಿತುಕೊಂಡಳು. ಒಂದರ ಮೇಲೊಂದ ಯೋಚನೆಗಳು ಬರಲಾರಂಭಿಸಿದುವು. ಈ ಮನೆಯನ್ನು ಬಿಟ್ಟು ಹೊರಟು ಹೋಗುವುದೆಂಬ ಸಿದ್ಧಾಂತಕ್ಕೆ ಬಂದಳು. ಎಲ್ಲಿಗೆ ಹೋಗಬೇಕು ತಾಯಿಯ ಮನೆಯ ಜ್ಞಾಪಕ ಬಂತು. ತಾಯಿಗೆ ಏನು ಹೇಳಲಿ. ಅವಳಿಗೆ ಹೇಗೆ ಮುಖ ತೋರಿಸಲಿ ಎಂದುಕೊಂಡಳು. ಈ ಜಗತ್ತಿನಲ್ಲಿ ಅವಳಿಗೆ ಹೋಗಲು ಎಲ್ಲೂ ಸ್ಥಳವಿಲ್ಲ. ಮದುವೆಯ ಬಾಳು ಇಷ್ಟೇನೇ? ಎಂದ ಕೊಂಡಳು. ಕಡೆಗೆ ಭಾವಿಗೆ ಬಿದ್ದು ಪ್ರಾಣವನ್ನು ಕಳೆದುಕೊಳ್ಳಬೇಕೆಂದ ನಿಶ್ಚಯ ಮಾಡಿಕೊಂಡಳು. ಕೋಣೆಯಿಂದ ಹೊರಗೆ ಹೊರಟು ದಡದಡನೆ ಮೆಟ್ಟಲುಗಳನ್ನಿಳಿದಳು. ಹಿಂದುಗಡೆಯ ಬಾಗಿಲು ತೆಗೆದಳು. ಆ ಶಬ್ದ ವನ್ನು ಕೇಳಿ ಪೆರುಮಾಳನು ಬಂದು, "ಅಮ್ಮಾ! ಬಾಗಿಲು ತೆರೆಯಲೇ? ಎಂದು ಕೇಳಿದನು. ಶ್ಯಾಮಲಾ ಮಾತನಾಡಲಿಲ್ಲ. ಅವನನ್ನೊಮ್ಮೆ ದುರ ದುರನೆ ನೋಡಿ ಪುನಃ ಹಿಂದಕ್ಕೆ ಹೋಗಿ ತನ್ನ ಕೋಣೆಯಲ್ಲಿ ಮಲ ಕೊಂಡಳು

ಬೆಳಗಾಯಿತು. ಎಂಟು ಒಂಭತ್ತು ಗಂಟೆಯಾಯಿತು. ಶ್ಯಾಮಲಾ ಕೆಳಗಿಳಿದು ಬರಲಿಲ್ಲ. ರಂಗರಾಯನು ಕೆಳಗಿಳಿದು ಬಂದು ಪರಿಚಾರಕನು ತಂದು ಕೊಟ್ಟ ಕಾಫಿಯನ್ನು ಕುಡಿದು ಹಜಾರದಲ್ಲಿ ಸೋಫಾದ ಮೇಲೆ ಕುಳಿತು ಬಿಟ್ಟಿದ್ದನು. ಅವನೂ ಶ್ಯಾಮಲಾ ಇಳಿದು ಬರುವುದನ್ನೇ ನಿರೀಕ್ಷಣೆ ಮಾಡು ತ್ತಿದ್ದನು. ಎಷ್ಟು ಹೊತ್ತಾದರೂ ಶ್ಯಾಮಲಾ ಕೆಳಗೆ ಬರಲಿಲ್ಲ. ಭಾಗೀರಥ ಮ್ಮನವರು ಸ್ನಾನ ಪೂಜಾದಿಗಳನ್ನು ಅಷ್ಟು ಹೊತ್ತಿಗೆ ಮುಗಿಸಿದ್ದರು. ಸಾವಿತ್ರಮ್ಮನನ್ನು ಕುರಿತು “ ಚಿಕ್ಕ ಯಜಮಾನಿ ಇಷ್ಟು ಹೊತ್ತಾದರೂ ಏಕೆ ಕೆಳಗಿಳಿದು ಬರಲಿಲ್ಲ? ” ಎಂದು ಪ್ರಶ್ನೆ ಮಾಡಿದರು. ಸಾವಿತ್ರಮ್ಮನು ಮಹ ಡಿಯ ಮೇಲೆ ಹೋಗಿ, ಶ್ಯಾಮಲಾ ಬೊಕ್ಕ ಬೋರಲಾಗಿ ಮಲಗಿದ್ದುದನ್ನು ನೋಡಿದಳು. ಹತ್ತಿರ ಹೋಗಿ ಬೆನ್ನು ತಟ್ಟಿದಳು. ಶ್ಯಾಮಲಾ ಮಾತನಾಡ ಲಿಲ್ಲ. ಶರೀರವೆಲ್ಲವೂ ಸುಡುತ್ತಿತ್ತು. ಸಾವಿತ್ರಮ್ಮನು ಕೆಳಗಿಳಿದು ಬಂದು ಭಾಗೀರಥಮ್ಮನವರೊಡನೆ ಹೇಳಿದಳು. ದೊಡ್ಡ ಯಜಮಾನಿಯು ಮೇಲಕ್ಕೆ ಹತ್ತಿ ಬಂದು “ ಶ್ಯಾಮಲಾ ಶ್ಯಾಮಲಾ ” ಎಂದು ಕರೆದರು. ಶ್ಯಾಮಲೆಯು ತಿರುಗಿ ನೋಡಿದಳು, ಮಾತನಾಡಲಿಲ್ಲ. “ ಜ್ವರ ಬಂದಿದೆಯೇನಮ್ಮಾ? ” ಎಂದರು. ಆಗಲೂ ಮಾತನಾಡಲಿಲ್ಲ. ಭಾಗೀರಥಮ್ಮನಿಗೆ ಗಾಬರಿಯಾಯಿತು. ಹಜಾರದಲ್ಲಿ ಕುಳಿತಿದ್ದ ರಂಗರಾಯನನ್ನು “ ರಂಗಣ್ಣಾ! ಶ್ಯಾಮಲೆಗೆ ಜ್ವರ ಬಂದಿದೆ. ನೀನು ನೋಡಲಿಲ್ಲವೆ? ” ಎಂದಳು. ರಂಗಣ್ಣನೂ ಮಾತನಾಡಲಿಲ್ಲ. ಮುದುಕಿಯು ಬಹಳ ಸೂಕ್ಷ್ಮಗ್ರಾಹಿ. ಅವಳಿಗೂ ಕೆಲವು ದಿನಗಳಿಂದ ಮಗನ ನಡತೆಯ ವಿಷಯದಲ್ಲಿ ಸಂದೇಹವಿತ್ತು. ಗಂಡಹೆಂಡರಿಗೇನೋ ಬಲವಾದ ಜಗಳವಾಗಿರಬಹುದೆಂದು ಮನಸ್ಸಿನಲ್ಲಿಯೇ ಲೆಕ್ಕ ಹಾಕಿ ಒಳಗೆ ಹೊರಟು ಹೋದಳು.

ರಂಗರಾಯನು ಹೊರಗೆ ಬಂದು ಡ್ರೈವರನ್ನು ಕರೆದು ಡಾಕ್ಟರನ್ನು ಕರೆ ದುಕೊಂಡು ಬರುವಂತೆ ಹೇಳಿ ಕಳುಹಿಸಿದನು. ಡಾಕ್ಟರು ಬಂದು, “ ಏನಯ್ಯಾ ರಂಗರಾವ್, ನಿನಗೆ ಏನಾಗಿದೆ? ” ಎಂದು ಕೇಳಿದರು.

“ ಏನೂ ಇಲ್ಲ. ನಮ್ಮ ಅಮ್ಮಾವರು ಪುನಃ ಮಲಗಿದ್ದಾರೆ ” ಎಂದನು. ಡಾಕ್ಟರು ಮೇಲೆ ಹೋಗಿ ನೋಡಿದರು. ಶ್ಯಾಮಲಾ ಹಾಗೆಯೇ ಮಲಗಿ

ದ್ದಳು. ಡಾಕ್ಟರು ಬೆನ್ನು ಮುಟ್ಟಿ ನೋಡಿದರು. ಹಿಂತಿರುಗಿ ನೋಡಿದರು. ಯಾರೂ ಇರಲಿಲ್ಲ. ಡಾಕ್ಟರು ಶ್ಯಾಮಲೆಯ ಎರಡು ತೋಳುಗಳನ್ನು ಹಿಡಿದೆತ್ತಿ ಹಾಗೆಯೇ ಹಿಡಿದುಕೊಂಡು ಹೋಗಿ ಹಾಸಿಗೆಯ ಮೇಲೆ ಮಲಗಿಸಿದರು. ಶ್ಯಾಮಲೆಯ ಕಣ್ಣು ದೃಷ್ಟಿಯನ್ನು ನೋಡಿ 'ಜ್ಞಾನವಿದೆ' ಎಂದುಕೊಂಡರು. ಬಾಯಿಯಲ್ಲಿ ಥರ್ಮಾಮೀಟರ್ ಇಟ್ಟು ನೋಡಿದಾಗ ನೂರೆರಡು ಡಿಗ್ರಿ ಜ್ವರ ವಿತ್ತು.

"ಏಕಮ್ಮಾ ಜ್ವರ ಬಂತು?"

"ಏಕೋ ಗೊತ್ತಿಲ್ಲ."

ಡಾಕ್ಟರು ಕೆಳಗಿಳಿದು ಬಂದರು. ರಂಗರಾಯನು ಕುರ್ಚಿಯ ಮೇಲೆ ಕುಳಿತಿದ್ದನು.

ಡಾಕ್ಟರ್ "ರಂಗರಾವ್! ಜ್ವರ ಬಂದಿದೆ. ನೂರ ಎರಡು ಡಿಗ್ರಿಗಳು" ಎಂದರು.

"ಜ್ಞಾನವಿದೆಯೇ?"

"ಚೆನ್ನಾಗಿದೆ! ನೀನು ಹೋಗಿ ನೋಡಲಿಲ್ಲವೇ?"

"ಇಲ್ಲ!"

"ಏಕೆ ನೋಡಲಿಲ್ಲ?"

ರಂಗರಾಯನು ಉತ್ತರ ಹೇಳಲಿಲ್ಲ. "ಔಷಧಿ ಕಳಿಸುತ್ತೇನೆ. ಕೊಡಿ ನೋಡೋಣ" ಎಂದು ಹೇಳಿ ಡಾಕ್ಟರು ಹೊರಟುಹೋದರು. ರಂಗರಾಯನೂ ಮನೆಯನ್ನು ಬಿಟ್ಟು ಹೊರಟುಹೋದನು.

ಔಷಧಿಯನ್ನು ತಂದು ಕೊಟ್ಟದ್ದಾಯಿತು. ಸಾವಿತ್ರಮ್ಮನು ಕಾಫಿ ಯನ್ನೋ ಗಂಜಿಯನ್ನೋ ತೆಗೆದು ಕೊಳ್ಳಬೇಕೆಂದು ಹೇಳಿದಳು. ಶ್ಯಾಮಲಾ ಯಾವುದೊಂದನ್ನೂ ತೆಗೆದುಕೊಳ್ಳಲಿಲ್ಲ. ಭಾಗೀರಥಮ್ಮನವರೇ ಬಂದು ಎಷ್ಟೋ ವಿಧವಾಗಿ ಹೇಳಿದರು. ಶ್ಯಾಮಲಾ ಮಾತನಾಡಲಿಲ್ಲ. 'ಇದೇನೋ ವಿಚಿತ್ರ ವಾಗಿದೆ' ಎಂದು ಕೊಂಡು ಹೊರಟು ಹೋದರು.

ರಾತ್ರಿ ಸುಮಾರು ಒಂಭತ್ತು ಗಂಟೆಯ ಸಮಯವಿರಬಹುದು. ರಂಗ ರಾಯನು ಧೈರ್ಯ ಮಾಡಿ ಶ್ಯಾಮಲಾ ಮಲಗಿದ್ದ ಕೋಣೆಗೆ ಹೋಗಿ

ಮಂಚದ ಪಕ್ಕದಲ್ಲಿ ನಿಂತುಕೊಂಡನು. "ಶ್ಯಾಮಲಾ! ಶ್ಯಾಮಲಾ" ಎಂದು ಕರೆದನು. ಶ್ಯಾಮಲೆ ಮಾತನಾಡಲಿಲ್ಲ. ರಂಗರಾಯನು ಅತಿ ದೈನ್ಯದಿಂದ, ಕ್ಷಮಾಪ್ರಾರ್ಥನೆ ಮಾಡಿದನು. ಶ್ಯಾಮಲಾ "ನಿಮ್ಮದೇನು ತಪ್ಪಿದೆ? ನಾನೇಕೆ ಕ್ಷಮಿಸಬೇಕು? ನೀವು ಸ್ವತಂತ್ರರು. ಏನು ಬೇಕಾದರೂ ಮಾಡಬಹುದು. ಒಳ್ಳೆಯದು—ಕೆಟ್ಟದ್ದು ಹೇಳುವುದಕ್ಕೆ ನಾನಾರು? ನನ್ನನ್ನು ಕಳುಹಿಸಿ ಬಿಡಿ ಹೊರಟು ಹೋಗುತ್ತೇನೆ" ಎಂದಳು. ರಂಗರಾಯನಿಗೆ ಒಮ್ಮೆಲೆ ನೂರು ಚೇಳುಗಳು ಕಡಿದಂತಾಯಿತು. "ಇಲ್ಲ ಶ್ಯಾಮಲಾ, ಇನ್ನು ಮೇಲೆ ನಾನು ಕುಡಿಯುವುದಿಲ್ಲ. ನಿನ್ನ ಮನಸ್ಸು ನೋಯಿಸುವುದಿಲ್ಲ. ಕ್ಷಮಿಸು" ಎಂದು ಕೇಳಿಕೊಂಡನು. ಆದರೆ ಅವಳು "ನನ್ನನ್ನು ಕಳುಹಿಸಿ ಬಿಡಿ! ನಾನಿಲ್ಲಿರು ವುದಿಲ್ಲ." ಎಂದು ಮತ್ತೆ ಹೇಳಿದಳು.

ರಂಗರಾಯನಿಗೆ ಏನೂ ಉಪಾಯ ತೋರದೆ ಹೊರಟು ಹೋದನು.

ಮಾರನೆಯ ದಿನ ಬೆಳಗಾಯಿತು. ಆ ದಿನ ಯಥಾಪ್ರಕಾರ ಡಾಕ್ಟರು ಬಂದು ನೋಡಿಕೊಂಡು ಹೋದರು. ಅವರು ಹೊರಟು ಹೋಗುವಾಗ ರಂಗ ರಾಯನನ್ನು ಜೊತೆಯಲ್ಲಿ ಕರೆದುಕೊಂಡು ಹೋದರು. ಅವರ ಆಸ್ಪತ್ರೆಯಲ್ಲಿ, "ನೋಡು! ರಂಗರಾವ್ ಜ್ವರದ ವೇಗವೇನೋ ಅಷ್ಟಿಲ್ಲ. ಆದರೆ ಆ ರೋಗಿಯು ಆಹಾರವನ್ನು ತೆಗೆದುಕೊಳ್ಳುವುದಿಲ್ಲ. ಔಷಧಿಯನ್ನೂ ತೆಗೆದುಕೊಳ್ಳುತ್ತಾರೋ ಇಲ್ಲವೋ ಸಂದೇಹ. ಮಾತನ್ನೂ ಆಡುವುದಿಲ್ಲ. ಹೆಂಗಸರ ಮೂರ್ಖತ್ವವೇ ಅಲ್ಲಿರುವ ಖಾಯಿಲೆ. ಇದಕ್ಕೆ ನಾವೇನು ಮಾಡಲಾದೀತು" ಎಂದು ಹೇಳಿದರು.

ರಂಗರಾಯನು ಕ್ಷಣ ಹೊತ್ತು ಯೋಚನೆ ಮಾಡಿದನು. ಡಾಕ್ಟರನ್ನು ಅಂತರಂಗಕ್ಕೆ ತೆಗೆದುಕೊಳ್ಳುವುದು ಒಳ್ಳೆಯದೆಂದು ನಿರ್ಧಾರ ಮಾಡಿಕೊಂಡನು. "ಡಾಕ್ಟರ್ ಕೇಳು! ನಾನು ಕುಡಿಯುವುದು ಅವಳಿಗೆ ಗೊತ್ತಾಗಿ ಹೋಯಿತು. ಅವಳು ಅಸಮಾಧಾನ ತೋರಿದಳು. ಅದರಿಂದಲೇ ನಾನು ಹಿಂದೆ ಹದಿನೈದು ದಿನಗಳು ಬಿಟ್ಟುಬಿಟ್ಟೆ. ಮೊನ್ನೆ ರಾತ್ರಿ ಹೆಚ್ಚಾಗಿಯೇ ಮದ್ಯವನ್ನು ಸೇವಿಸಿದ್ದೆ. ಅವಳೇನೋ ಮಾತನಾಡಿದಳು. ಒಂದೇಟು ಹೊಡೆದೆ. ಅದೇ ಇಷ್ಟು ಅನರ್ಥಕ್ಕೆ ಕಾರಣ! ಕ್ಷಮಿಸು ಎಂದು ಕೇಳಿದೆ. ಆದರೆ ಅವಳು ನನ್ನನ್ನು

ಕಳಿಸಿಬಿಡಿ ಎನ್ನುತ್ತಾಳೆ. ಈಗ ನಾನೇನು ಮಾಡಲಿ? ಇದಕೊ
ಉಪಾಯವನ್ನು ಹೇಳು" ಎಂದನು.

ಡಾಕ್ಟರು ನಕ್ಕರು. "ನನಗಿಂತಲೂ ನೀನೇ ದೊಡ್ಡ ಡಾಕ್ಟರ್. ನ
ಇದೇ ಅನುಮಾನ ಬಂದಿತ್ತು. ಇದೊಂದು ದೊಡ್ಡ ಸಮಸ್ಯೆ. ಹೇಗಾ
ಆಗಲಿ ಇದಕ್ಕೊಂದು ಉಪಾಯ ಮಾಡು. ತಂತಿ ಕೊಟ್ಟು ನಿಮ್ಮ
ಯನ್ನು ಕರೆಸಿಬಿಡು. ಅವರು ಹೇಗಾದರೂ ಸರಿ ಮಾಡುತ್ತಾರೆ" ಎಂ
ರಂಗರಾಯನು ಆಗಲೇ ತಂತಿ ಕೊಟ್ಟನು.

ಪಾರ್ವತಮ್ಮನು ಸಂಧ್ಯಾಕಾಲ ರೈಲಿನಲ್ಲಿ ಬಂದಳು. ರಂಗರಾಯನು
ಸ್ಟೇಷನ್ನಿಗೆ ಮೋಟಾರು ಕಳುಹಿಸಿದ್ದನು. ಪಾರ್ವತಮ್ಮನು ಮನೆಗೆ ಬಂ
ಬಂದೊಡನೆಯೇ ಬೀಗಿತಿಯನ್ನು ನೋಡಿದಳು. ಅವರು "ಬಂದಿರಾ
ಶ್ಯಾಮಲೆಗೆ ಉತ್ಪಾತ ಜ್ವರ ಬಂದಿದೆ. ಮೂರು ದಿನಗಳಾಯ್ತು.
ಉದ್ಧರಣೆ ನೀರನ್ನೂ ಕುಡಿಯುವುದಿಲ್ಲ. ಯಾರೊಡನೆಯೂ ಮಾತನಾ
ದಿಲ್ಲ" ಎಂದು ಗಾಬರಿಯಿಂದ ತಿಳಿಸಿದರು. ಪಾರ್ವತಮ್ಮನು ಮೆಲ್ಲಗೆ
ಡಿಯ ಮೆಟ್ಟಲು ಹತ್ತಿ ಶ್ಯಾಮಲೆಯ ಕೋಣೆಗೆ ಹೋದಳು. ಶ್ಯಾಮ
ಕಣ್ಣು ಮುಚ್ಚಿದ್ದಳು. ಕೈ ಹಿಡಿದು ನೋಡಿದಳು ಜ್ವರವೇನೋ
ಆದರೆ ಹೆಚ್ಚಾಗಿರಲಿಲ್ಲ. ಶ್ಯಾಮಲೆ ಕಣ್ಣು ಬಿಟ್ಟು ನೋಡಿದಳು. ತಾ
"ಅಮ್ಮಾ! ಅಮ್ಮಾ!" ಎಂದು ಹುಡುಗಿಯಂತೆ ತಬ್ಬಿಕೊಂಡಳು. ಶ
ನಡುಗುತ್ತಿದ್ದಿತು.

ಪಾರ್ವತಮ್ಮನು, "ಏನಾಗಿದೆಯಮ್ಮಾ? ಏಕೆ ಆಹಾರವನ್ನು
ಕೊಳ್ಳಲಿಲ್ಲ?" ಎಂದು ಕರುಣಾ ದನಿಯಿಂದ ಕೇಳಿದಳು. ಶ್ಯಾಮ
ಬಹಳ ಹೊತ್ತು ತಾಯಿಯನ್ನು ಅಪ್ಪಿಕೊಂಡು ಅತ್ತಳು. ತಾಯಿಯು
ಸಮಾಧಾನ ಮಾಡಿದರೂ ಅಳು ನಿಲ್ಲಲಿಲ್ಲ. ಕೊನೆಗೆ, "ಅಮ್ಮಾ!
ಮನೆಗೆ ಹೋಗೋಣ. ನಾನಿಲ್ಲಿರುವುದಿಲ್ಲ" ಎಂದು ಹೇಳಿದಳು. ತಾ
ಸಿಡಿಲು ಬಡಿದ ಹಾಗಾಯಿತು. ಪಾರ್ವತಮ್ಮನು ಏನೂ ಮಾತನಾ
ಕೆಳಗಿಳಿದು ಗಂಜಿಯನ್ನು ತೆಗೆದುಕೊಂಡು ಹೋಗಿ "ಮಗು! ಈ
ಯನ್ನು ಕುಡಿ. ಮೂರು ದಿನಗಳಿಂದ ಏನೂ ಆಹಾರವನ್ನು

ಕೊಳ್ಳಲಿಲ್ಲವಂತೆ" ಎಂದು ಹೇಳಿದಳು. ಶ್ಯಾಮಲೆಯು ಗಂಜಿಯನ್ನು ಕುಡಿದಳು. ಆದರೆ ಪಾರ್ವತಮ್ಮನು ಆ ದಿನ ಆಹಾರವನ್ನು ತೆಗೆದು ಕೊಳ್ಳಲಿಲ್ಲ.

ರಾತ್ರಿ ಕಳೆಯಿತು. ತಾಯಿಯ ಮಾತು ಕೇಳಿ ಶ್ಯಾಮಲೆಯು ಗಂಜಿ ಯನ್ನು ತೆಗೆದುಕೊಂಡಳೆಂದು ಎಲ್ಲರೂ ಸಮಾಧಾನವಾಯಿತು. ತಾಯಿಯು ಎಲ್ಲವನ್ನೂ ಸಮಾಧಾನ ಮಾಡುತ್ತಾಳೆಂದು ರಂಗರಾಯನಿಗೆ ಧೈರ್ಯ ಬಂದಿತು. ಡಾಕ್ಟರು ಬಂದರು. ಜ್ವರ ಇನ್ನೂ ಇದ್ದಿತು. "ಔಷಧಿ ಕುಡಿದಿರೇನಮ್ಮಾ?" ಎಂದು ಪ್ರಶ್ನೆ ಮಾಡಿದರು.

ಶ್ಯಾಮಲೆಯು "ಇಲ್ಲ!" ಎಂದು ಉತ್ತರ ಕೊಟ್ಟಳು.

"ಔಷಧಿ ಇಲ್ಲ. ಆಹಾರವಿಲ್ಲ. ರೋಗ ಹೇಗಮ್ಮಾ ಗುಣವಾಗಬೇಕು?" ಎಂದರು.

ಶ್ಯಾಮಲೆಯು, "ನನಗೆ ಗುಣವಾಗಬೇಕೆಂದಿಲ್ಲ. ಹೀಗೆಯೇ ನನ್ನ ಪ್ರಾಣ ಹೋದರೆ ಎಷ್ಟೋ ಸುಖವಾದೀತು" ಎಂದಳು.

ಡಾಕ್ಟರು, "ನಾನು ಹಿಡಿದ ರೋಗಿಗಳಾರೂ ಇದುವರೆಗೂ ಸತ್ತಿಲ್ಲ. ನನಗೆ ಬಹಳ ಕೆಟ್ಟ ಹೆಸರು ಬರುತ್ತದೆ. ನೀವು ಕೃಪೆ ಮಾಡಿ ಈ ಔಷಧಿ ಕುಡಿಯಿರಿ" ಎಂದರು. ತುಂಬ ಒತ್ತಾಯ ಮಾಡಿದನಂತರ ಶ್ಯಾಮಲೆಯು ಔಷಧಿಯನ್ನು ಕುಡಿದಳು.

ಮೂರು ನಾಲ್ಕು ದಿನಗಳಲ್ಲಿ ಶ್ಯಾಮಲೆಯು ಸ್ವಸ್ಥಳಾದಳು. ತಾಯಿ ಯೊಡನೆ ತನ್ನ ಕಥೆಯನ್ನೆಲ್ಲಾ ವಿವರವಾಗಿ ಹೇಳಿದಳು. ತಾಯಿಯು "ಇದೇನೋ ಸರಿ! ಅಳಿಯಂದಿರಿಗೂ ತಮ್ಮ ತಪ್ಪು ಗೊತ್ತಾಗಿದೆ. ಮನಸ್ಸು ನೊಂದಿದೆ. ನೀನು ಈ ರೀತಿ ಒಂದೇ ಬಾರಿಗೆ ಹಠ ಹಿಡಿಯಬಾರದು. ಗಂಡನ ಮನೆ ಬಿಟ್ಟು ನಮ್ಮ ಮನೆಗೆ ಬಂದರೆ 'ಗಂಡನ ಮನೆಬಿಟ್ಟು ಓಡಿ ಬಂದಳು' ಎಂದು ನೆರೆಹೊರೆಯವರೆಲ್ಲರೂ ದೂರುತ್ತಾರೆ. ನಮಗೆ ಕೆಟ್ಟ ಹೆಸರು ಬರು ತ್ತದೆ. ನಾವು ಸಮಾಜಕ್ಕೆ ಹೆದರಬೇಕು. ಈ ಸಮಾಜವು ಹೆಣ್ಣಿನ ಮೇಲೆಯೇ ತಪ್ಪನ್ನು ಹೊರಿಸುತ್ತದೆ. ಒಂದೇ ಬಾರಿಗೆ ಹಾಗೆ ದುಡುಕಬಾರದು ಅವರೂ ಬುದ್ಧಿಯನ್ನು ಕಲಿಯುತ್ತಾರೆ. ಮುಂದೆ ನೀವು ಸುಖವಾಗಿರುವಿರಿ" ಎಂದು ಶ್ಯಾಮಲೆಯನ್ನು ಸಮಾಧಾನ ಪಡಿಸಿದಳು.

ಭಾಗೀರಥಮ್ಮನವರನ್ನೂ ರಂಗರಾಯನನ್ನೂ ಕೇಳಿ ಪಾರ್ವತಮ್ಮನ ಬೆಂಗಳೂರಿಗೆ ಪ್ರಯಾಣ ಮಾಡಿದಳು. ಶ್ಯಾಮಲೆಯು ಯಥಾಪ್ರಕಾರ ಇದ್ದಳು. ಆದರೆ ಈ ಬಾರಿ ಒಂದು ವ್ಯತ್ಯಾಸವಾಯಿತು. ಗಂಡನ ಕೋಣೆ ಬೇರೆ! ಹೆಂಡತಿಯ ಕೋಣೆ ಬೇರೆ! ಅವಳ ಪಾಡಿಗೆ ಅವಳು ಇರುತ್ತಿದ್ದಳು. ಹೊರಗಿನ ನೋಟಕ್ಕೆ ಎಲ್ಲವೂ ಸರಿಯಾಗಿದ್ದರೂ ಒಳಗಿನ ಭಾವನೆಗಳು ಭಿನ್ನ ವಾಗಿದ್ದುವು.

ರಂಗರಾಯನು ಕಡಿಯುವುದನ್ನು ಬಿಡಲೂ ಇಲ್ಲ. ಶ್ಯಾಮಲೆಯು ಹೆದರಲೂ ಇಲ್ಲ.

೧೧

ಶ್ಯಾಮಲೆಯು ಬೇಜಾರಾದಾಗಲೆಲ್ಲಾ ಕಮಲಮ್ಮನವರ ಮನೆಗೆ ಹೋಗಿ ಬರುತ್ತಿದ್ದಳು. ತಾರಾ ಮತ್ತು ಶ್ಯಾಮಲಾ ಬಹಳ ಸ್ನೇಹಿತರಾಗಿ ಹೋಗಿದ್ದರು. ಅವರು ಆಗಾಗ ಪಗಡೆಯಾಡುತ್ತಿದ್ದರು. ಒಂದೊಂದು ವೇಳೆ ತಾರಾ ವೀಣೆ ಬಾರಿಸುತ್ತಿದ್ದಳು; ಶ್ಯಾಮಲೆ ಕುಳಿತು ಕೇಳುತ್ತಿದ್ದಳು. ಹೀಗೆಯೇ ಅವರಿಬ್ಬರೂ ವಿನೋದವಾಗಿ ಕಾಲ ಕಳೆಯುತ್ತಿದ್ದರು. ಕಮಲಮ್ಮನವರು ಶ್ಯಾಮಲೆಯನ್ನು ಬಹಳ ವಿಶ್ವಾಸದಿಂದ ಕಾಣುತ್ತಿದ್ದರು. ವಾಸುವೂ ಆಗಾಗ ಶ್ಯಾಮಲೆಯೊಡನೆ ಮಾತನಾಡುತ್ತಿದ್ದನು. ಅವನಿಗೆ ಅವಳೊಡನೆ ಮಾತಾಡಲು ಸಂಕೋಚವೇ ಇರಲಿಲ್ಲ. ಶ್ಯಾಮಲೆಯ ಮನಸ್ಸಿನಲ್ಲಿ ಗಂಗಾಧರರಾಯನು ತನ್ನ ಮನೆಗೆ ಬಂದಿದ್ದಾಗ ಈ ವಾಸುವಿಗೆ ತನ್ನನ್ನು ಕೊಟ್ಟು ಮದುವೆ ಮಾಡುವ ಮಾತು ನಡೆದಿತ್ತು ಎಂಬುದು ಅವಳ ಜ್ಞಾಪಕಕ್ಕೆ ಆಗಾಗ ಬರುತ್ತಿತ್ತು. ಆದರೆ ಬಹು ಬೇಗ ಆ ಭಾವನೆಯನ್ನು ಮರೆಯುತ್ತಿದ್ದಳು. ತಾನು ರಂಗರಾಯನ ಭಾರ್ಯೆ ಎಂದುಕೊಂಡು ವಾಸುವನ್ನು ತಮ್ಮನೆಂದು ಭಾವಿಸುತ್ತಿದ್ದಳು. ಗೃಹಿಣಿಯ ಭಾವನೆಗಳೆಲ್ಲವೂ ಶ್ಯಾಮಲೆಯಲ್ಲಿ ಸರ್ವದಾ ಜಾಗೃತವಾಗಿರುತ್ತಿದ್ದುವು.

ಕಾಂಗ್ರೆಸ್ಸಿನವರನ್ನೆಲ್ಲಾ ಬಿಟ್ಟುಬಿಡುತ್ತಾರೆಂಬ ಸಮಾಚಾರ ಬಂತು. ವಾಸುವು ಶ್ಯಾಮಲೆಗೆ ಆ ವಿಷಯ ಹೇಳಿದ. ಅವರ ಬಗ್ಗೆ ಶ್ಯಾಮಲೆ ಮತ್ತು ತಾರೆ ಬಹಳ ಹೊತ್ತು ಮಾತನಾಡಿಕೊಂಡರು. ನಾಣಿಯು ಬರುತ್ತಾನೆಂಬ ಉತ್ಸಾಹವು ಶ್ಯಾಮಲೆಯನ್ನು ಪುಳಕಿತಳನ್ನಾಗಿ ಮಾಡಿತು. ಶ್ಯಾಮಲೆಯು ಆ ದಿನ ಮನೆಗೆ ಹಿಂದಿರುಗುವ ವೇಳೆಗೆ ರಂಗರಾಯನು ಎರಡು ಹೊಸ ಸೀರೆಗಳನ್ನು ತಂದಿಟ್ಟುಕೊಂಡು ಅವಳಿಗಾಗಿ ಕಾಯುತ್ತಿದ್ದನು. ಆ ಸೀರೆಗಳನ್ನು ಶ್ಯಾಮಲೆಗೆ ತೋರಿಸುವುದಕ್ಕಾಗಿ ತುಂಬ ಕಾತರಿಸುತ್ತಿದ್ದನು. ಶ್ಯಾಮಲೆ

ಮನೆಗೆ ಬರುತ್ತಲೇ "ಶ್ಯಾಮಲೆ! ಇಲ್ಲಿ ಬಾ!" ಎಂದು ಕರೆದನು. ಶ್ಯಾಮಲೆಯು ಬಂದು ಸಮೀಪದಲ್ಲಿ ನಿಂತುಕೊಂಡಳು. ಅವನು ಅವಳಿಗೆ ಸೋಫಾದ ಮೇಲೆ ಕುಳಿತುಕೊಳ್ಳುವಂತೆ ಹೇಳಿದನು. ಶ್ಯಾಮಲೆಯು ಸಂಕೋಚದಿಂದ ಕುಳಿತು ಕೊಂಡ ಮೇಲೆ ಅವನು ಅವಳಿಗೆ ಸೀರೆಗಳೆರಡನ್ನು ಕೊಟ್ಟನು. ಶ್ಯಾಮಲೆಯು ಅವುಗಳನ್ನು ನೋಡಿ, "ಈಗೇಕೆ ಕೊಂಡುಕೊಂಡಿರಿ. ನನ್ನಲ್ಲಿ ಬೇಕಾದಷ್ಟು ಸೀರೆಗಳಿವೆ" ಎಂದಳು.

"ಈ ಸೀರೆಗಳ ಬಣ್ಣ, ಅಂಚು ಎಲ್ಲಾ ಚೆನ್ನಾಗಿವೆ. ಇದೂ ಒಂದು ತರಹ ಇರಲಿ ಎಂದು ಕೊಂಡುಕೊಂಡೆ."

ಶ್ಯಾಮಲೆಯು ನಗುಮೊಗ ಮಾಡಿ ಸುಮ್ಮನಾದಳು.

"ಶ್ಯಾಮಲಾ! ಈ ಸೀರೆ ನಿನಗೆ ಬಹಳ ಚೆನ್ನಾಗಿ ಒಪ್ಪುತ್ತವೆ. ನಾಳೆಯೇ ಉಟ್ಟುಕೊಂಡುಬಿಡು" ಎಂದನು.

ಶ್ಯಾಮಲೆ "ನಾಳೆ ಉಟ್ಟುಕೊಳ್ಳುತ್ತಾರೆಯೇ? ಇನ್ನು ಎಂಟು ಹತ್ತು ದಿನಗಳಿಗೆ ಹಬ್ಬ ಬರುತ್ತದೆ. ಆಗ ಉಟ್ಟರೆ ಸರಿ" ಎಂದಳು. ರಂಗರಾಯನು ತಲೆದೂಗಿದನು.

"ಎಲ್ಲಿಗೆ ಹೋಗಿದ್ದೆ ಶ್ಯಾಮಲಾ! ಕಮಲಮ್ಮನವರ ಮನೆಗೋ? ಏನು ವಿಶೇಷ?"

"ವಿಶೇಷವಿದೆ. ಅವರ ಯಜಮಾನರು ಜೈಲಿನಿಂದ ಬರುತ್ತಾರಂತೆ."

"ಬಂದರೆ ಬರುತ್ತಾರೆ ಅದರಿಂದ ನಮಗೇನು. ಏನೋ ರಾಜ್ಯವನ್ನು ಕಟ್ಟುತ್ತೇವೆಂದು ಈ ಕಾಂಗ್ರೆಸ್ಸಿನವರು ಜೈಲಿಗೆ ಹೋಗುತ್ತಾರೆ; ಬರುತ್ತಾರೆ. ಇದಕ್ಕೆಲ್ಲಾ ಸರಕಾರವು ಹೆದರುತ್ತದೆಯೇ!"

"ಅದೆಲ್ಲಾ ನನಗೆ ಗೊತ್ತಿಲ್ಲ. ನಮ್ಮ ಅಣ್ಣ ನಾಣಿಯು ಜೈಲಿನಿಂದ ಬರುತ್ತಾನೆ."

"ಬಹಳ ಸಂತೋಷ ಶ್ಯಾಮಲಾ! ನಿಮ್ಮ ಅಣ್ಣ ಎಂ. ಎಸ್‌ಸಿ. ಪಾಸ್ ಮಾಡಿದ್ದಾನೆಂದು ಹೇಳಿದೆಯಲ್ಲಾ ಅವನೇಕೆ ಈ ಕಾಂಗ್ರೆಸ್ಸಿನವರೊಡನೆ ಸೇರಿಕೊಂಡ? ಇಷ್ಟು ಹೊತ್ತಿಗೆ ಇನ್ನೂರು ಮುನ್ನೂರು ರೂಪಾಯಿಗಳ ಸಂಬಳ ಬರುತ್ತಿತ್ತು.

"ಅದೇನೋ ನಿಜ! ಆದರೆ ಅವನು ಎಂದೂ ಕಾಂಗ್ರೆಸ್ಸಿಗೆ ಸೇರಿರಲಿಲ್ಲ. ಪೋಲೀಸಿನವರು ಅನ್ಯಾಯವಾಗಿ ಅವನನ್ನು ಹಿಡಿದು ಹಾಕಿದರು. ಮಿನಿಸ್ಟರು ಎರಡು ಮೂರು ದಿನಗಳಲ್ಲಿ ಬಿಟ್ಟುಬಿಡುವುದಾಗಿ ಹೇಳಿದರು. ಎರಡು ಮೂರು ವರ್ಷಗಳಾದುವು. ಈ ಅಧಿಕಾರಿಗಳು ಹೇಳುವುದೆಲ್ಲಾ ಸುಳ್ಳೆ!"

"ಹೋಗಲಿ! ಇನ್ನು ಮೇಲಾವರೂ ಬುದ್ಧಿಯಾಗಿದ್ದರೆ ಬದುಕಿಕೊಳ್ಳುತ್ತಾನೆ."

ಶ್ಯಾಮಲೆಯು ಮಾತನಾಡಲಿಲ್ಲ. ಊಟದ ವೇಳೆಯಾಗಿತ್ತು. ಇಬ್ಬರೂ ಊಟಕ್ಕೆದ್ದರು.

ಶ್ಯಾಮಲೆಗೆ ಆಗಾಗ ದೇಹಸ್ಥಿತಿಯು ಬಿಗಡಾಯಿಸುತ್ತಲೇ ಇತ್ತು. ಡಾಕ್ಟರ್ ಸುಬ್ಬರಾವ್ ಬಂದು ಔಷಧಿ ಕೊಡುವುದು ಸಾಮಾನ್ಯವಾಗಿತ್ತು. ಡಾಕ್ಟರು ಔಷಧಿ ಕೊಟ್ಟರೆ ಬೇಗ ಗುಣವಾಗುತ್ತಿತ್ತು. ಈಗ ಡಾಕ್ಟರಿಗೆ ರಂಗರಾಯನು ಹೇಳಿ ಕಳುಹಿಸಬೇಕಾಗಿರಲಿಲ್ಲ. ಶ್ಯಾಮಲೆಯೇ ಹೇಳಿ ಕಳುಹಿಸುತ್ತಿದ್ದಳು. ಡಾಕ್ಟರು ಬಂದು ಔಷಧಿ ಕೊಡುತ್ತಿದ್ದರು. ಬಹಳ ಕಡಿಮೆಯೆಂದರೆ ಡಾಕ್ಟರ್ ಬಿಲ್ ನೂರು ರೂಪಾಯಿಗಳಾಗುತ್ತಿತ್ತು. ರಂಗರಾಯನು ಅದನ್ನು ಗಮನಿಸುತ್ತಲೇ ಇರಲಿಲ್ಲ. ಡಾಕ್ಟರು ಈ ಶ್ಯಾಮಲೆಗೆ ಏನೂ ಖಾಯಿಲೆಯೇ ಇಲ್ಲ ಎಂದುಕೊಳ್ಳುತ್ತಿದ್ದರು. ಡಾಕ್ಟರು ಮನೆಗೆ ಬಂದಾಗಲೆಲ್ಲಾ ಶ್ಯಾಮಲೆಯು ಉಪಚಾರ ಹೇಳಿ ಕಾಫೀ ಕೊಡುತ್ತಿದ್ದಳು. ಮಧ್ಯಾಹ್ನದ ಹೊತ್ತಾದರೆ ಒಳ್ಳೆಯ ತುಪ್ಪದಲ್ಲಿ ಮಾಡಿದ ತಿಂಡಿಗಳು ಸಿಕ್ಕುತ್ತಿದ್ದುವು. ಶ್ಯಾಮಲೆಯು ಧಾರಾಳವಾಗಿ ಮಾತನಾಡುತ್ತಿದ್ದಳು. ಡಾಕ್ಟರು ಈ ಉಪಚಾರಗಳನ್ನೂ ಮಾತುಗಳನ್ನೂ ತಪ್ಪಾಗಿ ಭಾವಿಸುತ್ತ ಬಂದನು. ಅವನ ತಾರುಣ್ಯವು ಅವನ ಭಾವನೆಗೆ ಉತ್ತೇಜಕವಾಗಿತ್ತು.

ಶ್ಯಾಮಲೆಗೆ ನೆಗಡಿ, ಕೆಮ್ಮು ಹೆಚ್ಚಾಗಿ ಮೈ ಬೆಚ್ಚಗಾದಂತಾಗಿತ್ತು. ತನ್ನ ಮಂಚದ ಮೇಲೆ ಮಲಗಿದ್ದಳು. ಡಾಕ್ಟರಿಗೆ ಹೇಳಿ ಕಳುಹಿಸಲೇ ಬೇಡವೆ? ಎಂದು ಯೋಚಿಸಿದಳು. ಸಾಯಂಕಾಲದ ವರೆಗೆ ನೋಡಿದಳು. ರಂಗರಾಯನು ಊರಿನಲ್ಲಿರಲಿಲ್ಲ. ಭಾಗೀರಥಮ್ಮನವರು ಮಹಡಿಯ ಮೇಲೆ ಬಂದು ಶ್ಯಾಮಲೆಯನ್ನು ನೋಡಿ, "ಏಕವ್ವಾ ಈವತ್ತು ಮಲಗಿಯೇ ಇದ್ದೀಯೆ?

ಏನಾಗಿದೆ ? ” ಎಂದರು.

ಶ್ಯಾಮಲೆಯು “ ಏನೂ ಇಲ್ಲ. ಏನೋ ಇರಸು ಮುರಸಾಗಿದೆ ಅಷ್ಟೆ. ನಾಳೆ ಸರಿಹೋಗಬಹುದು ” ಎಂದಳು.

“ ಡಾಕ್ಟರಿಗೆ ಹೇಳಿ ಕಳುಹಿಸಿ ಔಷಧಿ ತೆಗೆದುಕೊಳ್ಳಬಾರದೇ ? ”

“ ಈವತ್ತು ನೋಡಿ ನಾಳೆ ಹೇಳಿ ಕಳುಹಿಸೋಣವೆಂದಿದ್ದೇನೆ. ”

ಭಾಗೀರಥಮ್ಮನವರು ಕೆಳಗಿಳಿದು ಬಂದು ಆಳನ್ನು ಕರೆದು, “ಡಾಕ್ಟರನ್ನು ಕರೆದುಕೊಂಡು ಬಾ ! ಅಮ್ಮಾವರಿಗೆ ಸ್ವಾಸ್ಥ್ಯವಿಲ್ಲವೆಂದು ಹೇಳು” ಎಂದು ಹೇಳಿ, ತಾವು ಪುರಾಣಕ್ಕೆ ಹೊರಟುಹೋದರು.

ಸಂಧ್ಯಾ ಕಾಲ ಸುಮಾರು ಐದು ಗಂಟೆಯ ಸಮಯಕ್ಕೆ ಡಾಕ್ಟರು ಬಂದರು. ನೇರವಾಗಿ ಶ್ಯಾಮಲೆಯ ಕೋಣೆಗೆ ಹೋಗಿ ನೋಡಿದರು. ಡಾಕ್ಟರು ಬರುತ್ತಲೇ ಶ್ಯಾಮಲೆಯು ಎದ್ದು ಕುಳಿತಳು.

“ ಏನಮ್ಮಾ ಏನಾಗಿದೆ ? ”

“ ಏನೋ ಸ್ವಲ್ಪ ನೆಗಡಿ; ಕೆಮ್ಮು ಮೈ ಕೈ ನೋವು” ಎಂದಳು. ಡಾಕ್ಟರು ಕೈ ಹಿಡಿದು ನೋಡಿದರು. ನಾಲಗೆಯನ್ನು ಪರೀಕ್ಷೆ ಮಾಡಿದರು. ಔಷಧಿ ಚೀಟಿ ಬರೆದು ಕೆಳಗಿದ್ದ ಜವಾನನ್ನು ಕರೆದು “ ನಮ್ಮ ಷಾಪಿಗೆ ಹೋಗಿ ಈ ಚೀಟಿ ತೋರಿಸು ಔಷಧಿಕೊಡುತ್ತಾರೆ. ಅವನ್ನು ತೆಗೆದುಕೊಂಡು ಬಾ ! ” ಎಂದು ಹೇಳಿ ಕಳುಹಿಸಿದರು.

“ ಔಷಧಿ ಬರುತ್ತೆ. ತೆಗೆದುಕೊಳ್ಳಿ ಗುಣವಾಗಿ ಹೋಗುತ್ತೆ ! ”

“ ನಿಮಗೆ ಪದೇ ಪದೇ ತೊಂದರೆ ಕೊಡುತ್ತಿದ್ದೇನೆ. ಇದೇಕೆ ನನ್ನ ದೇಹ ಸ್ಥಿತಿ ಹೀಗಾಗಿದೆ ” ಎಂದಳು.

“ ನಾನು ಹೇಳಿದರೆ ನೀವು ಏನು ತಿಳಿದುಕೊಳ್ಳುತ್ತೀರೋ. ನಿಮಗೆ ಇಲ್ಲಿ ಮನಸ್ಸಿಗೆ ನೆಮ್ಮದಿಯಿಲ್ಲ. ಅದೇ ನಿಮ್ಮ ಖಾಯಿಲೆಗಳಿಗೆಲ್ಲಾ ಕಾರಣ. ”

ಶ್ಯಾಮಲೆಯು ಸಣ್ಣನಗುವನ್ನು ನಕ್ಕಳು. “ ಮನಸ್ಸಿಗೆ ನೆಮ್ಮದಿಯಿಲ್ಲ ದಿದ್ದರೇನು ಮಾಡುವುದು ” ಎಂದಳು. ಡಾಕ್ಟರು ನಕ್ಕರು. “ ನಿಮಗೆ ಖಾಯಿಲೆ ಯಾಗುತ್ತಲೇ ಇರುವುದು. ನಾನು ಔಷಧಿ ಕೊಡುವುದು. ನಮಗೆ ದುಡ್ಡು ಸಿಕ್ಕುತ್ತೆ. ದೊಡ್ಡ ಮನುಷ್ಯರೆಲ್ಲರೂ ಹೀಗೇ ” ಎಂದರು. ಶ್ಯಾಮಲೆಯು ತಲೆ

ತಗ್ಗಿಸಿದಳು. ಡಾಕ್ಟರು ಮತ್ತೊಮ್ಮೆ ಕೈ ನೋಡಿದರು. ಜ್ವರವೇನೂ ಇರಲಿಲ್ಲ. ಹಾಗೆಯೇ ಹಿಡಿದಿದ್ದ ಕೈಯ್ಯನ್ನು ಬಿಡಲಿಲ್ಲ ಮಾತನಾಡುತ್ತಲೇ ಶ್ಯಾಮಲೆಯ ಗಲ್ಲವನ್ನೆತ್ತಿ ಚುಂಬಿಸಿದನು. ಶ್ಯಾಮಲೆಯು ಗಾಬರಿಯಿಂದ ಎದ್ದು ನಿಂತು, ಕಣ್ಣುಗಳನ್ನರಳಿಸಿ “ ಇದೇನು ? ” ಎಂದಳು. ಡಾಕ್ಟರು ಎರಡು ಕೈಗಳಿಂದಲೂ ಶ್ಯಾಮಲೆಯನ್ನು ಬಲಾತ್ಕಾರದಿಂದ ಬಿಗಿದಪ್ಪಿ ಕಪೋಲಗಳನ್ನು ಚುಂಬಿಸಿದನು.

ಶ್ಯಾಮಲೆಯು ಹೆಣಗಾಡಿ ಬಿಡಿಸಿಕೊಂಡು ಎರಡು ಕೈಗಳಿಂದಲೂ ಡಾಕ್ಟರ ಮುಖದ ಮೇಲೆ ಹೊಡೆದು, ಕಾಲಿನಿಂದ ಒದ್ದಳು. ಡಾಕ್ಟರು ಕೆಳಗೆ ಬಿದ್ದನು. ಶ್ಯಾಮಲೆಯು ಅಲ್ಲಿಂದ ಓಡಿ ಹೋಗಿ ಬೇರೊಂದು ಕೋಣೆಯಲ್ಲಿ ಭದ್ರವಾಗಿ ಅಗಣಿ ಹಾಕಿಕೊಂಡಳು. ಅವಳ ಮೈ ನಡುಗುತ್ತಿತ್ತು. ಡಾಕ್ಟರು ನೆಲದ ಮೇಲಿನಿಂದ ಎದ್ದು ಅಂಗಿ ಸರಿಪಡಿಸಿಕೊಂಡು ದಢದಢನೆ ಮೆಟ್ಟಲುಗಳನ್ನಿಳಿದು ಹೊರಟು ಹೋದರು. ಶ್ಯಾಮಲೆಯು ಕೋಣೆಯ ಕಿಟಕಿಯ ಬಾಗಿಲಿನಿಂದ ನೋಡಿದಳು. ಹಿಂತಿರುಗಿ ನೋಡುತ್ತಾ ಡಾಕ್ಟರು ವೇಗವಾಗಿ ಮನೆಯಿಂದ ಹೊರಟು ಹೋದರು.

ಅಷ್ಟರಲ್ಲಿ ಆಳು ಔಷಧಿಯನ್ನು ತಂದುಕೊಟ್ಟನು. ಶ್ಯಾಮಲೆಯು ಕುಳಿತಿದ್ದ ಕೋಣೆಯಲ್ಲಿ ಮೇಜಿನ ಮೇಲೆ ಔಷಧಿ ಶೀಶೆಯನ್ನಿಟ್ಟು “ ಮೂರು ಗಂಟೆಗಳಿಗೊಂದು ಬಾರಿ ತೆಗೆದುಕೊಳ್ಳಬೇಕಂತೆ ” ಎಂದು ಹೇಳಿದನು. ಶ್ಯಾಮಲೆಯು ಮಾತನಾಡಲಿಲ್ಲ. ಆಳು ಹೊರಟು ಹೋಗುತ್ತಲೇ ಶ್ಯಾಮಲೆಯು ಬಾಗಿಲುಗಳನ್ನು ಭದ್ರವಾಗಿ ಹಾಕಿದಳು. ಆ ಔಷಧಿಯನ್ನೆಲ್ಲಾ ಕಿಟಕಿಯಲ್ಲಿ ಚೆಲ್ಲಿದಳು.

ಆಮೇಲೆ ಒಂದು ಕುರ್ಚಿಯ ಮೇಲೆ ಕುಳಿತುಕೊಂಡಳು. ಡಾಕ್ಟರನು ತನ್ನ ಮನೆಗೆ ಬಂದಾಗಿನಿಂದ ಅವನ ನಡವಳಿಕೆಗಳನ್ನು ಮಾತುಗಳನ್ನು ನೆನೆದುಕೊಂಡಳು. ಅರ್ಧ ಗಂಟೆಯ ಹಿಂದೆ ಆವನಾಡಿದ ಮಾತುಗಳೂ, ಕೃತ್ಯವೂ ಕಣ್ಣು ಮುಂದೆ ಕಟ್ಟಿದಂತಾಯಿತು. ಎಲ್ಲವನ್ನೂ ತಾಳೆ ಹಾಕಿ ನೋಡಿದಳು. ಇವನು ನನ್ನನ್ನು ಕಂಡಾಗಿನಿಂದಲೂ ಕಾಮುಕನಾಗಿಯೇ ಇದ್ದನು. ಅದನ್ನು ಇಂದು ಪ್ರತ್ಯಕ್ಷವಾಗಿ ತೋರಿದನು, ಎಂದುಕೊಂಡಳು. ತೋಳುಗಳನ್ನೂ ಶರೀರವನ್ನೂ ನೋಡಿಕೊಂಡಳು. ಅಲ್ಲಲ್ಲಿ ಪರಚಿದ ಉಗುರಿನ

ಗುರುತುಗಳಿದ್ದುವು. ತೊಟ್ಟಿದ್ದ ಬಿಳಿಯ ಕಂಚುಕವು ಹರಿದಿತ್ತು ಆ ಕಂಚುಕವನ್ನು ಬಿಚ್ಚಿ ಚೂರು ಚೂರು ಮಾಡಿದಳು. ಡಾಕ್ಟರಿಗೆ ಏನು ಪ್ರತೀಕಾರ ಮಾಡಬೇಕೆಂದು ಆಲೋಚಿಸಿದಳು. ಏನು ಮಾಡುವುದಕ್ಕೂ ತೋರಲಿಲ್ಲ ಕಣ್ಣಿನಲ್ಲಿ ನೀರು ತುಂಬಿತು. ಈ ಪ್ರಪಂಚದಲ್ಲಿ ಪುರುಷರು ಹೆಂಗಸರ ಮೇಲೆ ಮಾಡುವ ಅತ್ಯಾಚಾರಗಳಿಗೆ ಪ್ರತೀಕಾರವೇ ಇಲ್ಲವೇ? ಎಂದುಕೊಂಡಳು. ಈ ವಿಷಯವನ್ನು ನಮ್ಮ ರಾಯರಿಗೆ ತಿಳಿಸಬೇಕೇ ಬೇಡವೆ? ಏಕೆ ತಿಳಿಸಬಾರದು? ತಿಳಿಸಲೇ ಬೇಕು ನಮ್ಮ ಮನೆಗೆ ಒಬ್ಬ ಕಳ್ಳನು ಬಂದು ಕದ್ದುಕೊಂಡು ಹೋದರೆ ಮುಚ್ಚಿಡಬೇಕೆ? ಇರಲಿ! ರಾಯರು ಬರಲಿ! ಅವರ ಮರ್ಯಾದೆಗೆ ಇದೂ ಒಂದು ಪರೀಕ್ಷೆ ನೋಡೋಣ ಎಂದುಕೊಂಡಳು.

ಸಾವಿತ್ರಮ್ಮನು ಬಂದು ಊಟಕ್ಕೇಳಬೇಕೆಂದು ಕರೆದಳು. ಶ್ಯಾಮಲೆಯು ತನ್ನ ಮೈಗೆ ಚೆನ್ನಾಗಿಲ್ಲವೆಂದೂ ಈ ದಿನ ಊಟ ಮಾಡುವುದಿಲ್ಲವೆಂದೂ ಹೇಳಿ ಕಳುಹಿಸಿದಳು. ಭಾಗೀರಥಮ್ಮನವರು "ಈ ಹುಡುಗಿಯು ಯಾವಾಗಲೂ ಹೀಗೇ ಇದೊಂದು ಹಠ. ಖಾಯಿಲೆಯಾದರೆ ಅನ್ನನೀರು ಬಿಟ್ಟು ಬಿಡುತ್ತಾಳೆ" ಎಂದರು.

ಶ್ಯಾಮಲೆಯು ರಾತ್ರಿಯೆಲ್ಲಾ ಇದೇ ಯೋಚನೆಯಲ್ಲಿದ್ದಳು. ಡಾಕ್ಟರು ಪಿಶಾಚಿಯಂತೆ ಕಾಣತೊಡಗಿದರು. ಶ್ಯಾಮಲಾ ಕತ್ತಿಯನ್ನು ತೆಗೆದುಕೊಂಡು ಡಾಕ್ಟರನ್ನು ಚೂರು ಚೂರಾಗಿ ಕತ್ತರಿಸಬೇಕೆಂದು ತೋರಿತು. ಹಲ್ಲುಗಳನ್ನು ಕಚ್ಚಿದಳು. ಹೀಗೇ ಎಷ್ಟೋ ಕ್ರೂರ ಯೋಚನೆಗಳು ಬಂದು ಶ್ಯಾಮಲೆಯ ಹೃದಯವನ್ನು ಒಡೆದು ಹಾಕಿದುವು. ಇಂತಹ ಕ್ರೋಧ-ವಿದ್ವೇಷಗಳ ಕಲ್ಪನಾ ಪ್ರಪಂಚದಲ್ಲಿ ಶ್ಯಾಮಲೆಯು ಆ ರಾತ್ರಿಯನ್ನು ಕಳೆದಳು.

ಶ್ಯಾಮಲೆಯು ಪ್ರಾತಃಕಾಲದಲ್ಲೆದ್ದು ಸ್ನಾನ ಮಾಡಿ ಮಡಿಬಟ್ಟೆಗಳನ್ನುಟ್ಟು ತುಳಸೀಪೂಜೆ ಮಾಡಿದಳು. ಸಾವಿತ್ರಮ್ಮನು ತಂದುಕೊಟ್ಟ ಕಾಫಿಯನ್ನು ಕುಡಿದಳು. ಭಾಗೀರಥಮ್ಮನವರು ಪೂಜೆಯನ್ನು ಮುಗಿಸಿಕೊಂಡು ಹೊರಗೆ ಬಂದು, "ಏನಮ್ಮಾ ಹೇಗಿದೆ ದೇಹಸ್ಥಿತಿ" ಎಂದು ಕೇಳಿದರು. ಶ್ಯಾಮಲೆಯು "ಆರೋಗ್ಯವಾಗಿದ್ದೇನೆ" ಎಂದು ಉತ್ತರ ಕೊಟ್ಟಳು. ಭಾಗೀರಥಮ್ಮನಿಗೆ ಬಹಳ ಸಂತೋಷವಾಯಿತು. ಶ್ಯಾಮಲೆಯು ಆ ದಿನ ಮಹಡಿಯ

ಮೇಲೆ ಹೋಗಲೇ ಇಲ್ಲ. ಕಮಲಮ್ಮನವರ ಮನೆಗೂ ಹೋಗಲಿಲ್ಲ. ಕೆಳಗಡೆಯೇ ಕಾಲ ಕಳೆಯುತ್ತಿದ್ದಳು. ಅವಳ ಮುಖದಲ್ಲಿ ಏನೋ ಉದ್ವಿಗ್ನತೆ ಇದ್ದುದು ಆಳುಕಾಳುಗಳಿಗೂ ಪರಿಚಾರಕರಿಗೂ ಸ್ಪಷ್ಟವಾಗಿ ತಿಳಿಯುತ್ತಿತ್ತು. ಒಂದೆರಡು ಬಾರಿ ಬೀದಿಯ ಬಾಗಿಲಿಗೆ ಬಂದು ನಾಲ್ಕಾರು ನಿಮಿಷಗಳು ನಿಂತಿದ್ದು ಒಳಗೆ ಬಂದು ಕುಳಿತಳು. ಈದಿನ ಡಾಕ್ಟರು ತಾನಾಗಿ ಬರುವನೇ ಎಂದು ನೋಡಿದಳು. ಬಂದರೆ ಹಾಗೆ ಮಾಡುತ್ತೇನೆ, ಹೀಗೆ ಮಾಡುತ್ತೇನೆ ಎಂದುಕೊಂಡಳು. ಸಂಧ್ಯಾಕಾಲವಾಯಿತು. ಡಾಕ್ಟರು ಬರಲೇ ಇಲ್ಲ. ಆ ಹೇಡಿ! ಅವನಿಗೆ ಬರುವ ಧೈರ್ಯವೆಲ್ಲಿದೆ ಎಂದುಕೊಂಡಳು. ಸುಮಾರು ಏಳು ಗಂಟೆಯ ಸಮಯದಲ್ಲಿ ರಂಗರಾಯನು ಬಂದಿಳಿದನು. ಶ್ಯಾಮಲೆಯು ಬಾಗಿಲಿನಲ್ಲಿಯೇ ಹೋಗಿ ಎದುರುಗೊಂಡಳು. ಹಸನ್ಮುಖದಿಂದ ಸ್ವಾಗತಿಸಿದಳು. ರಂಗರಾಯನಿಗೆ ಸ್ವರ್ಗದ ಬಾಗಿಲು ಸಿಕ್ಕಿದಂತಾಯಿತು.

ಅವನು ಶ್ಯಾಮಲೆಯನ್ನು ಈ ರೀತಿಯಾಗಿ ನೋಡಿ ಬಹಳ ದಿನಗಳಾಗಿತ್ತು. ಇಬ್ಬರೂ ಮಹಡಿಯ ಮೇಲೆ ಹೋದರು. ಶ್ಯಾಮಲೆ ಕಾಫಿಯನ್ನು ತಂದುಕೊಟ್ಟಳು. ರಂಗರಾಯನು ಕುಡಿಯುತ್ತಿದ್ದನು. ಹಾಸಿಗೆ, ಪೆಟ್ಟಿಗೆ ಸಾಮಾನುಗಳೆಲ್ಲಾ ಮೇಲಕ್ಕೆ ಬಂದುವು. ರಂಗರಾಯನು ಕೋಣೆಯ ಬಾಗಿಲುಗಳನ್ನು ಹಾಕಿ ತನ್ನ ಕೈಪೆಟ್ಟಿಗೆಯ ಬಾಗಿಲನ್ನು ತೆಗೆದು ಒಂದು ಆಭರಣದ ಪೆಟ್ಟಿಗೆಯನ್ನು ತಂದು ಶ್ಯಾಮಲೆಯ ಕೈಲಿ ಕೊಟ್ಟನು " ಶ್ಯಾಮಲಾ! ಇದೇನು ನೋಡು " ಎಂದನು. ಶ್ಯಾಮಲೆ ಆ ಪೆಟ್ಟಿಗೆಯ ಮುಚ್ಚಳವನ್ನು ತೆಗೆದು ನೋಡಿದಳು. ಜಗಜಗಿಸುವ ವಜ್ರದ 'ನೆಕ್‌ಲೇಸ್' ನೋಡಿ ನಗು ಮೊಗ ಮಾಡಿದಳು. ರಂಗರಾಯನು ಇದಕ್ಕೆ ಮೂರು ಸಾವಿರ ರೂಪಾಯಿ! ಮದರಾಸಿನಿಂದ ತಂದೆ. ಚೆನ್ನಾಗಿದೆಯೇ ? " ಎಂದು ಕೇಳಿದನು.

ಶ್ಯಾಮಲೆಯು " ಬಹಳ ಚೆನ್ನಾಗಿದೆ. ನಾನು ಇಂತಹ ಹಾರವನ್ನು ನೋಡಿಯೇ ಇಲ್ಲ " ಎಂದಳು. ರಂಗರಾಯನಿಗೆ ಪರಮಾನಂದವಾಯಿತು.

ಶ್ಯಾಮಲೆಯು " ಪ್ರಾಣನಾಥ! ನನ್ನದೊಂದು ಮಹಾಪರಾಧವಿದೆ. ಅದನ್ನು ನಿಮ್ಮಲ್ಲಿ ಹೇಳಿಕೊಳ್ಳಬೇಕು. ನೀವು ಕ್ಷಮಿಸಿದರೆ ಈ ಜನ್ಮವು ಸಾರ್ಥಕ ಇಲ್ಲದಿದ್ದರೆ ಈ ರಾತ್ರಿಯೇ ಪ್ರಾಣ ಬಿಡುತ್ತೇನೆ " ಎಂದಳು. ರಂಗ

ರಾಯನಿಗೆ ಗಭೀರೆಂದಿತು. ಮಂಚದ ಮೇಲೆ ಕುಳಿತುಕೊಂಡನು. ಎದೆಯು ಬಡಿದುಕೊಳ್ಳುತ್ತಿತ್ತು. ಶ್ಯಾಮಲೆಯು ಹೇಳತೊಡಗಿದಳು—"ಡಾಕ್ಟರ್ ಸುಬ್ಬರಾವ್ ಪರಮ ನೀಚ! ಮೊನ್ನೆಯ ಸಂಧ್ಯಾಕಾಲ ಅವನು ನನ್ನ ಮಾನಭಂಗ ಮಾಡಲು ಪ್ರಯತ್ನಿಸಿದ. ನಾನು ಮುಖದ ಮೇಲೆ ಹೊಡೆದು ಒದ್ದು ಕಳಿಸಿದೆ—ಎಂದು ಆರಂಭಿಸಿ ತನ್ನ ಕಥೆಯನ್ನೆಲ್ಲಾ ಹೇಳಿದಳು. ಮಾತುಗಳು ಖಣೀರನೆ ಹೊರಬಿದ್ದುವು. ಮುಖಭಾವವು ದಿಟ್ಟತನದಿಂದಿತ್ತು. ಗಂಗರಾಯನು ಇದನ್ನು ಅಕ್ಷರಶಃ ಸತ್ಯವೆಂದು ನಂಬಿದನು. ಅವನ ಮುಖವು ಕೆಂಪಾಯಿತು, ಕಣ್ಣುಗಳು ಜ್ವಲಿಸತೊಡಗಿದುವು, ಮೈರೋಮಾಂಚವಾಯಿತು, ತುಟಿಯನ್ನು ಕಚ್ಚಿದನು. "ಶ್ಯಾಮಲಾ! ಇದರಲ್ಲಿ ನಿನ್ನ ಅಪರಾಧವೇನಿದೆ. ನಾನು ಕ್ಷಮಿಸತಕ್ಕದ್ದೇನಿದೆ. ನೀನು ಸೀತಾ, ಸಾವಿತ್ರಿಯರಂತೆ ಮಾಡಿದ್ದೀಯೆ. ಈ ಹೆಂಗಸರೆಲ್ಲರೂ ನಿನ್ನ ಹಾಗೆ ಧೈರ್ಯಶಾಲಿಗಳಾಗಿದ್ದಿದ್ದರೆ ಈ ಪ್ರಪಂಚವು ಸ್ವರ್ಗವಾಗುತ್ತಿತ್ತು" ಎಂದನು. ಅವನಿಗೆ ಬಹಳ ಕೋಪ ಬಂದಿತ್ತು. ಡಾಕ್ಟರು ತನ್ನ ಸ್ನೇಹಿತನೆಂದುಕೊಂಡು ತನ್ನ ಸರ್ವಸ್ವವನ್ನು ಅಪಹಾರ ಮಾಡಿದ್ದರೂ ಅವನಿಗೆ ಅಷ್ಟು ಕೋಪ ಬರುತ್ತಿರಲಿಲ್ಲ. ಆ ಕ್ಷಣ ಅವನಿಗೆ ಪ್ರತೀಕಾರ ಮಾಡಬೇಕೆಂದು ತೋರಿತು. ತನ್ನ ಆಳುಗಳನ್ನು ಬಿಟ್ಟು ಅವನನ್ನು 'ಹಣ್ಣುಗಾಯಿ' ಮಾಡಿಸಬೇಕೆಂದು ತೋರಿತು. ತಾನೇ ಅವನ ಎದುರಿಗೆ ಹೋಗಿ ಅವನ ಅಪರಾಧವನ್ನು ತಿಳಿಸಿ ಅವನನ್ನು ಇರಿದು ಕೊಲ್ಲಬೇಕೆಂದು ತೋರಿತು. ಅತ್ತಿತ್ತ ತಿರುಗಿದನು. ಚಡಪಡಿಸಿದನು. ಶ್ಯಾಮಲೆಯ ಎರಡು ಕೈಗಳನ್ನು ಹಿಡಿದುಕೊಂಡು ಮಂಚದ ಮೇಲೆ ಕೂಡಿಸಿಕೊಂಡು "ಶ್ಯಾಮಲಾ! ನೀನು ನನ್ನ ಮಾನವನ್ನು ಕಾಪಾಡಿದೆ" ಎಂದು ಕೊಂಡಾಡಿದನು.

ಆ ದಿನ ರಾತ್ರಿ ರಂಗರಾಯನೂ ಶ್ಯಾಮಲೆಯೂ ಜೊತೆಯಲ್ಲಿ ಊಟ ಮಾಡಿದರು. ಆ ದಿನ ರಾತ್ರಿ ಎಷ್ಟೋ ಮಾತನಾಡಿದರು. ರಂಗರಾಯನು ತನ್ನ ವ್ಯಾಪಾರದ ಲಾಭವನ್ನು ವಿವರಿಸಿ ಹೇಳಿದನು.

೧೨

ಕಾಂಗ್ರೆಸ್ಸಿನವರನೇಕರನ್ನು ಬಿಡುಗಡೆ ಮಾಡಿದರು. ಗಂಗಾಧರರಾಯನು ಊರಿಗೆ ಬಂದನು. ನಾರಾಯಣನಿಗೂ ಬಿಡುಗಡೆಯಾಯಿತು. ಅವನು ಬೆಂಗಳೂರಿಗೆ ಹೋಗಿ ತಾಯಿಯ ದರ್ಶನ ಮಾಡಿದನು. ಅವಳಿಗೆ ಮಗನನ್ನು ನೋಡಿ ಅತ್ಯಾನಂದವಾಯಿತು. ಕಣ್ಣಿನಲ್ಲಿ ಆನಂದ ಬಾಷ್ಪಗಳು ಬಂದುವು. ಮಗನನ್ನು ಹತ್ತಿರ ಕೂಡಿಸಿಕೊಂಡು ತಲೆಸವರಿ ಆಶೀರ್ವಾದ ಮಾಡಿದಳು. ಶ್ಯಾಮಲೆಯ ಮದುವೆಯ ವೃತ್ತಾಂತವೆಲ್ಲವನ್ನೂ ಹೇಳಿದಳು. ಎರಡನೆಯ ಮದುವೆಗೆ ಶ್ಯಾಮಲೆಯನ್ನು ಕೊಟ್ಟದ್ದು ನಾರಾಯಣನಿಗೆ ಅಷ್ಟು ಸಮಾಧಾನವಾಗಲಿಲ್ಲ. ಆದರೂ ಅವನು ಅದನ್ನು ತೋರ್ಪಡಿಸಲಿಲ್ಲ. "ಶ್ಯಾಮಲೆಯು ಸುಖವಾಗಿದ್ದಾಳಷ್ಟೆ?" ಎಂದನು.

"ಹೌದು! ಸುಖವಾಗಿದ್ದಾಳೆ" ಎಂದು ಪಾರ್ವತಮ್ಮ ಹೇಳಿದಳು. ಅನಂತರ, ಮನೆಯಲ್ಲಿ ಒಕ್ಕಲುತನ ಕೊಟ್ಟಿರುವ ವಿಷಯವನ್ನು ಹೇಳಿದಳು. ಆ ಗೃಹಸ್ಥರು ಬಲು ದೊಡ್ಡವರೆಂದೂ ಅವರ ಹೆಂಡತಿ ಬಹಳ ಒಳ್ಳೆಯವರೆಂದೂ ಹೇಳಿದಳು. ಅಷ್ಟರಲ್ಲಿ ಅನ್ನಪೂರ್ಣಮ್ಮನವರು "ಪಾರ್ವತಮ್ಮನವರೇ! ನಿಮ್ಮ ಮಗ ಬಂದಿದ್ದಾರಂತಲ್ಲಾ" ಎಂದು ಹೇಳುತ್ತಾ ಬಂದೇ ಬಿಟ್ಟರು. ನಾರಾಯಣನು ಎದ್ದು ಗೌರವಿಸಿದನು.

"ನೀನೇನಪ್ಪ ನಾರಾಯಣ. ನಿಮ್ಮ ತಾಯಿಗೆ ಒಬ್ಬನೇ ಮಗ! ಹೀಗೆ ಜೈಲಿಗೆ ಹೋಗಬಹುದೇ? ಏನೋ ಗ್ರಹಚಾರ! ಇನ್ನು ಮೇಲಾದರೂ ಸುಖವಾಗಿರು" ಎಂದು ಹರಸಿದರು. ನಾರಾಯಣನು ಅವರಿಗೆ ನಮಸ್ಕರಿಸಿ ಹೊರಗೆ ಬಂದನು. ಸುಬ್ರಹ್ಮಣ್ಯ ಶಾಸ್ತ್ರಿಗಳ ಭೇಟಿ ಮಾಡಿದನು. "ಏನಪ್ಪಾ! ನಾರಾಯಣ ಮನೆಗೆ ಬಂದೆಯಾ? ಈಗ ಈ ಮನೆ ಶೋಭಿಸಿದಂತಾಯಿತು.

ದೇವರು ನಿನಗೆ ಒಳ್ಳೆಯದನ್ನು ಮಾಡಲಿ" ಎಂದು ಹರಸಿದರು. ನಾರಾಯಣನು ಅವರಿಗೆ ವಂದಿಸಿ ಹೊರಗೆ ಬಂದನು. ಅನಂತರ ಸ್ನಾನ ಮಾಡಿ ಕಾಂಗ್ರೆಸ್ ಆಫೀಸಿನ ಕಡೆಗೆ ಹೋಗಿ ಅನೇಕ ಸ್ನೇಹಿತರನ್ನು ಕಂಡು ಬಂದನು. ಮೈಸೂರಿಗೆ ಹೋಗಿ ಶ್ಯಾಮಲೆಯನ್ನು ನೋಡಿ ಬರಬೇಕೆಂದುಕೊಂಡನು. ಮನೆಗೆ ಬಂದು ಭೋಜನ ಮಾಡಿದನು. ತಾಯಿಯ ಕೈ ಊಟ ಮಾಡಿ ಮೂರು ವರ್ಷಗಳಾಗಿದ್ದುವು. ಆನಂದದಿಂದ ಊಟ ಮಾಡಿದನು. ಮಾರನೆಯ ಬೆಳಗ್ಗೆಯೇ ಮೈಸೂರಿಗೆ ಹೊರಟನು. ರೈಲಿನಿಂದ ಇಳಿದವನೇ ಸೀದಾ ಗಂಗಾಧರರಾಯನ ಮನೆಗೆ ಹೋದನು. ಅಲ್ಲಿ ಅವನಿಗೆ ಯಾರ ಪರಿಚಯವೂ ಚೆನ್ನಾಗಿ ಇಲ್ಲದಿದ್ದರೂ ಎಲ್ಲರೂ ಮನೆಯವರಂತೆಯೇ ವರ್ತಿಸಿದರು. ವಾಸುವು ಊರಿನಲ್ಲಿರಲಿಲ್ಲ. ಮದರಾಸಿಗೆ ಬಿ. ಎಲ್. ಪರೀಕ್ಷೆಗೆ ಹೋಗಿದ್ದನು. ಊಟವಾಗುತ್ತಲೇ, ಗಂಗಾಧರರಾಯನೊಡನೆ, ರಂಗರಾಯರ ಮನೆಗೆ ಹೋಗಿ ಬರುವುದಾಗಿ ಹೇಳಿದನು. ನಾಣಿಗೆ ರಂಗರಾಯರ ಪರಿಚಯವೇ ಇಲ್ಲ. "ಯಾರು ಅವರ ಮನೆಗೆ ಕರೆದುಕೊಂಡು ಹೋಗುವವರು" ಎಂದು ಗಂಗಾಧರರಾಯನು ಕೇಳಿದನು. ನಾಣಿಯು "ಶ್ಯಾಮಲೆಯ ಮನೆಯಲ್ಲವೇ ? ನಾನೇ ಹೋಗಿ ಬರುತ್ತೇನೆ" ಎಂದನು.

ಕಮಲಮ್ಮನವರು "ಶ್ಯಾಮಲೆಯು ಎಲ್ಲೋ ಅಂತಃಪುರದಲ್ಲಿರುತ್ತಾಳೆ. ಬಾಗಿಲಲ್ಲಿ ಆಳುಗಳು ನೀವಾರು ?" ಎಂದು ಕೇಳುತ್ತಾರೆ. ರಂಗರಾಯರ ಮನೆ ಏನು ನಮ್ಮ ಮನೆಯಂತೆಯೇ ! ಬಹಳ ಐಠಕ್ ಇದೆ !" ಎಂದರು.

ತಾರಾ, "ನಾನು ಕರೆದುಕೊಂಡು ಹೋಗುತ್ತೇನೆ" ಎಂದಳು. ಗಂಗಾಧರರಾಯನೂ ಕಮಲಮ್ಮನವರೂ ನಕ್ಕುಬಿಟ್ಟರು. ನಾಣಿಯು ತಲೆಬಾಗಿಸಿದನು. ಕಮಲಮ್ಮನವರಿಗೆ ಮಗಳು ಹಾಗೆ ಹೋಗುವುದು ಸರಿ ಬೀಳಲಿಲ್ಲ. "ಅಲ್ಲ ಕಣೇ ತಾರಾ ! ನೀನಿನ್ನೂ ತಲೆ ಬಾಚಿಕೊಂಡಿಲ್ಲ. ಹೀಗೆ ಹೋದರೆ ಯಾರಾದರೂ ನಗುವುದಿಲ್ಲವೇ ?" ಎಂದರು. ತಾರಾ "ಅಯ್ಯೋ ! ಅಲ್ಲಿ ಯಾರಿದಾರೆ ? ನನ್ನ ಗೆಳತಿ ಶ್ಯಾಮಲೆಯೊಬ್ಬಳೇ ! ಅವಳು ಏನೂ ಅಂದುಕೊಳ್ಳುವುದಿಲ್ಲ" ಎಂದು ಹೊರಟೇ ಬಿಟ್ಟಳು. ನಾರಾಯಣನು ಅವಳ ಹಿಂದೆ ಹೊರಟನು.

ತಾರಾ ಬಾಯಿಮುಚ್ಚಿಕೊಂಡು ಹೋಗಲಿಲ್ಲ. "ನಿಮಗೆ ನನ್ನೊಡನೆ ಬರಲು ನಾಚಿಕೆಯೇನು ?" ಎಂದು ನಗುತ್ತಾ ಕೇಳಿದಳು.

ನಾಣಿಯು ಇನ್ನು ಬಾಯಿ ಮುಚ್ಚಿಕೊಂಡಿರುವುದು ಹೇಡಿತನ ಎಂದುಕೊಂಡು, "ಅದೇನೂ ಇಲ್ಲ, ನೀನೂ ನಮ್ಮ ಶ್ಯಾಮಲೆಯಂತೆ! ಆದರೆ ನಿಮ್ಮ ತಂದೆ ತಾಯಿಗಳು ಏನೆಂದುಕೊಳ್ಳುತ್ತಾರೋ ಎಂದು ಅನ್ನಿಸಿತು."

"ಅವರೇನೆನ್ನುತ್ತಾರೆ. ನಮುನಮಗೆ ಮದುವೆಯಾಗಿದೆಯೇ? ಹಾಗೆ ಮದುವೆಯಾಗಿದ್ದರೆ ಮೂರು ವರ್ಷಗಳಾಗಬೇಕಾಗಿತ್ತು. ಈಗ ನಾಚಿಕೆಗೆ ಕಾರಣವೇನು ?"

ಇಷ್ಟು ಹೊತ್ತಿಗೆ ರಂಗರಾಯನ ಮನೆ ಸಿಕ್ಕಿತು. ನಾಣಿಯು ಬದುಕಿಕೊಂಡೆನೆಂದುಕೊಂಡ. ತಾರಾ ಮನೆಯೊಳಗೆ ಹೋದಳು. ಜವಾನರಿಗೆ ತಾರಾ ಶ್ಯಾಮಲೆಯ ಪರಮ ಸ್ನೇಹಿತೆಯೆಂದು ಗೊತ್ತಿತ್ತು. ಅವರುಗಳು ಮರ್ಯಾದೆಯಿಂದ ಎದ್ದು ನಿಂತರು ತಾರಾ ನಾರಾಯಣನನ್ನು ಹಜಾರದಲ್ಲಿ ಸೋಫಾದ ಮೇಲೆ ಕುಳ್ಳಿರಿಸಿ ತಾನು ಧಡಧಡನೆ ಮೆಟ್ಟಿಲುಗಳನ್ನು ಹತ್ತಿ ಹೋಗಿ "ಶ್ಯಾಮಲಾ ಶ್ಯಾಮಲಾ" ಎಂದು ಕೂಗಿದಳು. ಶ್ಯಾಮಲೆಯು ತನ್ನ ಕೋಣೆಯ ಬಾಗಿಲನ್ನು ತೆರೆದುಕೊಂಡು ಬಂದಳು. "ಶ್ಯಾಮಲಾ ಕೆಳಗೆ ಬಾ! ನಿನ್ನ ಭೇಟಿಗಾಗಿ ಕಾಂಗ್ರೆಸ್ಸಿನವರೊಬ್ಬರನ್ನು ಕರೆತಂದಿದ್ದೇನೆ" ಎಂದು ಹೇಳುತ್ತಾ ಶ್ಯಾಮಲೆಯನ್ನು ದರದರನೆ ಕೈ ಹಿಡಿದು ಕರೆದುಕೊಂಡು ಬಂದು ನಾರಾಯಣನ ಎದುರಿಗೆ ನಿಲ್ಲಿಸಿದಳು. ಶ್ಯಾಮಲೆಗೆ ಹಿಡಿಸಲಾರದಷ್ಟು ಆನಂದವಾಯಿತು. ನಾಣಿಯ ಕೈ ಹಿಡಿದುಕೊಂಡು "ಯಾವಾಗ ಬಂದೆ? ಯಾವಾಗ ಜೈಲಿನಿಂದ ಬಿಡುಗಡೆಯಾಯಿತು" ಎಂದು ಪ್ರಶ್ನಿಸಿದಳು. ನಾರಾಯಣನು ಸವಿಸ್ತಾರವಾಗಿ ತನ್ನ ಬಿಡುಗಡೆಯ ಕಥೆಯನ್ನು ಹೇಳಿದನು. ಶ್ಯಾಮಲೆಯು ತಾರಳ ಕಡೆಗೆ ನೋಡಿ, "ತಾರಾ! ಈ ಕಾಂಗ್ರೆಸ್ ಭಕ್ತರನ್ನು ಕೂಡಿಸಿಕೊಂಡು ಎರಡು ನಿಮಿಷ ಇಲ್ಲಿಯೇ ಇರು. ನಾನು ಕಾಫಿ ತರುತ್ತೇನೆ" ಎಂದು ಹೇಳಿ ಒಳಗೆ ಹೋಗಿ ಬೆಳ್ಳಿಯ ತಟ್ಟೆಗಳಲ್ಲಿ ಇಬ್ಬರಿಗೂ ತಿಂಡಿಯನ್ನೂ ಕಾಫಿಯನ್ನೂ ತಂದುಕೊಟ್ಟು, "ತಾರಾ! ತೆಗೆದುಕೊಳ್ಳಿ ತಂಗಿಯ ಮನೆಯಲ್ಲಿಯೂ ಸಂಕೋಚವೇ ಉಪಚಾರ ಹೇಳಬೇಕೇ" ಎಂದಳು. ಅಷ್ಟರಲ್ಲಿ

ಜರಿಯ ಪಂಚೆಯನ್ನುಟ್ಟು, ಶಿಲ್ಕು ಅಂಗಿಯನ್ನು ಧರಿಸಿ, ಕಲಾಪತ್ತು ಉತ್ತರೀಯವನ್ನು ಹೊದ್ದು ಪಂಪ್‌ಷೂ ಮೆಟ್ಟಿಕೊಂಡು ರಂಗರಾಯನು ಮಹಡಿಯಿಂದ ಗಂಭೀರವಾಗಿ ಇಳಿದನು. ಅವನಿಗೆ ತಾರಾ ಬಂದು ಶ್ಯಾಮಲೆಗೆ ಹೇಳಿದ್ದು ಕೇಳಿಸಿತ್ತು. ಕಾಂಗ್ರೆಸ್ ಭಕ್ತರು ಎಂದಿದ್ದು ಅವನ ಕಿವಿಯ ಮೇಲೆ ಬಿದ್ದಿತ್ತು. ಅವನು ಅದು ಶ್ಯಾಮಲೆಯ ಅಣ್ಣನೇ ಇರಬಹುದೆಂದು ಊಹಿಸಿದ್ದನು. ಕೆಳಗೆ ಬಂದು ನಿಂತನು. "ಶ್ಯಾಮಲಾ ! ಇವರೇ ನಿಮ್ಮ ಅಣ್ಣಂದಿರೋ ?"

"ಗೊತ್ತಾಗಲಿಲ್ಲವೇ ? ಇವನೇ ನಮ್ಮ ನಾಣಿ !"

ರಂಗರಾಯನು, "ನಾರಾಯಣರಾವ್ ನೀವು ಯಾವಾಗ ಬಂದಿರಿ ?" ಎಂದನು.

"ಬೆಳಗ್ಗೆ ರೈಲಿನಿಂದ ಬಂದೆ. ಬೆಂಗಳೂರಿನಿಂದ ಬಂದೆ."

"ನಿಮಗೆ ಬಿಡುಗಡೆಯಾಗಿ ಎಷ್ಟು ದಿನವಾಯಿತು ?"

"ಮೂರು ದಿನಗಳಾದುವು. ಬೆಂಗಳೂರಿಗೆ ಹೋಗಿದ್ದೆ. ಶ್ಯಾಮಲೆಯನ್ನು ನೋಡಿಕೊಂಡು ಹೋಗೋಣವೆಂದು ಇಲ್ಲಿಗೆ ಬಂದೆ."

"ಬಹಳ ಸಂತೋಷ. ನೀವು ರೈಲಿನಿಂದ ನಮ್ಮ ಮನೆಗೇ ಏಕೆ ಬರಲಿಲ್ಲ ?"

"ಏನೂ ತಿಳಿದುಕೊಳ್ಳಬೇಡಿರಿ. ನಾನೂ ಗಂಗಾಧರರಾಯರೂ ಒಟ್ಟಿಗೆ ಮೂರು ವರ್ಷ ಜೈಲಿನಲ್ಲಿ ಇದ್ದೆವು. ಒಂದೇ ಮನೆಯವರಂತೆ ಇದ್ದೆವು. ಆದ್ದರಿಂದ ಅಲ್ಲಿಯೇ ಇಳಿದೆ !"

ರಂಗರಾಯನು ನಗುತ್ತಾ ತಾರೆಯ ಕಡೆಗೆ ತಿರುಗಿ "ಹೌದು ! ಹೌದು ! ನೀವು ಒಂದೇ ಮನೆಯವರು" ಎಂದನು.

ಶ್ಯಾಮಲೆಯು "ನೋಡಿ, ಈಗಿನ ಕಾಲದ ಹುಡುಗಿಯರು ! ಈ ತಾರೆ ಎಷ್ಟು ದಿಟ್ಟತನದಿಂದ ನಾಣಿಯನ್ನು ಕರೆತಂದಿದ್ದಾಳೆ" ಎಂದು ನಕ್ಕಳು.

ರಂಗರಾಯನು "ಹಾಗೆಯೇ ಇರಬೇಕು" ಎಂದು ಹೇಳಿ, "ನಾರಾಯಣರಾಯರೇ ನಾನು ಸ್ವಲ್ಪ ಪೇಟೆಯ ಕಡೇ ಹೋಗಿ ಬರುತ್ತೇನೆ. ನೀವು ತಂಗಿಯೊಡನೆ ಮಾತನಾಡುತ್ತಾ ಇಲ್ಲಿಯೇ ಇರಿ. ರಾತ್ರಿ ನಮ್ಮ ಮನೆಯಲ್ಲಿಯೇ

ಊಟವಾಗಲಿ. ರಾತ್ರಿ ಸಾವಕಾಶವಾಗಿ ಮಾತನಾಡೋಣ " ಎಂದು ಹೇಳಿ ಹೊರಟು ಹೋದನು.

ನಾಣಿಯು ಭಾವನನ್ನು ನೋಡಿದನು. ಐಶ್ವರ್ಯವಂತ! ಬುದ್ಧಿವಂತ! ಆದರೆ ನಲವತ್ತರ ಮೇಲೆ ವಯಸ್ಸಾಗಿದೆ. ಆದರೂ ಶ್ಯಾಮಲೆಯು ಗಂಡ ನೊಡನೆ ಹೊಂದಿಕೊಂಡಿದ್ದಾಳೆ ಎಂದುಕೊಂಡನು. ಇದರಿಂದ ಅರ್ಧ ಸಮಾಧಾನವಾಯಿತು. ಶ್ಯಾಮಲೆಯೊಡನೆ ಮಾತನಾಡುತ್ತಾ ಇದ್ದ ಹಾಗೆಯೇ ಭಾಗೀರಥಮ್ಮನವರು ಪುರಾಣ ಮುಗಿಸಿಕೊಂಡು ಬಂದರು. ಶ್ಯಾಮಲೆಯು ನಾಣಿಯನ್ನು ಕರೆದುಕೊಂಡು ಹೋಗಿ " ಇವರೇ ನಮ್ಮ ಅಣ್ಣ " ಎಂದು ಅತ್ತೆಗೆ ತೋರಿಸಿದಳು.

ಅವರು ಆದರದಿಂದ, " ಬಂದಿಯಾಪ್ಪಾ ಬಾ! ನಿನ್ನನ್ನು ನೋಡಿಯೇ ಇರಲಿಲ್ಲ. ಹಾಳು ಸರ್ಕಾರ ನಿಮ್ಮಂಥಹ ಹುಡುಗರನ್ನೆಲ್ಲಾ ಜೈಲಿಗೆ ಹಾಕಿ ಬಿಡುತ್ತಾರೆ. ಜೈಲಿನಲ್ಲಿ ಎಷ್ಟು ಕಷ್ಟಪಟ್ಟೆಯೋ ದೇವರು ಕಾಪಾಡಿದ " ಎಂದು ಅನುತಾಪವನ್ನು ಸೂಚಿಸಿದರು. ನಾರಾಯಣನು ನಗುಮೊಗದಿಂದ ನಿಂತಿ ದ್ದನು. " ನಿಮ್ಮ ತಾಯಿಯನ್ನು ನೋಡಿ ಬಾರಪ್ಪ. ಆ ಮಹಾತಾಯಿ ಹೊಟ್ಟೆ ಎಷ್ಟು ಉರಿಯುತ್ತಿದೆಯೋ ? " ಎಂದರು. ತಾರಾ ಕಡೆಗೆ ತಿರುಗಿ " ಏನೇ ತಾರಾ ನೀನೂ ಬಂದು ಬಿಟ್ಟೆದ್ದೀ " ಎಂದು ಮಾತನಾಡಿಸಿ ದೇವರ ಮನೆಯೊಳಕ್ಕೆ ಹೊರಟು ಹೋದರು.

ನಾಣಿಯು " ಶ್ಯಾಮಲಾ ನಾನು ಗಂಗಾಧರರಾಯರ ಮನೆಗೆ ಹೋಗಿ ಬರುತ್ತೇನೆ " ಎಂದನು.

ಶ್ಯಾಮಲಾ " ಇಲ್ಲ ಅಣ್ಣ! ನಿಮ್ಮ ಭಾವನವರು ನೊಂದುಕೊಳ್ಳುತ್ತಾರೆ. ಊಟಕ್ಕೆ ಇಲ್ಲೇ ಬಂದುಬಿಡು " ಎಂದಳು.

ನಾಣಿಯು, " ಅವರ ಮನೆಗೆ ಹೋಗಿ ಕಮಲಮ್ಮನವರಿಗೆ ಹೇಳಿ ಬರು ತ್ತೇನೆ " ಎಂದನು.

ಶ್ಯಾಮಲೆಯು " ತಾರಾ! ನಮ್ಮ ಈ ಕಾಂಗ್ರೆಸ್ ಭಕ್ತರನ್ನು ನಿಮ್ಮ ಮನೆಯಲ್ಲೇ ಬಚ್ಚಿಟ್ಟುಕೊಳ್ಳಬೇಡ. ನಮ್ಮ ಮನೆಗೇ ಬರಲಿ."

" ಶ್ಯಾಮಲಾ ನೀನು ಇಲ್ಲದ ಆಕ್ಷೇಪಣೆಯನ್ನು ಮಾಡಬೇಡ. ನಾನು

ಬೇಕಾದರೆ ಇಲ್ಲಿಯೇ ಇರುತ್ತೇನೆ. ನನ್ನನ್ನೇನು ನಿನ್ನ ಹಾಗೆ ಕಟ್ಟೀ
ರೆಯೇ ? " ಎಂದಳು. ಶ್ಯಾಮಲೆಯು ನಕ್ಕಳು.

ತಾರಾ ಮತ್ತು ನಾಣಿ ಇಬ್ಬರೂ ಮನೆಗೆ ಹೊರಟರು. ಬೆಳು
ಹಾಲು ಚೆಲ್ಲಿದಂತೆ ಬೆಳಗುತ್ತಿತ್ತು. ತಾರಾ "ಏನ್ರಿ ನಾರಾಯಣ್ !
ಭಾವನವರನ್ನು ಒಪ್ಪಿದಿರಾ ? " ಎಂದಳು.

ನಾಣಿಯು ಈ ತಾರಾ ಬಹಳ ಸರಳ ಸ್ವಭಾವದವಳು, ಏ
ಕೇಳುತ್ತಾಳೆ ಅಂದುಕೊಂಡು "ನಾನೇನು ಒಪ್ಪಬೇಕು ? ನಿಮ್ಮ ಶ್ಯಾ
ಒಪ್ಪಿದ್ದರೆ ಸರಿ ! ಮೂರು ವರ್ಷಗಳಿಂದಲೂ ನೀನೇ ನೋಡಿದ್ದಿ.
ಹೇಳು ಶ್ಯಾಮಲೆಯು ಒಪ್ಪಿದ್ದಾಳೋ ಇಲ್ಲವೋ ? "

"ಶ್ಯಾಮಲೆಯು ದೊಡ್ಡ ಗೃಹಿಣಿಯಾಗಿದ್ದಾಳೆ. ಅವಳೇ ಆ
ಯಜಮಾನಿ, ಆ ಮುದುಕಿ ಅತ್ತೆ, ದೇವರು ದಿಂಡರು ಪುರಾಣ ಕ
ಗಳಲ್ಲಿರುತ್ತಾರೆ. ಯಜಮಾನರು ದಾಸಾನುದಾಸರಂತೆ ನಡೆಯುತ್ತಾ
ಗಳು, ನಗಗಳು ಶ್ಯಾಮಲೆಯ ಪೆಟ್ಟಿಗೆಗಳಲ್ಲಿ ತುಂಬಿವೆ.
ಕೊಂಚವೂ ಅಹಂಕಾರವಿಲ್ಲ. ಶ್ಯಾಮಲೆಯಂಥಾ ಹುಡುಗಿ ಯಾರಿದ
ಎಂದಳು.

"ಮತ್ತೇಕೆ ಶ್ಯಾಮಲೆಯು ಒಪ್ಪಿದ್ದಾಳೆಯೇ ಎಂದು ನ
ಕೇಳುತ್ತಿ. ನಾನು ಈಗಲೇ ಅಲ್ಲವೇ ಮದುವೆಯಾದ ಮೇಲೆ ಶ್ಯಾಮ
ನೋಡಿದ್ದು ! "

"ಅಲ್ಲಾ ಕಾಣರೀ ! ಗಂಡ ವಯಸ್ಸಾದವರಲ್ಲವೇ ?—ಇಚ
ಎಂದಳು.

ನಾಣಿಯು ಮಾತನಾಡಲಿಲ್ಲ.

ಅವರಿಬ್ಬರೂ ಮನೆಗೆ ಬರುವ ಹೊತ್ತಿಗೆ ಗಂಗಾಧರರಾಯನು
ಬಂದಿದ್ದನು. ಅವನು ಮಗಳನ್ನು ನೋಡಿ, "ತಾರಾ ! ನಾಣಿಯನ್ನು
ಕರೆದುಕೊಂಡು ಹೋಗಿದ್ದೆ. ವಾಸುವು ಇಲ್ಲವೆಂದು ಅವನ ಛಾರ್ಜು
ತೆಗೆದುಕೊಂಡು ಬಿಟ್ಟೆಯೇನು ? " ಎಂದನು. ತಾರಾ ನಗುತ್ತಾ
ಹೊರಟು ಹೋದಳು.

ಗಂಗಾಧರರಾಯನು, " ನಾಣೀ ತಂಗಿಯ ಮನೆಗೆ ಹೋಗಿದ್ದೆಯೋ? ಆ ರಂಗರಾಯನು ನಿನಗೆ ಗುರ್ತಿದೆಯೇನು ? "

" ನನಗೆಲ್ಲಿ ಗುರುತು. ನಾನು ಜೈಲಿಗೆ ಹೋದ ಮೇಲೆ ಮದುವೆಯಾದದ್ದು. ಇವತ್ತೇ ಅವರನ್ನು ನೋಡಿದ್ದು."

" ಇವತ್ತು ಪರಿಚಯ ಮಾಡಿಕೊಂಡು ಮಾತನಾಡಿದೆಯೋ? "

" ಹೌದು! ಮಾತನಾಡಿದೆ. ರಾತ್ರಿ ಅಲ್ಲಿಗೇ ಬರಬೇಕೆಂದು ಹೇಳಿದಾರೆ."

" ಹೋಗಿ ಬಾ! ಅವನೊಬ್ಬ ಬ್ಲಾಕ್ ಮಾರ್ಕೆಟ್ ಧೊರೆ. ಅಕಾರಣವಾಗಿ ಕಾಂಗ್ರೆಸ್ ವಿರೋಧಿ. ಕಾಂಗ್ರೆಸ್ಸಿನವರನ್ನು ಬೈದರೆ ಜಗಳವಾಡಿಕೊಂಡು ಬರಬೇಡ! "

" ಏನು ರಾಯರೇ! ನನ್ನ ಎದುರಿಗೆ ಕಾಂಗ್ರೆಸ್ಸನ್ನು ಬೈಯಲು ಅವರಿಗೆಷ್ಟು ಧೈರ್ಯವಿರಬೇಕು. ಗ್ರಹಚಾರ ಬಿಡಿಸಿ ಬಿಟ್ಟೇನು! ಗೌರವದಿಂದ ಇದ್ದರೆ ಗೌರವ! 'ದಂಡಿನಲ್ಲಿ ಸೋದರ ಮಾವನೊ' ಎಂಬಂತೆ! ಶಠಂ ಪ್ರತಿಶಾಠ್ಯ — ಇದ್ದೇ ಇದೆ ನಮ್ಮ ಅಸ್ತ್ರ."

" ಇದೇನೋ ನಾಣಿ ಹೀಗೆ ಮಾತನಾಡುತ್ತಿ ಭಾವನವರಲ್ಲಿ ಮೊದಲ ದಿನವೇ ಜಗಳವಾಡಿದರೆ ಹೇಗೊ! ಹಾಗಾದರೆ ನೀನು ಅವರ ಮನೆಗೆ ಹೋಗಲೇ ಬೇಡ! "

" ಹಾಗಲ್ಲ ರಾಯರೇ! ನನಗೆ ಅವರು ಭಾವನವರು. ಅವರಿಗೂ ಕಾಂಗ್ರೆಸ್ಸಿಗೂ ಏನು ಸಂಬಂಧ. ನಿಮ್ಮಂತಹ ದೊಡ್ಡವರು ಈ ಕಾಂಗ್ರೆಸ್ ವಿರೋಧಿಗಳಿಗೆ ಗೌರವ ಕೊಟ್ಟು ಅಟ್ಟಕ್ಕೇರಿಸಿದ್ದೀರಿ! ಇದೆಂಥಾ ನೀತಿ. ದುಡ್ಡುಳ್ಳ ದೊಡ್ಡ ಮನುಷ್ಯರು ಕಾಂಗ್ರೆಸ್ಸಿಗೂ ಬೇಕು, ಸರಕಾರಕ್ಕೂ ಬೇಕು. ನೀವೂ ಚಂದಾ ವಸೂಲು ಮಾಡುತ್ತೀರಿ. ಸರ್ಕಾರದವರು ಒಂದಕ್ಕೆ ಹತ್ತು ವಸೂಲು ಮಾಡುತ್ತಾರೆ. ಆದ್ದರಿಂದಲೇ ಅವರು ಕೊಬ್ಬಿ ಹೋಗಿದ್ದಾರೆ."

" ಸಾಕು ಸಾಕು! ರಂಗರಾಯನು ಕಾಂಗ್ರೆಸ್ಸನ್ನು ಬಯ್ಯುವುದು ಹಾಗಿರಲಿ, ನೀನೇ ಕಾಂಗ್ರೆಸ್ಸನ್ನು ಬಯ್ಯುವುದಕ್ಕೆ ಪ್ರಾರಂಭಿಸಿಬಿಟ್ಟೆಯಲ್ಲಾ! ದುಡ್ಡಿಲ್ಲದೇ ಕಾಂಗ್ರೆಸ್ ಚಳುವಳಿ ನಡಸುವುದು ಹೇಗೆ? ಮಹಾತ್ಮರೇ ತಿಲಕ್

ಸ್ವರಾಜ್ಯನಿಧಿಯನ್ನು ಎತ್ತಲಿಲ್ಲವೆ?"

"ಹಾಗಲ್ಲ ರಾಯರೇ! ಇವತ್ತು ಈ ಧನಿಕರಿಂದ ಹಣ ತೆಗೆದುಕೊಂಡರೆ ನಾಳೆ ಸ್ವರಾಜ್ಯ ಬಂದ ಮೇಲೆಯೂ ಅವರಿಗೆ ಸ್ಥಾನ ಮಾನಗಳನ್ನು ಕೊಡ ಬೇಕಾಗುತ್ತೆ. ಈಗಿನ ರಾಜ್ಯದಲ್ಲಿಯೂ ಅವರಿಗೆ ಮಾನ ಮರ್ಯಾದೆಗಳು! ನಾಳೆ ನಮ್ಮ ರಾಜ್ಯದಲ್ಲಿಯೂ ಅವರಿಗೇ ಅಗ್ರಪೂಜೆ. ಹೀಗಾದರೆ ನೀತಿ ಯಿಲ್ಲದ ಸ್ವರಾಜ್ಯವಾಗುವುದಿಲ್ಲವೆ? ಅವರು ನಮ್ಮ ಕಡೆಯಾದರೆ ಅತ್ತ ಕಡೆಗೆ ಇರಬೇಕು. ಸ್ವರಾಜ್ಯವು ಬಂದ ಮೇಲೆ ಇವರುಗಳಿಗೆ ತಲೆ ಎತ್ತಲು ಅವಕಾಶ ಕೊಡಬಾರದು!"

"ಅದು ಮಹಾತ್ಮಾಗಾಂಧಿಯವರ ತತ್ತ್ವವಲ್ಲ!"

"ನಾನು ಗಾಂಧಿಯವರನ್ನು ನೋಡಿಲ್ಲ. ಆಗಲಿ! ಅವರ ದರ್ಶನ ಮಾಡಿ ಅವರೊಡನೆಯೇ ಈ ಸಮಸ್ಯೆ ಇತ್ಯರ್ಥ ಮಾಡುತ್ತೇನೆ."

"ಅಯ್ಯೋ! ಹುಚ್ಚಾ, ಗಾಂಧಿಯವರ ಮುಂದೆ ಹೋಗಿ ನಿಂತರೆ ನೀನೇ ಮೂಕನಾಗಿ ಹೋಗುತ್ತಿ. ಅವರು ನಿನ್ನಂತಹವರೆಷ್ಟೋ ಜನರನ್ನು ನೋಡಿ ದ್ದಾರೆ. ಒಂದೇ ಮಾತಿನಲ್ಲಿ ನಿನ್ನ ಚರ್ಚೆಯನ್ನೆಲ್ಲಾ ಹಾರಿಸಿ ಬಿಡುತ್ತಾರೆ. ಅವರ ಔದಾರ್ಯದಲ್ಲಿ ನೀನು ತೇಲಿ ಹೋಗುತ್ತಿ. ಅವರ ನಗುವಿನಲ್ಲಿ ನೀನು ತೇಲಿ ಹೋಗುತ್ತಿ."

"ಆದ್ದರಿಂದಲೇ ಅವರು ಮಹಾತ್ಮರು!"

ನಾಣಿಯು ರಾಯರ ಅಪ್ಪಣೆ ಪಡೆದು ರಂಗರಾಯರ ಮನೆಗೆ ಹೋದನು.

ರಂಗರಾಯರ ಮನೆಯಲ್ಲಿ ರಾತ್ರಿ ಊಟದ ಸಮಯ. ಎಲ್ಲವೂ ಸಿದ್ಧ ವಾಗಿತ್ತು. ನಾಣಿಯು ಬರುವುದನ್ನೇ ಕಾಯುತ್ತಿದ್ದರು. ನಾಣಿಯು ಬಂದ ಕೂಡಲೇ ರಂಗರಾಯನು ಆದರದಿಂದ ಊಟಕ್ಕೆಬ್ಬಿಸಿದನು. ರಂಗರಾಯ, ಶ್ಯಾಮಲಾ, ನಾರಾಯಣ ಮೂವರೂ ಊಟಕ್ಕೆ ಕುಳಿತರು.

ರಂಗರಾಯನು, "ನಾ ರಾ ಯ ಣ ರಾ ವ್, ನಿಮ್ಮ ಮದುವೆಯು ಯಾವಾಗ?"

"ನೀವೆಲ್ಲಾ ಯಾವಾಗ ಮಾಡಿದರೆ ಆವಾಗ!"

"ನಮಗೆಲ್ಲಾ ಮದುವೆಯ ಸಂಭ್ರಮವು ಕ್ಷಿಪ್ರದಲ್ಲಿಯೇ ಕಾದಿದೆ."

ಶ್ಯಾಮಲೆಯು, “ ಹೆಣ್ಣು ಯಾರು ಗೊತ್ತಿದೆಯೋ ? ”

“ ನನಗೇಕೆ ಗೊತ್ತಿಲ್ಲ ನಿಮ್ಮಣ್ಣನನ್ನು ಇಲ್ಲಿಗೆ ಕರೆ ತಂದ ನಿಮ್ಮ ಅತ್ತಿಗೆ ತಾರಾ ! ”

ಶ್ಯಾಮಲೆಯು ನಕ್ಕಳು.

ನಾಣಿಯು, “ ಶ್ಯಾಮಲಾ ಆ ಹುಡುಗಿಯನ್ನು ನೀನು ಒಪ್ಪಿರುವೆಯಾ?”

“ ನಾನು, ನಿಮ್ಮ ಭಾವನವರು ಎಲ್ಲರೂ ಒಪ್ಪಿದ್ದೇವೆ. ನೀನು ಒಪ್ಪಿದರೆ ಸರಿ.”

“ ನಾನು ಮೊದಲೇ ಒಪ್ಪಿದ್ದೇನೆ.”

“ ನಿನಗಿಂತಲೂ ಮುಂಚೆ ಹೆಣ್ಣು ತಾನೇ ಒಪ್ಪಿದ್ದಾಳೆ ” ಎಂದು ಶ್ಯಾಮಲೆಯು ಹೇಳಿದಳು.

ರಂಗರಾಯನು “ ಹಾಗಾದರೇ ಸ್ವಯಂವರ ” ಎಂದನು.

ಅಲ್ಲಿಗೆ ಆ ಮಾತು ನಿಂತಿತು.

“ ನಾರಾಯಣರಾವ್, ನೀವು ಕೆಲಸಕ್ಕೆ ಸೇರುತ್ತೀರೋ ಹೇಗೆ ? ”

“ ನಮಗೆಲ್ಲಾ ಈ ಸರ್ಕಾರದಲ್ಲಿ ಯಾರು ಕೆಲಸ ಕೊಡುತ್ತಾರೆ.”

“ ನೀವು ಇಷ್ಟಪಟ್ಟರೆ ನಾನು ಕೆಲಸ ಕೊಡಿಸುತ್ತೇನೆ. ಅದಕ್ಕೇನು ಕಷ್ಟ.”

“ ನಿಮ್ಮಂಥವರಿಗೆ ಯಾವುದು ತಾನೇ ಅಸಾಧ್ಯ. ನೀವೆಲ್ಲಾ ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ.”

ಊಟವು ಮುಗಿಯಿತು. ಊಟವಾದ ಮೇಲೆ ಎಲ್ಲರೂ ಹಜಾರದಲ್ಲಿ ಎಲೆಯಡಿಕೆ ಹಾಕಿಕೊಳ್ಳುತ್ತಾ ಕುಳಿತರು.

“ ನಾರಾಯಣರಾವ್, ನೀವು ಇನ್ನೂ ಬ್ರಹ್ಮಚಾರಿಗಳು. ತಾಂಬೂಲ ಹಾಕುವುದಿಲ್ಲವೋ ? ”

“ ಬ್ರಹ್ಮಚರ್ಯದ ನಿಯಮವೇನೂ ಇಲ್ಲ. ಅಭ್ಯಾಸವಿಲ್ಲ.”

ಆಮೇಲೆ ಗಾಂಧಿಯವರ ಮಾತು. ಹಿಟ್ಲರನ ಸಾಹಸ! ರಷ್ಯಾದ ಸ್ಟ್ಯಾಲಿನ್ ಸಾಹಸ ಇತ್ಯಾದಿ ಮಾತುಗಳು ಬಂದುವು. ನಾಣಿಯು ರಂಗರಾಯನ ‘ ಕಾಮನ್‌ಸೆನ್ಸ್’ ಮೆಚ್ಚಿಕೊಂಡನು.

ಮಹಡಿಯ ಮೇಲೆ ಹೋಗಿ ಮಲಗಿದರು. ನಾರಾಯಣನೂ ಅಲ್ಲಿಯೇ

ಮಲಗಿದನು. ಅವನು "ರಂಗರಾಯನು ಕೆಟ್ಟ ಮನುಷ್ಯನಲ್ಲ. ಸ್ನೇಹಪರ! ತುಂಬಾ ದುಡ್ಡಿದೆ. ಈ ಪ್ರಪಂಚವೆಲ್ಲವೂ ಭಾಗ್ಯವಂತರದೇ ಎಂದು ತಿಳಿದು ಕೊಂಡಿದ್ದಾನೆ. ನಿಜವಾಗಿಯೂ ಇರುವ ಸ್ಥಿತಿಯೂ ಹಾಗೆಯೇ ಇದೆ. ಬಡವರಿಗೆ ಈ ಪ್ರಪಂಚದಲ್ಲಿ ಸ್ಥಾನವಿಲ್ಲ! ಬಡವರಿಗೇ ಬೇರೊಂದು ಪ್ರಪಂಚವು ನಿರ್ಮಾಣವಾಗಬೇಕು. ಯಾವ ಪುಣ್ಯಾತ್ಮನು ಅದನ್ನು ನಿರ್ಮಾಣ ಮಾಡುತ್ತಾನೆಯೋ ಅದುವರೆಗೆ ಈ ಪ್ರಪಂಚದ ಸ್ಥಿತಿಗಳು ಬಗೆಹರಿಯುವುದೇ ಇಲ್ಲ. ಬಡವರದೇ ರಾಜ್ಯವಾದರೆ ಅದು ನರಕವಾದರೂ ಸರಿ! ಸ್ವರ್ಗವಾದರೂ ಸರಿ! ಅಂತು ಅದು ಆಗಬೇಕು" ಎಂದುಕೊಂಡು ನಿದ್ರಿಸಿದನು.

ಬೆಳಗ್ಗೆ ಎದ್ದು ಯಥಾಪ್ರಕಾರ ಕಾಫಿ ಫಲಹಾರಗಳಾದುವು. ನಾರಾಯಣನು ಗಂಗಾಧರರಾಯನ ಮನೆಗೆ ರಂಗರಾಯನ ಅಪ್ಪಣೆ ಪಡೆದು ಹೊರಟನು.

೧೩

ಜೈಲಿನಿಂದ ಬಂದ ಮುಖಂಡರಿಗೆಲ್ಲಾ ಮೈಸೂರಿನಲ್ಲಿ ಸ್ವಾಗತದ ಏರ್ಪಾಟಾಯಿತು. ಟೌನ್‌ಹಾಲಿನಲ್ಲಿ ದೊಡ್ಡ ಸಭೆ. ಮೈಸೂರು ನಾಗರಿಕರು ಸ್ವಾಗತ ಸಭೆಗಳನ್ನು ಮಾಡುವುದರಲ್ಲಿ ನಿಸ್ಸೀಮರು. ಸರಕಾರದ ಅಧಿಕಾರಿಗಳ ಸಭೆಯಾದರೂ ಸರಿ ! ಕಾಂಗ್ರೆಸ್ಸಿನವರ ಸಭೆಗಳಾದರೂ ಸರಿ ಬ್ರಹ್ಮಾಂಡ ಸಭೆ. ಪ್ರಚಂಡ ಭಾಷಣಗಳು, ಪುಷ್ಪಹಾರಗಳ ಸುಗ್ಗಿ !

ಆ ಮಹಾಸಭೆಗೆ ಶ್ರೀ ಕೆ. ಟಿ. ಭಾಷ್ಯಂರವರು ಅಧ್ಯಕ್ಷರು. ಶ್ರೀ ಭಾಷ್ಯಂರವರೆಂದರೆ ಮಾತಿನಲ್ಲಿ ವಾಚಸ್ಪತಿ. ಅವರ ಭಾಷಣಗಳು ಕ್ರಾಂತಿಕಾರಿ. ಯಾದರೂ ನಯವಾದುವು.

ನಾರಾಯಣನ ಭಾಷಣವಾಯಿತು. ಆ ಭಾಷಣವು ಅತ್ಯುಗ್ರಭಾಷಣ. ಬಡವರು—ಭಾಗ್ಯವಂತರು, ಬಡವರ ರಾಜ್ಯ—ಭಾಗ್ಯವಂತರ ರಾಜ್ಯ ಇವುಗಳ ಬಗ್ಗೆ ಭಾಷಣ ಮಾಡಿದನು. ಕೊನೆಯಲ್ಲಿ “ ನಾವು ಬಡವರು. ಈ ರಾಜ್ಯವೆಲ್ಲವೂ ಬಡವರ ರಾಜ್ಯವೇ ಆಗಬೇಕು. ಇಲ್ಲದಿದ್ದರೆ ಬಡವರದೇ ಒಂದು ರಾಜ್ಯವಾಗಬೇಕು. ಅದು ಸ್ವರ್ಗವಾದರೂ ಸರಿ. ಮರುಭೂಮಿಯಾದರೂ ಸರಿ ! ” ಎಂದು ಮುಗಿಸಿದನು. ಸಭಿಕರೆಲ್ಲರೂ ದೀರ್ಘಕಾಲ ಚಪ್ಪಾಳೆ ತಟ್ಟಿದರು. ಆ ಸಭೆಗೆ ರಂಗರಾಯನೂ ಬಂದಿದ್ದನು.

ಕೊನೆಯಲ್ಲಿ ಶ್ರೀ ಭಾಷ್ಯಂರವರ ಭಾಷಣ. ಜೇನುತುಪ್ಪದಂತಹ ಭಾಷಣ !

“ ಜೈಲಿನಿಂದ ಬಂದ ಕಾಂಗ್ರೆಸ್ ಮುಖಂಡರನ್ನು ಈ ನಗರ ವಾಸಿಗಳ ಇಷ್ಟು ಸಂಭ್ರಮದಿಂದ ಅಭಿನಂದಿಸಿದ್ದಕ್ಕೆ ವಂದನೆಗಳು. ಇಂದಿನ ಭಾಷಣಗಳಲ್ಲಿ ಶ್ರೀ ನಾರಾಯಣರ ಭಾಷಣ ಬಹಳ ಹುರುಪಿನ ಭಾಷಣ. ಬಡವರ ಕಷ್ಟಗ

ಳನ್ನು ಯಥಾವತ್ತಾಗಿ ವರ್ಣಿಸಿದರು. ಅದನ್ನೆಲ್ಲಾ ಹೋಗಲಾಡಿಸುವುದೇ ಕಾಂಗ್ರೆಸ್ಸಿನ ಧ್ಯೇಯ. ಆದರೆ ಬಡವರ ರಾಜ್ಯ— ಭಾಗ್ಯವಂತರ ರಾಜ್ಯ ಎಂದು ವಿಭಾಗ ಮಾಡುವುದು ಗಾಂಧೀ ಧರ್ಮವಲ್ಲ. ಬಡವರೂ ಭಾಗ್ಯವಂತರೂ ಎಲ್ಲರೂ ಕಾಂಗ್ರೆಸ್ಸಿಗೆ ಬೆಂಬಲ ಕೊಟ್ಟು ಭಾರತವನ್ನು ಉದ್ಧಾರ ಮಾಡುವುದು ಗಾಂಧಿಯವರ ಮಾರ್ಗ. ಎಲ್ಲರೂ ಗಾಂಧೀ ಧರ್ಮವನ್ನು ಪಾಲಿಸಬೇಕು. ಹಾಗೆ ಮಾಡಿದರೆ ಒಂದೇ ದಿನದಲ್ಲಿ ಸ್ವರಾಜ್ಯವು ಬಂದು ಬಿಡುತ್ತದೆ" ಎಂದು ಭಾಷಣವನ್ನು ಪೂರೈಸಿದರು.

ಜನರೆಲ್ಲರೂ ಕಾಂಗ್ರೆಸ್ಸನ್ನು ಹೊಗಳುತ್ತಾ ಗಾಂಧಿಯವರು ಮಹಾತ್ಮರೆಂದು ಹೊಗಳುತ್ತಾ ಹೊರಟು ಹೋದರು.

ಅಂದಿನಿಂದ ಎಲ್ಲಿ ಹೋದರೂ ನಾರಾಯಣನಿಗೆ ಗೌರವ! ಅವನೊಬ್ಬ ಪ್ರಚಂಡ ವಾಗ್ಮಿಯೆಂದು ಹೊಗಳಿಕೆ. ಸರ್ಕಾರದವರು ಪುನಃ ಅವನನ್ನು ಜೈಲಿಗೆ ಹಾಕುತ್ತಾರೆಂದು ಪ್ರತೀತಿ. ರೈಲ್ವೇ ಕೆಲಸಗಾರರ ಮೀಟಿಂಗು ನಡೆಯಿತು. ಅದಕ್ಕೆ ನಾರಾಯಣನೇ ಅಧ್ಯಕ್ಷ! ಕೃಷ್ಣರಾಜೇಂದ್ರ ಮಿಲ್ ಕೆಲಸಗಾರರ ಸಭೆ ನಡೆಯಿತು; ಅಲ್ಲಿಯೂ ನಾರಾಯಣನ ಉಜ್ವಲ ಭಾಷಣ. ಯುವಕ ಸಂಘ, ವಿದ್ಯಾರ್ಥಿಗಳ ಸಂಘ ಎಲ್ಲ ಕಡೆಯೂ ನಾರಾಯಣನ ಭಾಷಣಗಳು. ಎಲ್ಲೆಲ್ಲಿಯೂ ನಾರಾಯಣನ ಹೆಸರೇ! ನಾರಾಯಣನು ಕಾರ್ಮಿಕರ ಮುಖಂಡ; ಯುವಜನ ಮುಖಂಡ!

ಒಂದು ತಿಂಗಳಾಯಿತು. ಈ ಬಿರುಸೆಲ್ಲಾ ಮುಗಿಯಿತು. ನಾರಾಯಣನು ದುಡ್ಡು ಸಂಪಾದನೆ ಮಾಡಬೇಕು. ತಾಯಿಯನ್ನು ಕಾಪಾಡಬೇಕು. ತಾನು ಸ್ವಲ್ಪವಾದರೂ ಸಂಪಾದಿಸಿ ಜೀವನ ಮಾಡಬೇಕು. ಇದಕ್ಕೇನು ದಾರಿ? ಅವನಿಗೆ ಒಂದು ಮಾರ್ಗವೂ ತೋರಲಿಲ್ಲ. ಹಗಲಿರುಳೂ ಇದೇ ಚಿಂತೆ!

ಗಂಗಾಧರರಾಯನಿಗೇನು ಗೊತ್ತು? ಅವನು ಮದುವೆಗೆ ಸಿದ್ಧಮಾಡಿದನು. ನಾರಾಯಣನೊಡನೆ ಒಂದು ದಿನ ಪ್ರಸ್ತಾಪ ಮಾಡಿದನು.

"ನಾಣೀ, ತಾರಾ ಮದುವೆ ಮಾಡಿ ಬಿಡೋಣವೆಂದು ಯೋಚಿಸಿದ್ದೇನೆ. ನೀನು ಒಪ್ಪಿರುವೆಯಷ್ಟೆ!"

" ರಾಯರೇ, ನೀವು ನನಗೆ ತಂದೆಯ ಸಮಾನರು ! ನಿಮ್ಮಲ್ಲಿ ಮುಚ್ಚು ಮರೆಯೇನೂ ಇಲ್ಲ. ಆದರೆ ನನ್ನ ವಿಚಾರವನ್ನು ನೀವು ಆಲೋಚನೆ ಮಾಡಿಯೇ ಇಲ್ಲ. ಶ್ಯಾಮಲೆಯ ಮದುವೆಯಾಗಬೇಕೆಂಬ ಅಡ್ಡಿಯಿತ್ತು. ಅದು ತಾನಾಗಿಯೇ ಆಗಿಹೋಯಿತು. ನನಗೆ ಸಮಾಧಾನವಿರಲಿ ಇಲ್ಲದಿರಲಿ ಶ್ಯಾಮಲೆಯು ಸುಖವಾಗಿದ್ದಾಳೆ. ನಾನು ಸಂಪಾದನೆ ಮಾಡಿ ನನ್ನ ತಾಯಿಯನ್ನು ಹೆಂಡತಿಯನ್ನು ಕಾಪಾಡುವಂತಿರಬೇಕು. ಈಗ ನನಗೆ ಒಂದು ರೂಪಾಯಿ ಕೂಡಾ ಸಂಪಾದನೆ ಇಲ್ಲ. ಇನ್ನು ನನಗೆ ಮದುವೆಯಾದರೆ ಹೇಗೆ ? " ಎಂದನು. ಗಂಗಾಧರರಾಯನು ಮುಂದೆ ಮಾತನಾಡಲಿಲ್ಲ.

ಆ ದಿನ ಮಧ್ಯಾಹ್ನ ಶ್ಯಾಮಲೆಯು ಕಮಲಮ್ಮನವರನ್ನು ಕಂಡಾಗ ಅವರು ನಾರಾಯಣನ ಹಠವಾದವನ್ನು ವಿವರಿಸಿದರು. " ಈ ತಾರಾ ! ಬೇರೆ ಯಾರನ್ನೂ ಒಪ್ಪುವುದಿಲ್ಲ " ಎಂದರು.

ಶ್ಯಾಮಲೆಯು " ತಾರಾ ನಮ್ಮ ಅಣ್ಣನಿಗೇ ಮದುವೆಯಾಗಬೇಕು. ನನಗೆ ಮೊದಲಿನಿಂದಲೂ ಅದೇ ಆಶೆ ! ನಾನು ಎಲ್ಲವನ್ನೂ ಸರಿಪಡಿಸುತ್ತೇನೆ " ಎಂದಳು.

ಮಾರನೆಯ ದಿನ ಪ್ರಾತಃಕಾಲ ಶ್ಯಾಮಲೆಯು ನಾಣಿಯನ್ನು ಕರೆತರುವಂತೆ ಹೇಳಿ ಕಳುಹಿಸಿದಳು. ನಾಣಿಯು ತಕ್ಷಣ ಶ್ಯಾಮಲೆಯ ಮನೆಗೆ ಬಂದನು ರಂಗರಾಯನು ಕಾಫಿ ಕುಡಿಯುತ್ತಾ ಹಜಾರದಲ್ಲಿ ಕುಳಿತಿದ್ದನು. ನಾಣಿಗೂ ಕಾಫಿ ಬಂತು.

ರಂಗರಾಯನು " ಏನು ನಾರಾಯಣರಾವ್ ! ನಿಮಗೆ ಮದುವೆಯಂತೆ ! ನಮಗೆ ಹೇಳದೆಯೇ ನಡಸುತ್ತಿದ್ದೀರಿ ? " ಎಂದ.

" ಇಲ್ಲ ! ರಾಯರೇ ಸದ್ಯಕ್ಕೆ ಮದುವೆಯ ಪ್ರಸ್ತಾಪವೇನೂ ಇಲ್ಲ ! "

ಶ್ಯಾಮಲೆಯು " ಅದೇನೋ ನಾಣಿ, ಹುಡುಗಿಯನ್ನು ಒಪ್ಪಿಕೊಂಡಿದ್ದಿ. ಮದುವೆಗೆ ಒಪ್ಪಿಲ್ಲ. ಇದೇನು ಊರಿಗೆಲ್ಲಾ ನ್ಯಾಯ ಹೇಳುವ ನೀನು ನ್ಯಾಯವಾಗಿರಬೇಡವೇ ? "ಎಂದಳು.

" ಇದೇನು ಶ್ಯಾಮಲಾ ! ನಿನಗೆ ಸಂಸಾರದ ಸುಖದುಃಖಗಳು ಗೊತ್ತಿಲ್ಲವೇ ? "

"ಒಳ್ಳೆಯ ಕಥೆ. ಹುಚ್ಚು ಬಿಟ್ಟಲ್ಲದೇ ಮದುವೆಯಾಗುವ ಹಾಗಿಲ್ಲ. ಮದುವೆಯಾಗದೇ ಹುಚ್ಚು ಬಿಡುವ ಹಾಗಿಲ್ಲ. ಅಂಥವನು ಆ ಹುಡುಗಿಯನ್ನು ಜೊತೆಯಲ್ಲಿ ಕಟ್ಟಿಕೊಂಡು ಎಲ್ಲೆಲ್ಲೂ ಅಲೆಯುವುದೇಕೆ? ನಿಮ್ಮ ಭಾವನವರೇ ಹೇಳಲಿ!"

ರಂಗರಾಯನು "ಅದೆಲ್ಲಾ ಹೇಗಾದರೂ ಇರಲಿ. ನಾರಾಯಣರಾವ್! ನೀವು ಮದುವೆ ಮಾಡಿಕೊಳ್ಳಲೇ ಬೇಕು. ನೀವು ಸಂಪಾದನೆಯಾಗದೇ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಹಠ ಮಾಡುತ್ತಿದ್ದೀರಂತೆ! ಇಂದು ನಿಮಗೆ ಸಂಬಳವಿಲ್ಲದಿದ್ದರೇನು? ನಾಳೆ ಸ್ವರಾಜ್ಯ ಬಂದರೆ ನೀವೇ ಮಂತ್ರಿಗಳಾಗಬಹುದು. ಈಗ ನಿಮ್ಮ ಕಾಂಗ್ರೆಸ್ಸಿನವರಿಗೆ ಯಾರಿಗೆ ಸಂಪಾದನೆ ಇದೆ. ಪಂಡಿತ ಜವಹರಲಾಲರವರು ಮದುವೆಯಾದಾಗ ಎಲ್ಲಿಯಾದರೂ ಸಂಬಳಕ್ಕಿದ್ದರೇನು? ಮಹಾತ್ಮಾ ಗಾಂಧಿಯವರಿಗೂ ಮದುವೆ ಆಗಿದೆ. ಅವರಿಗೆ ಸಂಬಳ ಕೊಡುವವರಾರು?"

"ಅವರಿಗೆ ಬೇಕೆಂದಾಗ ದುಡ್ಡು ಕೊಡುವವರು ಎಷ್ಟೋ ಮಂದಿ ಇದ್ದಾರೆ."

"ನಿಮಗೂ ಹಾಗೆಯೇ! ನಾವೆಲ್ಲಾ ಇಲ್ಲವೇನು ಇದೇನರಿ ನಿಮ್ಮ ನ್ಯಾಯ! ನಿಮ್ಮ ತಾಯಿಯವರು ನಿಮಗೆ ಮದುವೆಯಾದೀತೆ? ಎಂದಿದ್ದಾರೆ. ನಿಮ್ಮ ತಂಗಿ ಈವತ್ತು ಆ ತಾರಾದೇವಿಯನ್ನು ಮನೆಗೆ ಕರೆತಂದು ಅಧಿಕಾರ ನಡಸಬೇಕೆನ್ನುತ್ತಾಳೆ. ನೀವು ಒಪ್ಪಲೇಬೇಕು. ನಿಮಗೆ ಏನಾದರೂ ಸಂಪಾದನೆ ಬೇಕಾದರೆ ನಾನು ಈವತ್ತೇ ಬೇರೊಂದು ಅಂಗಡಿ ಮಾಡಿ ಕೊಡುತ್ತೇನೆ. ಈ ಕಾಲದಲ್ಲಿ ಹೇಗೆ ಸಂಪಾದನೆಯಾಗುತ್ತೋ ನೋಡಿ! ಅಥವಾ ನಮ್ಮ ಜೊತೆಯಲ್ಲೇ ಬಿಸಿನೆಸ್ ಮಾಡಿ. ಒಂದು ಇಲಾಖೆಯನ್ನೆ ನಿಮಗೆ ಬಿಟ್ಟು ಕೊಡುತ್ತೇನೆ. ನೀವೇನೋ ವಿದ್ಯಾವಂತರು. ತುಂಬಾ ಲೋಕಾನುಭವ ಇದೆ. ಈ ವಯಸ್ಸಿನಲ್ಲಿ ಯಾವುದಾದರೂ ಉದ್ಯೋಗಕ್ಕೆ ಹತ್ತದಿದ್ದರೆ, ಆಮೇಲೆ ಆಗುವುದೇ ಇಲ್ಲ. ನಿಮ್ಮ ರಾಜಕೀಯ ಏನಾದರೂ ಮಾಡಿಕೊಳ್ಳಿ. ಮದುವೆಯ ವಿಷಯ ನಾವು ಹೇಳಿದಂತೆಯೇ ಆಗಬೇಕು."

"ನಾನು ಸ್ವತಂತ್ರವಾಗಿ ಸಂಪಾದನೆ ಮಾಡಬೇಕು."

ರಂಗರಾಯನು "ರಾಜಕೀಯ ಸ್ವಾತಂತ್ರ್ಯದಂತಲ್ಲ, ದುಡ್ಡು ಸಂಪಾದನೆ ಮಾಡುವ ಸ್ವಾತಂತ್ರ್ಯ. ಅದು ಯಾರ ಸಹಾಯದಿಂದಲಾದರೂ ಆಗಬೇಕು. ನಿಮಗೆ ನಮ್ಮೊಡನೆ ವ್ಯಾಪಾರ ಮಾಡುವ ಇಷ್ಟವಿಲ್ಲದಿದ್ದರೆ ಬ್ಯಾಂಕಿನಲ್ಲಿ ಸಾಲ ಕೊಡಿಸುತ್ತೇನೆ. ನೀವು ಸ್ವತಂತ್ರವಾಗಿ ಸಂಪಾದನೆ ಮಾಡಿ. ಅಂತೂ ಹೇಗಾದರೂ ಷುರು ಮಾಡಲೇಬೇಕು. ಆಗಲೇ ಸಂಪಾದನೆಯಾಗುವುದು. ಅದಕ್ಕೆ ಸ್ವತಂತ್ರ ಸಂಪಾದನೆಯೆಂದು ಹೆಸರು."

"ಬ್ಯಾಂಕಿನವರು ಸುಮ್ಮನೆ ಸಾಲ ಕೊಡುತ್ತಾರೆಯೇ ಬಡ್ಡಿ ಕೊಡಬೇಡವೇ?"

"ಹೌದು! ಕೊಡಲೇಬೇಕು. ಈ ಕಾಲದಲ್ಲಿ ವ್ಯಾಪಾರದಲ್ಲಿ ಒಂದಕ್ಕೆ ಹತ್ತರಷ್ಟು ಲಾಭ ಬರುತ್ತೆ. ಬಡ್ಡಿ ಕೊಡುವುದೇನು ಕಷ್ಟ? ಬ್ಯಾಂಕಿನ ಸಹಾಯವಿಲ್ಲದೇ ವ್ಯಾಪಾರ ಮಾಡುವವರು ಯಾರೂ ಇಲ್ಲ."

"ನೀವು ಹೇಳಿದರೆ ಬ್ಯಾಂಕಿನವರು ಇವತ್ತು ಸಾಲ ಕೊಡುತ್ತಾರೆ. ನಾಳೆ ನೀವು ಬೇಡವೆಂದರೆ ಒಂದು ಕಾಸನ್ನೂ ಕೊಡುವುದಿಲ್ಲ. ಅಲ್ಲಿಗೆ ಮುಗಿಯಿತು ನಮ್ಮ ವ್ಯಾಪಾರ!"

ರಂಗರಾಯನು ನಕ್ಕನು. "ನಾರಾಯಣರಾವ್, ನೀವು ಇಷ್ಟು ವಿದ್ಯಾವಂತರು, ಬ್ಯಾಂಕಿನ ಸ್ವರೂಪವನ್ನೇ ಅರಿಯದವರಂತೆ ಮಾತನಾಡುತ್ತೀರಿ. ನೀವು ಪ್ರಾಮಾಣಿಕತೆಯಿಂದ ನಡೆದುಕೊಂಡರೆ—ನಾನಲ್ಲ—ದಿವಾನರೇ ಬಂದು ಹೇಳಿದರೂ ಬ್ಯಾಂಕಿನವರನ್ನು ಹಣ ಕೊಡದೆ ಇರುವಂತೆ ಮಾಡುವುದಕ್ಕಾಗುವುದಿಲ್ಲ. ಪ್ರಪಂಚದ ರೀತಿಯೇ ಹಾಗೆ. ಬ್ಯಾಂಕಿನಲ್ಲಿ ಕಾಲಕ್ಕೆ ಸರಿಯಾಗಿ ಪಾವತೀ ಮಾಡುತ್ತಿದ್ದರೆ, ಅಂಥಾ ಗಿರಾಕಿಗಳಿಗೆ ಯಾವ ಭಯವೂ ಇಲ್ಲ."

"ಹಾಗಾದರೆ ಸಾಲ ಮಾಡಿ ಬಿಸಿನೆಸ್ ಮಾಡಬೇಕು."

"ಸಾಲ ಮಾಡಿ ಬಿಸಿನೆಸ್ ಮಾಡಬೇಕು. ಅಥವಾ ಪೂರ್ವೀಕರು ಸಂಪಾದನೆ ಮಾಡಿಟ್ಟ ಹಣ ಹಾಕಿ ಬಿಸಿನೆಸ್ ಮಾಡಬೇಕು. ಅಂಥಾ ಬಂಡವಾಳವಿದ್ದರೂ ಬ್ಯಾಂಕಿನ ಸಹಾಯವಿಲ್ಲದೇ ಬಿಸಿನೆಸ್ ಇಲ್ಲವೇ ಇಲ್ಲ!"

" ರಂಗರಾಯರೇ ! ಇಷ್ಟು ಬುದ್ಧಿಯಿಲ್ಲದೇ ಊರಿನಲ್ಲೆಲ್ಲಾ ದೊಡ್ಡ ವ್ಯಾಪಾರಿಗಳೆನಿಸಿಕೊಂಡಿದ್ದೀರಾ ನೀವು ? ನಿಮ್ಮ ಜೊತೆಯಲ್ಲಿ ನನಗೆ ವ್ಯಾಪಾರದ ವಿಷಯದಲ್ಲಿ ಚರ್ಚೆ ಮಾಡುವ ಯೋಗ್ಯತೆ ಇಲ್ಲ " ಎಂದ ನಾಣಿ.

ಶ್ಯಾಮಲೆಯು ನಾಣಿಯನ್ನು ಮದುವೆಗೆ ಒಪ್ಪಿಸಿದಳು. ಕಮಲಮ್ಮನವರ ಮನೆಗೆ ಹೋಗಿ " ನಾಣಿಯನ್ನು ಮದುವೆಗೆ ಒಪ್ಪಿಸಿದ್ದೇನೆ " ಎಂದು ಡಂಗೂರ ಹಾಕಿದಳು. ತಾರೆಯನ್ನು " ಏನು ಅತ್ತಿಗಮ್ಮನೋರೆ ! " ಎಂದು ಹಾಸ್ಯ ಮಾಡಿದಳು.

ಗಂಗಾಧರರಾಯನು ಮದುವೆಯ ಏರ್ಪಾಡುಗಳನ್ನೆಲ್ಲಾ ಮಾಡಿದನು. ಅವನು ರಂಗರಾಯನ ಮನೆಗೆ ಬಂದು " ನೀವೇ ಗಂಡಿನ ಕಡೆಯ ಯಜಮಾನರು. ನಿಮ್ಮ ಹೆಸರಿನಲ್ಲೇ ಲಗ್ನಪತ್ರಿಕೆಯಾಗಬೇಕು. ನೀವೇ ನಿಂತು ಈ ಮದುವೆ ನಡಸಿ ನನ್ನ ಗೌರವ ಕಾಪಾಡಬೇಕು " ಎಂದು ಕೇಳಿಕೊಂಡನು.

ರಂಗರಾಯನಿಗೆ ಪರಮ ಸಂತೋಷವಾಯಿತು. ಗಂಗಾಧರರಾಯನು ಬಲು ದುರಹಂಕಾರದ ಮನುಷ್ಯ. ಯಾರನ್ನೂ ಲಕ್ಷ್ಯ ಮಾಡುವವನಲ್ಲ. ಲಾಯರು ಪ್ರ್ಯಾಕ್ಟೀಸು ಬಿಡುವ ವರೆಗೆ ಅವನು ರಂಗರಾಯರ ಲಾಯರ್ ! ಒಂದೊಂದು ವೇಳೆ ಕೋರ್ಟಿನಲ್ಲಿಯೇ ರಂಗರಾಯನನ್ನು ಬೈದುಬಿಡುತ್ತಿದ್ದ. ಜಡ್ಜಿಗಳೆಲ್ಲರೂ ಗಂಗಾಧರರಾಯನಿಗೆ ಹೆದರುತ್ತಿದ್ದರು. ಅಂಥಾ ಜಬರದಸ್ತಿನ ಮನುಷ್ಯ ಇಂದು ಅದೇ ರಂಗರಾಯನನ್ನು ಬಲು ಗೌರವದಿಂದ ಕಂಡು ಬೇಡಿಕೊಳ್ಳುವುದು ರಂಗರಾಯನಿಗೆ ಬಲು ಹೆಮ್ಮೆಯಾಗಿತ್ತು.

ರಂಗರಾಯನು " ರಾಯರೇ ನೀವು ನಾರಾಯಣನ ತಂದೆಯವರ ಸ್ನೇಹಿತರು. ಎರಡು ಕಡೆಗೂ ನೀವೇ ಯಜಮಾನರು. ನಮಗೂ ನೀವೇ ದೊಡ್ಡವರು. ನಾವು ನೀವು ಹೇಳಿದ ಹಾಗೆ ನಡೆದುಕೊಳ್ಳುತ್ತೇವೆ. ನೀವು ನಮಗೆ ಯಾವ ಕೆಲಸವನ್ನೊಪ್ಪಿಸಿದರೂ ಸೊಂಟ ಕಟ್ಟಿಕೊಂಡು ದುಡಿಯುವವರು ನಾವು " ಎಂದು ಹೇಳಿದನು. ಗಂಗಾಧರರಾಯನು ಸಂತೋಷದಿಂದ ಮನೆಗೆ ಹೊರಟು ಹೋದನು.

ಶ್ಯಾಮಲೆಯು ತಾಯಿಗೆ ಕಾಗದ ಬರೆಸಿ ಕರೆಸಿದಳು. ತಾಯಿಗೆ ಎಲ್ಲ ಸಮಾಚಾರವನ್ನು ತಿಳಿಸಿದಳು. ಕಮಲಮ್ಮನವರ ಮನೆಗೆ ತಾಯಿಯನ್ನು ಕರೆದುಕೊಂಡು ಹೋದಳು. ಕಮಲಮ್ಮನವರು ಮದುವೆಯ ಪ್ರಸ್ತಾಪವನ್ನೆಲ್ಲಾ ಹೇಳಿದರು. ಪಾರ್ವತಮ್ಮ ಗಂಭೀರವಾಗಿ "ನೀವೆಲ್ಲಾ ಹೇಗೆ ಹೇಳಿದರೆ ಹಾಗೆ ನಡೆಯತಕ್ಕವರು ನಾವು" ಎಂದು ಹೇಳಿದಳು. ಗಂಗಾಧರರಾಯನು ಬಂದು, "ನಮ್ಮ ಮನೆಯ ಸಂಬಂಧವನ್ನು ನಿಮ್ಮ ಯಜಮಾನರೇ ಗೊತ್ತುಮಾಡಿದವರು. ನಿಮ್ಮ ಶ್ಯಾಮಲಮ್ಮನನ್ನ ನಮ್ಮ ಮನೆಗೆ ಕೊಡಬೇಕೆಂದು ಸಂಕಲ್ಪಿಸಿದ್ದರು. ನಾವು ನಿಮ್ಮ ಮನೆಗೆ ಹೆಣ್ಣು ಕೊಡುವಂತಾಯಿತು" ಎಂದು ಉಪಚಾರ ಹೇಳಿದರು.

ರಂಗರಾಯನು ಗಂಡಿನ ಕಡೆಯ ಯಜಮಾನ. ಅವನೂ ಗಂಗಾಧರರಾಯನೂ ಮದುವೆಯನ್ನು ಅತಿ ಸೌಹಾರ್ದದಿಂದ, ಬಲು ವಿಜೃಂಭಣೆಯಿಂದ ನಡಸಿದರು. ಮೈಸೂರು ಸೀಮೆಯ ಕಾಂಗ್ರೆಸ್ ಮುಖಂಡರೆಲ್ಲರೂ ಬಂದಿದ್ದರು. ಕಾಂಗ್ರೆಸ್ಸಿಗೆ ಸಾವಿರ ರೂಪಾಯಿಗಳ ಕಾಣಿಕೆಯನ್ನೂ ಒಪ್ಪಿಸಿದರು. ಸರ್. ತಂಬೂಚೆಟ್ಟಿರವರೂ, ದಿವಾನ್‌ರೂ, ಕೌನ್ಸಿಲರುಗಳೂ ರಂಗರಾಯನ ವಿಶೇಷ ಆಹ್ವಾನದಂತೆ ಬಂದಿದ್ದರು. ಸಂಗೀತರತ್ನ ಚೌಡಯ್ಯನವರ ಪಿಟೀಲು, ಚಂಪೆ ವೈದ್ಯನಾಥಭಾಗವತರಿಂದ ಸಂಗೀತ ನಡೆಯಿತು. ಎಲ್ಲರೂ ನಾರಾಯಣನನ್ನೂ ತಾರಾದೇವಿಯನ್ನೂ ಅಭಿನಂದಿಸಿ ಫಲತಾಂಬೂಲಗಳನ್ನು ಸ್ವೀಕರಿಸಿ ತೆರಳಿದರು. ನಾರಾಯಣನು ಈ ಅಧಿಕಾರಿಗಳೆಲ್ಲಾ ಎಷ್ಟು ದೊಡ್ಡ ಮನುಷ್ಯರು. ಕಾಂಗ್ರೆಸ್ಸಿನವರೆಂಬ ವಿರೋಧವಿಲ್ಲದೇ ಮದುವೆಗೆ ಬಂದಿದ್ದರಲ್ಲಾ ಎಂದು ಸಂತೋಷಪಟ್ಟುಕೊಂಡನು. ಮದುವೆಯಾದ ಮೇಲೆ ಹೆಣ್ಣನ್ನು ಶ್ಯಾಮಲೆಯ ಮನೆಗೆ ಒಪ್ಪಿಸಿಕೊಟ್ಟರು. ತಾಯಿ ಕೆಲವು ದಿನಗಳು ಶ್ಯಾಮಲೆಯ ಮನೆಯಲ್ಲಿಯೇ ಇದ್ದಳು.

ಕೆಲವು ದಿನಗಳಲ್ಲಿಯೇ ನಾರಾಯಣನು ಬೇರೆ ಮನೆಯನ್ನು ಮಾಡಿದನು. ತಾಯಿ ಮತ್ತು ಹೆಂಡತಿಯೊಡನೆ ಸಂಸಾರ ಮಾಡಲಾರಂಭಿಸಿದನು. ಪಾತ್ರೆ ಪದಾರ್ಥಗಳನ್ನು ಮಂಚ, ಕುರ್ಚಿಸಾಮಾನುಗಳನ್ನು ಗಂಗಾಧರರಾಯನು ಬಳುವಳಿ ಕೊಟ್ಟಿದ್ದನು. ಮದುವೆಯಲ್ಲಿ ಉಡುಗರೆ ಬಂದ ಬೆಳ್ಳಿಯ ಸಾಮಾ

ನುಗಳು ಮನೆಯ ತುಂಬಾ ಇದ್ದುವು. ನಾರಾಯಣನ ಹೊಸ ಸಂಸಾರವು ಮೋಲ್ಮಟ್ಟದಲ್ಲಿಯೇ ಆರಂಭವಾಯಿತು.

ಅವನು ವ್ಯಾಪಾರ ಮಾಡಬೇಕು. ಯಾವ ವ್ಯಾಪಾರ ಮಾಡಬೇಕು, ಎಂಬುದನ್ನು ಯೋಚಿಸಿದನು. ಯಾವ ವ್ಯಾಪಾರ ಮಾಡಬೇಕಾದರೂ ಸರ್ಕಾರದ ಅಧಿಕಾರಿಗಳ ದಯೆ ಬೇಕು. ಲೈಸನ್ಸುಗಳ ದಯೆ ಬೇಕು. ಬ್ಲಾಕ್ ಮಾರ್ಕೆಟ್ಟಿಲ್ಲದ ವ್ಯಾಪಾರವೇ ಇಲ್ಲ. ಇದನ್ನೆಲ್ಲಾ ಯೋಚನೆ ಮಾಡಿದನು. ಯಾವುದಾದರೂ ಕೈಗಾರಿಕೆ ಮಾಡಬೇಕೆಂದು ತೋರಿತು. ಯಾವ ಕೈಗಾರಿಕೆ ಒಳ್ಳೆಯದು. ಮನೆ ಬಾಡಿಗೆ ಇತರ ಖರ್ಚುಗಳು ಮುಂತಾದುವುಗಳಿಗೆಲ್ಲಾ ತಿಂಗಳಿಗೆ ಇನ್ನೂರು ರೂಪಾಯಿಗಳು ಬಂದರೆ ಸಾಕು. ಇದನ್ನೆಲ್ಲಾ ಯೋಚನೆ ಮಾಡಿದನು. ಬೆಂಗಳೂರಿಗೆ ಹೋಗಿ ಒಬ್ಬಿಬ್ಬರು ಸ್ನೇಹಿತರನ್ನು ಸಲಹೆ ಕೇಳಿದನು. ಬೆಳ್ಳಿಯ ಗಿಲೀಟು ಮಾಡುವ ವ್ಯಾಪಾರವು ಸುಲಭವೆಂದೂ ಅದಕ್ಕೆ ಹತ್ತು ಸಾವಿರ ರೂಪಾಯಿಗಳ ಬಂಡವಾಳವು ಬೇಕೆಂದೂ ಗೊತ್ತಾಯಿತು.

ಮೈಸೂರಿಗೆ ಬಂದು ತನ್ನ ಭಾವ ರಂಗರಾಯನಿಗೆ ಇದನ್ನೆಲ್ಲಾ ತಿಳಿಸಿದನು.

ರಂಗರಾಯನು "ಅವರಲ್ಲೆಲ್ಲಾ ಹೆಚ್ಚು ಲಾಭ ಬರುವುದಿಲ್ಲ. ತಿಂಗಳಿಗೆ ಇನ್ನೂರು ಮುನ್ನೂರು ರೂಪಾಯಿಗಳ ಲಾಭ ಬಂದರೆ ಅದೇ ಹೆಚ್ಚು. ಒಳ್ಳೆಯ ವ್ಯಾಪಾರಕ್ಕೆ ಬೇಕಾದಷ್ಟು ಆಸ್ಪದವಿದೆ. ಸಾವಿರಾರು ರೂಪಾಯಿಗಳ ಲಾಭ ಸಂಪಾದಿಸಬಹುದು. ನಿನ್ನ ಇಷ್ಟ! ನಾನು ವಾಗ್ದಾನ ಮಾಡಿದ್ದೇನೆ. ಅದಕ್ಕೆ ತಪ್ಪುವುದಿಲ್ಲ" ಎಂದು ಹೇಳಿ ಆ ದಿನವೇ ಹತ್ತು ಸಾವಿರ ರೂಪಾಯಿಗೆ ಒಂದು ಚೆಕ್ ಬರೆದು ಕೊಟ್ಟನು.

ನಾರಾಯಣನು "ರಾಯರೇ! ನೀವು ಸಾಲ ಕೊಡಿಸುತ್ತೇನೆಂದು ಹೇಳಿದ್ದೀರಿ ಈಗ ನೀವೇ ಹಣವನ್ನು ಕೊಟ್ಟಿದ್ದೀರಲ್ಲಾ? ಇದೇನು" ಎಂದು ಕೇಳಿದನು.

"ಇದನ್ನು ಸಾಲವೆಂದೇ ತಿಳಿದುಕೋ. ನೀನು ಹೋಗಿ ಸಾಮಾನುಗಳನ್ನು ಕೊಂಡು ಕೊಂಡು ಬಾ! ಕೆಲಸ ಆರಂಭಿಸು. ಆಮೇಲೆ ನೋಡಿಕೊಳ್ಳೋಣ" ಎಂದನು.

ನಾರಾಯಣನು ಮದರಾಸಿಗೆ ಹೋಗಿ ಆ ಕೆಲಸಕ್ಕೆ ಬೇಕಾದ ಸಾಮಾನುಗಳನ್ನೆಲ್ಲಾ ಕೊಂಡುಕೊಂಡು ಬಂದನು. ಮದರಾಸಿನಿಂದಲೇ ಇಬ್ಬರು ಕೆಲಸಗಾರರನ್ನೂ ಕರೆತಂದನು. ಸಯ್ಯಾಜೀರಾವ್ ರಸ್ತೆಯಲ್ಲಿ ಒಂದು ಸ್ಥಳವನ್ನು ಬಾಡಿಗೆಗೆ ತೆಗೆದುಕೊಂಡು ಆ ಯಂತ್ರಗಳನ್ನೆಲ್ಲಾ ಇಡಿಸಿದನು. ರಂಗರಾಯನ ಪ್ರಭಾವದಿಂದ ಒಂದೇ ದಿನದಲ್ಲಿ ಪವರ್ ಬಂದಿತು. ಹತ್ತಾರು ಸ್ನೇಹಿತರನ್ನು ಕರೆದು, "ಗಾಂಧಿ ಮೆಟಲ್ ವರ್ಕ್ಸ್" ಎಂದು ಹೆಸರಿಟ್ಟು ಸಣ್ಣ ಕಾರ್ಖಾನೆಯೊಂದನ್ನು ಆರಂಭಮಾಡಿಯೇ ಬಿಟ್ಟನು.

ಅಂದವಾದ ಕಪ್, ಸಾಸರುಗಳೂ, ಲೋಟಗಳೂ, ಫಲಹಾರದ ಪ್ಲೇಟುಗಳೂ ತಯಾರಾದುವು. ಆ ಸಾಮಾನುಗಳನ್ನು ನೋಡಿ ಊರಿನವರೆಲ್ಲರೂ ಮೋಹಗೊಂಡರು. ಜನ ಬಂದು ಕೊಂಡುಕೊಳ್ಳಲಾರಂಭಿಸಿದರು. ಒಂದೇ ಒಂದು ತಿಂಗಳಲ್ಲಿ ಖರ್ಚು ಕಳೆದು ಆರು ನೂರು ರೂಪಾಯಿಗಳ ಲಾಭ ಬಂತು. ಕೆಲಸಗಾರರಿಗೆ ತುಂಬಾ ಸಂಬಳ ಸಿಕ್ಕಿತು. ನಾರಾಯಣನು ಲೆಖ್ಖಗಳನ್ನೆಲ್ಲಾ ಬಹಳ ಅಚ್ಚುಕಟ್ಟಾಗಿಟ್ಟಿದ್ದನು. ರಂಗರಾಯನಿಗೆ ಇದನ್ನೆಲ್ಲಾ ನೋಡಿ ಆಶ್ಚರ್ಯವಾಯಿತು. ನಾರಾಯಣನನ್ನು ಶ್ಲಾಘಿಸಿದನು. ನಾರಾಯಣನು ಆ ತಿಂಗಳು ಕಳೆಯುತ್ತಲೇ ಇನ್ನೂರೈವತ್ತು ರೂಪಾಯಿಗಳನ್ನು ತಂದು ರಂಗರಾಯನಿಗೆ ಕೊಟ್ಟನು. ರಂಗರಾಯನು ನಾರಾಯಣನನ್ನು ಮೈಸೂರು ಬ್ಯಾಂಕಿಗೆ ಕರೆದುಕೊಂಡು ಹೋಗಿ, ಆ ಹಣವನ್ನು ಕೊಟ್ಟು ನಾರಾಯಣನ ಹೆಸರಿನಲ್ಲಿ ಲೆಖ್ಖವನ್ನು ಆರಂಭಿಸಿದನು. ನಾರಾಯಣನು ಆ ಕೆಲಸದಲ್ಲಿಯೇ ನಿರತನಾಗಿದ್ದನು. ಆದರೂ ಪ್ರತಿ ದಿನವೂ ಕಾಂಗ್ರೆಸ್ ಕಛೇರಿಗೆ ಹೋಗಿ ಬರುತ್ತಿದ್ದನು. ಕಾಂಗ್ರೆಸ್ಸಿನ ಕೆಲಸಗಳೇನೂ ಇರಲಿಲ್ಲ. ತಾರಾ ತಂದೆಯ ಮನೆಗೂ ಶ್ಯಾಮಲೆಯ ಮನೆಗೂ ಆಗಾಗ ಹೋಗಿ ಬರುತ್ತಿದ್ದಳು. ಶ್ಯಾಮಲೆಯು ಅಣ್ಣನ ಮನೆಗೆ ಬಂದು ತಾಯಿಯನ್ನೂ ತಾರೆಯನ್ನೂ ನೋಡಿಕೊಂಡು ಮಾತನಾಡಿಕೊಂಡು ಹೋಗುತ್ತಿದ್ದಳು. ಶ್ಯಾಮಲೆಯು ತನ್ನ ಭಾಗ್ಯದ ಸಂಸಾರಕ್ಕಿಂತಲೂ ಈ ಸಂಸಾರವೇ ಚೆನ್ನಾಗಿದೆ ಎಂದುಕೊಳ್ಳುತ್ತಿದ್ದಳು.

೧೪

ಮೈಸೂರು ನಗರದ ಪೌರ ಸಭೆಯ ಚುನಾವಣೆಗಳು ಬಂದುವು. ರಂಗರಾಯನ ಸ್ನೇಹಿತರೆಲ್ಲರೂ ರಾಯರನ್ನು ಚುನಾವಣೆಗೆ ನಿಲ್ಲಿಸಬೇಕು ಎಂದು ಹೇಳತೊಡಗಿದರು. ರಂಗರಾಯನಿಗೂ ಉತ್ಸಾಹವಿತ್ತು. ನಾಲ್ಕು ಜನರ ಪ್ರೋತ್ಸಾಹವೂ ದೊರೆಯಿತು. ಚುನಾವಣೆಗೆ ನಿಂತೇ ಬಿಟ್ಟನು. ನಗರದಲ್ಲೆಲ್ಲಾ "ರಂಗರಾಯನು ಚುನಾವಣೆಗೆ ನಿಂತಿದ್ದಾನೆ. ಅವನಿಗೆ ಯಾರೂ ಎದುರು ನಿಲ್ಲಲು ಸಾಧ್ಯವಿಲ್ಲ" ಎಂದು ಮಾತನಾಡಿಕೊಳ್ಳಲಾರಂಭಿಸಿದರು. ಡಾಕ್ಟರ್ ಸುಬ್ಬರಾಯರು ಸಹಾ ಬೇರೊಂದು ಮೊಹಲ್ಲಾದಲ್ಲಿ ನಿಂತುಕೊಂಡರು.

ಕಾಂಗ್ರೆಸ್ ವರ್ತುಲಗಳಲ್ಲಿ ಚರ್ಚೆಗೆ ಆರಂಭವಾಯಿತು. ತಮ್ಮ ಪಕ್ಷದ ಪ್ರತಿನಿಧಿಯನ್ನು ಚುನಾವಣೆಗೆ ನಿಲ್ಲಿಸಬೇಕೇ ಬೇಡವೇ? ನಿಲ್ಲಿಸಬೇಕೆಂದೇ ತೀರ್ಮಾನವಾಯಿತು. ಕೊನೆಗೆ ಕಾಂಗ್ರೆಸ್ಸಿನವರು ಚುನಾವಣೆಗೆ ತಮ್ಮ ಉಮೇದುವಾರರನ್ನು ನಿಲ್ಲಿಸುತ್ತಾರೆಂದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಎಲ್ಲ ಸ್ಥಾನಗಳಿಗೂ ಕಾಂಗ್ರೆಸ್ ಉಮೇದುವಾರರು ನಿಂತರು. ರಂಗರಾಯರಿಗೆ ಎದುರಾಗಿ ಯಾರನ್ನೂ ನಿಲ್ಲಿಸುವುದಿಲ್ಲವೆಂದು ಜನರು ಆಡಿಕೊಳ್ಳುತ್ತಿದ್ದರು. ಏಕೆಂದರೆ ಗಂಗಾಧರರಾಯರು ನೆಂಟ! ನಾರಾಯಣನ ಭಾವ! ನಗರದ ಎಲ್ಲ ಮೊಹಲ್ಲಗಳಲ್ಲಿಯೂ ಕಾಂಗ್ರೆಸ್ ಉಮೇದುವಾರರು ಅರ್ಜಿಗಳನ್ನು ಸಲ್ಲಿಸಿದರು. ಲಕ್ಷ್ಮೀಪುರದಲ್ಲಿ ಮಾತ್ರ ಯಾರೂ ಅರ್ಜಿಯನ್ನು ಸಲ್ಲಿಸಿರಲಿಲ್ಲ. ಅರ್ಜಿ ಸಲ್ಲಿಸುವ ಕಡೆಯ ದಿನವೂ ಬಂತು. ಆ ದಿನ ಗಂಗಾಧರರಾಯನು ಅರ್ಜಿಯನ್ನು ಸಲ್ಲಿಸಿದನು. ನಗರದಲ್ಲೆಲ್ಲಾ ಇದೇ ಮಾತು. ಒಳ್ಳೆಯ ಬಲವಾದ ಪೈಪೋಟಿ. ಹತ್ತಿಪ್ಪತ್ತು ಸಾವಿರ ರೂಪಾಯಿಗಳು ಖರ್ಚಾದರೂ ರಂಗರಾಯನು ಬಿಡುವವನಲ್ಲ ಎಂದು ಮಾತನಾಡಿಕೊಳ್ಳುತ್ತಿದ್ದರು. ರಂಗರಾಯನಿಗೆ ಈ ಸಮಾಚಾರ ತಿಳಿಯಿತು. ಮನಸ್ಸು ಅಳುಕಿತು. ಆದರೂ ಧೈರ್ಯ

ತಂದುಕೊಂಡು ಒಂದು ಕೈ ನೋಡುತ್ತೇನೆ ಎಂದುಕೊಂಡನು.

ಮಾರನೆಯ ದಿನ ಗಂಗಾಧರರಾಯನು ರಂಗರಾಯನ ಮನೆಗೆ ಹೋದನು. ರಂಗರಾಯನು ಬಾಗಿಲಿಗೆ ಬಂದು ಎದರುಗೊಂಡು ಒಳಗೆ ಕರೆದು ಕೊಂಡು ಹೋಗಿ ಸೋಫಾದ ಮೇಲೆ ಕುಳ್ಳಿರಿಸಿದನು. ಸಾಮಾನ್ಯವಾಗಿ ಒಂದೆರಡು ನಿಮಿಷಗಳ ಕಾಲ ಯೋಗಕ್ಷೇಮವಾಯಿತು. ಗಂಗಾಧರರಾಯನೇ ಮೊದಲು ಮಾಡಿದನು. " ರಂಗರಾಯರೇ ! ನೀವು ಚುನಾವಣೆಗೆ ನಿಂತಿದ್ದೀರಿ ಕಾಂಗ್ರೆಸ್ಸಿನವರು ಬಲಾತ್ಕಾರವಾಗಿ ನನ್ನನ್ನೂ ನಿಲ್ಲಿಸಿ ಬಿಟ್ಟಿದ್ದಾರೆ. ಇದು ನಮ್ಮ ನಮ್ಮಲ್ಲಿ ಚೆನ್ನಾಗಿ ಕಾಣುವುದಿಲ್ಲ. ನೀವೇ ಕಾಂಗ್ರೆಸ್ಸಿಗೆ ಸೇರಿ ಬಿಡಿ!" ಎಂದು ಹೇಳಿದನು.

ರಂಗರಾಯನು " ತಾವು ದೊಡ್ಡವರು ನಮ್ಮಂಥಾ ಚಿರಂಜೀವಿಗಳ ಮೇಲೆ ಚುನಾವಣೆಗೆ ನಿಲ್ಲಬಹುದೇ ? ನನಗೆ ಅರಮನೆ ಕಂಟ್ರಾಕ್ಟು ಇದೆ; ಇನ್ನೂ ಎಷ್ಟೋ ತಾಪತ್ರಯಗಳಿವೆ. ನಾನು ಕಾಂಗ್ರೆಸ್ಸಿಗೆ ಸೇರುವುದು ಸಾಧ್ಯವೇ ಇಲ್ಲ ಕಾಂಗ್ರೆಸ್ಸಿಗೆ ಹತ್ತು ಸಾವಿರ ಕಾಣಿಕೆ ಕೊಟ್ಟು ಬಿಡುತ್ತೇನೆ. ಆದರೆ ಅದು ಗುಪ್ತಕಾಣಿಕೆ. ತಾವೇ ದೊಡ್ಡ ಮನಸ್ಸು ಮಾಡಿ ತಮ್ಮ ಉಮೇದುವಾರಿಕೆ ಯನ್ನು ವಾಪಸು ತೆಗೆದುಕೊಳ್ಳಬೇಕು " ಎಂದನು. ಎಷ್ಟೋ ಮಾತುಕತೆಗಳಾ ದುವು ; ಆದರೂ ಪ್ರಯೋಜನವಾಗಲಿಲ್ಲ. ಗಂಗಾಧರರಾಯನು ನಿರಾಶೆ ಗೊಂಡು ಹೊರಟು ಬಂದನು.

ಕಾಂಗ್ರೆಸಿನವರು ಪ್ರಚಾರ ಕಾರ್ಯಗಳಿಗೆ ಆರಂಭಿಸಿದರು. ನಾರಾಯ ಣರಾವ್ ಪ್ರಚಾರ ಸಮಿತಿಯ ಅಧ್ಯಕ್ಷ. ಪ್ರಚಾರ ಕಾರ್ಯಗಳಿಗೆ ಆರಂಭವಾ ಯಿತು. ವಾಲ್ ಪೋಸ್ಟರುಗಳನ್ನೂ ಹಚ್ಚಿದರು. ಹಸ್ತಪತ್ರಿಕೆಗಳು ಹೊರ ಟುವು. ಭಾಷಣಗಳು, ಮೆರವಣಿಗೆಗಳು, ಘೋಷಣೆಗಳು ಎಲ್ಲವೂ ಭರದಿಂದ ಆರಂಭವಾದುವು.

ರಂಗರಾಯನ ಪ್ರಚಾರ ಕಾರ್ಯವು ಸಾಮಾನ್ಯವಾಗಿರಲಿಲ್ಲ. ರಂಗರಾ ಯನೂ ವಾಲ್ ಪೋಸ್ಟರುಗಳನ್ನೂ ಹಸ್ತ ಪತ್ರಿಕೆಗಳನ್ನೂ ಮಾಡಿಸಿದನು. ಹತ್ತಿಪ್ಪತ್ತು ಜನರನ್ನೂ ಪ್ರಚಾರ ಕಾರ್ಯಕ್ಕೆ ನೇಮಿಸಿದನು. ಗರಡಿಯವರಿಗೆ ಪ್ರೋತ್ಸಾಹವಿತ್ತು ತನ್ನ ಕಡೆಗೆ ಎಳೆದುಕೊಂಡನು. ಗರಡಿಯ ದೊಡ್ಡ

ದೊಡ್ಡ ವಸ್ತಾದರೆಲ್ಲರೂ ರಂಗರಾಯರಿಗೆ ವೋಟು ಕೊಡಬೇಕೆಂದು ಹೇಳುತ್ತಾ ಓಡಾಡ ತೊಡಗಿದರು.

ಪ್ರತಿ ಸ್ಥಾನಕ್ಕೂ ಕಾಂಗ್ರೆಸ್ಸೇತರರು ನಿಂತಿದ್ದರು. ಡಾಕ್ಟರ್ ಸುಬ್ಬರಾವ್ ಇವರನ್ನೆಲ್ಲಾ ಸೇರಿಸಿ ಒಂದು ಅಂತರಂಗ ಸಭೆಯನ್ನು ನಡಸಬೇಕೆಂದು ಏರ್ಪಾಡು ಮಾಡಿದರು. ಆ ಸಭೆಗೆ ರಂಗರಾಯನೂ ಬರಲೇ ಬೇಕಾಯಿತು. ಅಲ್ಲಿ ಕೆಲವು ಪತ್ರಿಕೆಯವರೂ, ಕಾಂಗ್ರೆಸ್ ವಿರೋಧಿ ಭಾಷಣಕಾರರೂ ಲಾವಣಿಕಾರರೂ ಎಲ್ಲರೂ ಸೇರಿದ್ದರು. ಪ್ರತಿ ಕಕ್ಷಿಗಳೆಲ್ಲಾ ಒಗ್ಗಟ್ಟಿನಿಂದ ಕೆಲಸ ಮಾಡಬೇಕೆಂದು ಠರಾವಾಯಿತು. ಚಂದಾಪಟ್ಟಿಯೂ ಸಿದ್ಧವಾಯಿತು. ಪ್ರಚಾರ ಸಮಿತಿಯೂ ಏರ್ಪಾಡಾಯಿತು. ಪ್ರತಿ ಪಕ್ಷವೂ ಬಲವಾಗಿಯೇ ನಿಂತಿತು. ಒಂದು ಕಡೆ ಕಾಂಗ್ರೆಸ್ ಭಾಷಣಗಳಾದರೆ ಮತ್ತೊಂದು ಕಡೆ ಕಾಂಗ್ರೆಸ್ಸೇತರರ ಭಾಷಣಗಳು. ಡಾಕ್ಟರ್ ಒಳ್ಳೆಯ ಭಾಷಣಕಾರರಾದರು. ರಂಗರಾಯನೂ ಸಹಾ ಅಲ್ಲಲ್ಲಿ ಭಾಷಣಗಳನ್ನು ಮಾಡಿದನು. ರಂಗರಾಯನ ಸ್ಥಾನಕ್ಕೆ ಬಲು ದೊಡ್ಡ ಪೈಪೋಟಿ ನಡೆಯತೊಡಗಿತು.

ಚುನಾವಣೆಗೆ ಹಿಂದಿನ ರಾತ್ರಿ ವೋಟುದಾರರಿಗೆ ಕೈ ಬೆಚ್ಚಗೆ ಮಾಡಬೇಕೆಂದು ಏಜಂಟರುಗಳು ಹೇಳಿದರು. ರಂಗರಾಯನು ನೋಟುಗಳ ಕಟ್ಟನ್ನೇ ತೆಗೆದು ಜೇಬಿನಲ್ಲಿಟ್ಟುಕೊಂಡು ಹೊರಟನು. ಅನೇಕರು ದುಡ್ಡು ತೆಗೆದುಕೊಂಡರು. "ನಿಮಗೇ ವೋಟು! ಸತ್ಯಕ್ಕೆ ತಪ್ಪುವುದಿಲ್ಲ" ಎಂದರು. ಆಯಾ ಬೀದಿಯ ಮುಖಂಡರು "ರಂಗರಾಯರಿಗೇ ವೋಟು, ನಮ್ಮ ಬೀದಿಯಲ್ಲಿ ಮತ್ತಾರಿಗೆ ವೋಟು ಕೊಡುತ್ತಾರೆ?" ಎಂಬುದಾಗಿ ವೀರವಾಕ್ಯಗಳನ್ನು ನುಡಿದರು.

ಚುನಾವಣೆಯ ದಿನವೂ ಬಂತು. ವೋಟಿನ ಸಂಭ್ರಮ. ಕುದುರೆ ಗಾಡಿಗಳೂ, ಮೋಟಾರುಗಳೂ ವೋಟುದಾರರನ್ನು ತುಂಬಿಕೊಂಡು ಬಂದುವು. ಮಾರನೆಯ ದಿನವೇ ವೋಟಿನ ಎಣಿಕೆಯ ದಿನ! ಒಂದೊಂದು ಮೊಹಲ್ಲಾದಲ್ಲಿಯೂ ಕಾಂಗ್ರೆಸ್ಸಿಗೇ ಜಯವಾಯಿತು. ಲಕ್ಷ್ಮೀಪುರದ ಪೆಟ್ಟಿಗೆಗಳು ಎಣಿಕೆಗೆ ಬಂದುವು. ಕಾಂಗ್ರೆಸ್ಸೇತರರೆಲ್ಲರೂ "ರಂಗರಾಯನಿಗೇ ಜಯವು ಸಿದ್ಧ! ಒಂದು ಸಾವಿರ ವೋಟುಗಳಾದರೂ ಹೆಚ್ಚಾಗಿ ಬರುತ್ತವೆ" ಎಂದು ಬಹಿರಂಗ

ವಾಗಿಯೇ ಹೇಳುತ್ತಿದ್ದರು. "ಎಲ್ಲಾ ಸೀಟುಗಳೂ ಹೊರಟು ಹೋಗಲಿ, ಗಂಗಾಧರರಾಯರಿಗೆ ಸೋಲಾದರೆ ಕಾಂಗ್ರೆಸ್ಸಿಗೇ ಪೆಟ್ಟುಕೊಟ್ಟಂತಾಯಿತು" ಎಂದು ಹೇಳುತ್ತಿದ್ದರು. ಎಣಿಕೆಯಲ್ಲಿ ರಂಗರಾಯನು ಬಿದ್ದುಹೋದನು. ಗಂಗಾಧರರಾಯನಿಗೆ ಜಯವಾಯಿತು. ಇಪ್ಪತ್ತುನಾಲ್ಕು ಸ್ಥಾನಗಳೂ ಕಾಂಗ್ರೆಸ್ಸಿಗೇ ಬಂದುವು. ಈ ಕಾಂಗ್ರೆಸ್ಸಿನ ವಿಜಯವು ಇಂಡಿಯಾ ದೇಶದಲ್ಲೆಲ್ಲಾ ಪ್ರಖ್ಯಾತವಾಯಿತು. ಮಹಾತ್ಮಾ ಗಾಂಧಿಯವರು 'ಹರಿಜನ' ಪತ್ರಿಕೆಯಲ್ಲಿಯೂ ಈ ವಿಜಯವನ್ನು ಪ್ರಶಂಸಿಸಿದರು.

ರಂಗರಾಯನಿಗೆ ಈ ಅಪಜಯದಿಂದ ಬಹಳ ಖೇದವಾಯಿತು. ಗಂಗಾಧರರಾಯನ ಮೇಲೂ ನಾರಾಯಣನ ಮೇಲೂ ಬಹಳ ಕೋಪ ಬಂದಿತು. ಈ ಪರಾಭವಕ್ಕೆ ಇವರಿಬ್ಬರೇ ಕಾರಣವೆಂದು ತೋರಿತು. ಏನು ಪ್ರತೀಕಾರ ಮಾಡಬೇಕು? ಶ್ಯಾಮಲೆಯನ್ನು ಕರೆದು, "ಇನ್ನು ಮೇಲೆ ಯಾವ ಕಾರಣದಿಂದಲೂ ಗಂಗಾಧರರಾಯರ ಮನೆಗೆ ಹೋಗ ಕೂಡದು. ನಾರಾಯಣನ ಮನೆಗೂ ಹೋಗ ಕೂಡದು. ನಿಮ್ಮ ತಾಯಿಯವರು ಬೇಕಾದರೆ ನಮ್ಮ ಮನೆಗೆ ಬಂದು ನಿನ್ನನ್ನು ಮಾತನಾಡಿಸಿಕೊಂಡು ಹೋಗಲಿ. ನಾರಾಯಣ ಮತ್ತು ಗಂಗಾಧರರಾಯ ಅವರಿಬ್ಬರೂ ನನ್ನ ದ್ವೇಷಿಗಳು. ಒಂದು ಕೈ ನೋಡಿ ಬಿಡುತ್ತೇನೆ" ಎಂದು ಶಪಥ ಪೂರ್ವಕವಾಗಿ ಹೇಳಿದನು.

ಒಂದು ವಾರವು ಕಳೆಯಿತು. ರಂಗರಾಯನು ಒಂದು ದಿನ ಬೆಳಿಗ್ಗೆ ನಾರಾಯಣನ ಫ್ಯಾಕ್ಟರಿಗೆ ಹೋದನು. ಯಾವ ಕಳಂಕವೂ ಇಲ್ಲದಂತೆ ಮಾತನಾಡಿದನು. ನಾರಾಯಣನೂ ಬಹಳ ಗೌರವವನ್ನು ತೋರಿಸಿದನು. ರಂಗರಾಯನು ಹೊರಡುವಾಗ—"ನೋಡು ನಾರಾಯಣ! ನಮ್ಮ ಅಂಗಡಿ ಲೆಖ್ಖದಲ್ಲಿ ನಿನ್ನ ಮೇಲೆ ಹತ್ತು ಸಾವಿರ ರೂಪಾಯಿಗಳು ಬಾಕೀ ಇದೆ. ನಾವು ವರ್ಷದ ಲೆಖ್ಖಗಳನ್ನು ಮಾಡುತ್ತಿದ್ದೇವೆ. ಈ ತಿಂಗಳು ಆಖೈರು ಒಳಗಾಗಿ ನೀನು ಆ ಹಣ ಪಾವತಿಮಾಡಿಬಿಡಬೇಕು, ತಿಳಿಯಿತೇ?" ಎಂದು ಹೇಳಿ ಹೊರಟು ಹೋದನು.

ನಾರಾಯಣನಿಗೆ ಈ ವ್ಯಾಪಾರ ಧರ್ಮದ ನಡತೆಯು ಚೆನ್ನಾಗಿ ತಿಳಿಯಿತು. ಚುನಾವಣೆಯ ಪರಾಜಯದ ಬೆಂಕಿ ಎಂದು ಅರ್ಥ ಮಾಡಿ

ಕೊಂಡನು. ಶ್ಯಾಮಲೆಯು ತನ್ನ ಮನೆಗೆ ಬರಕೂಡದೆಂದು ಕಟ್ಟಪ್ಪಣೆಯಾಗಿರುವುದೂ ನಾರಾಯಣನಿಗೆ ತಿಳಿದಿತ್ತು. ಅವನು ಏನು ಮಾಡಬೇಕೆಂದು ಯೋಚಿಸಿದನು. ಗಂಗಾಧರರಾಯನೊಡನೆ ಹೇಳಿ ನೋಡೋಣ ಎಂದು ಕೊಂಡನು. ಅನಂತರ, ಅದು ಸರಿಯಲ್ಲ! ಈ ಫ್ಯಾಕ್ಟರಿ ಮಾರಿಬಿಡೋಣವೇ ಎನಿಸಿತು. ಅದಕ್ಕೆ ಗಿರಾಕಿಯೂ ಇತ್ತು. ಆಮೇಲೆ ಜೀವನಕ್ಕೇನು ಮಾಡಬೇಕೆಂಬುದೇ ದೊಡ್ಡ ಪ್ರಶ್ನೆ. ಯಾರಿಗೂ ತಿಳಿಸಲಿಲ್ಲ. ತಾಯಿಗೂ ಹೇಳಲಿಲ್ಲ. ಆದರೆ ಶ್ಯಾಮಲೆಗೆ ರಂಗರಾಯನೇ ಇದನ್ನು ತಿಳಿಸಿದ್ದನು. ಅವಳು 'ನಾರಾಯಣನಿಗೆ ಕಷ್ಟ ಬಂತು!' ಎಂದು ಚಿಂತಿಸಿದಳು. ರಂಗರಾಯನೊಡನೆ ಆ ವಿಚಾರವಾಗಿ ಅವನು ಏನೂ ಹೇಳಲಿಲ್ಲ.

ನಾರಾಯಣನು ಹಠವಾದಿ. ರಂಗರಾಯನ ಸಾಲವನ್ನು ತೀರಿಸಿಬಿಡಬೇಕೆಂದು ನಿಶ್ಚಯಿಸಿದನು. ಬೆಂಗಳೂರಿಗೆ ಹೋದನು. ವೇದಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳೊಡನೆ ತನ್ನ ಮನೆಯನ್ನು ಮಾರುವುದಾಗಿ ತಿಳಿಸಿದನು. ಅವರು ಮನೆಯನ್ನು ಮಾರಬಾರದೆಂದು ಎಷ್ಟೋ ವಿಧವಾಗಿ ಬುದ್ಧಿ ಹೇಳಿದರು. ನಾರಾಯಣನು ಅದಕ್ಕೊಪ್ಪಲಿಲ್ಲ. ರಾಮಾಶಾಸ್ತ್ರಿಯನ್ನು ಹಿಡಿದು ಬೆಲೆ ಮಾತನಾಡಿದನು. ಹತ್ತುಸಾವಿರ ರೂಪಾಯಿಗಳನ್ನು ಕಡಿಮೆ ಮಾಡಲು ಎಷ್ಟೋ ಪ್ರಯತ್ನಪಟ್ಟು ಶಾಸ್ತ್ರಿಗಳು ವಿಫಲರಾದರು. ಶಾಸ್ತ್ರಿಗಳ ಕೈಯ್ಯಲ್ಲಿ ಅಷ್ಟು ಹಣವಿರಲಿಲ್ಲ. ಅನ್ನಪೂರ್ಣಮ್ಮನವರು ತಮ್ಮ ನಗಗಳನ್ನು ಕೊಡುವುದಾಗಿ ಹೇಳಿದರು. ಚಿನ್ನದ ಬೆಲೆ ಆಗ ಬಹಳವಾಗಿತ್ತು. ಸುಬ್ರಹ್ಮಣ್ಯಶಾಸ್ತ್ರಿಗಳು ರಾಮಾಶಾಸ್ತ್ರಿಯನ್ನು ಕರೆದುಕೊಂಡು ಹೋಗಿ ಆ ನಗಗಳನ್ನು ಸರಿಯಾದ ಬೆಲೆಗೆ ಮಾರಿ ಹಣ ತಂದರು. ಕ್ರಯಪತ್ರ ಸಿದ್ಧವಾಗಿ ರಿಜಿಸ್ಟರಾಯಿತು. ಹತ್ತುಸಾವಿರ ರೂಪಾಯಿಗಳು ನಾರಾಯಣನ ಕೈಗೆ ಬಿದ್ದುವು.

ನಾಣಿಯು ಆ ಹಣವನ್ನು ತೆಗೆದುಕೊಂಡು ಮೈಸೂರಿಗೆ ಬಂದನು. ಬಡ್ಡಿಯನ್ನು ಲೆಕ್ಕ ಹಾಕಿ, ಬಡ್ಡಿಯ ಸಹಿತವಾಗಿ ಹಣ ತೆಗೆದುಕೊಂಡು ರಂಗರಾಯನ ಅಂಗಡಿಗೆ ಹೋದನು.

ರಂಗರಾಯನು ಆಫೀಸಿನಲ್ಲಿ ಕುಳಿತಿದ್ದನು. ಸುಸಜ್ಜಿತವಾದ ಆಫೀಸು. ಹೊರಗಡೆ ಗುಮಾಸ್ತರು, ಏಜಂಟರು, ದಳ್ಳಾಳಿಗಳು ಎಲ್ಲರೂ ಕುಳಿತು ಕೆಲಸ

ಮಾಡುತ್ತಿದ್ದರು. ನಾರಾಯಣನು ಜವಾನನ ಕೈಲಿ ಚೀಟಿ ಕೊಟ್ಟು ಕಳುಹಿಸಿದನು. "ನಾರಾಯಣನು ಎಂದೂ ಆಫೀಸಿಗೆ ಬಂದಿರಲಿಲ್ಲ. ನಾರಾಯಣನು ಏಕೆ ಬಂದಿರಬಹುದು? ಏನೋ ಹಣ ಬೇಕಾಗಿರಬಹುದು, ಬಂದಿದ್ದಾನೆ" ಎಂದು ರಂಗರಾಯನು ಅಂದುಕೊಂಡನು. ತಾನು ಹಣಕ್ಕೆ ತಗಾದೆ ಕೊಟ್ಟಿದ್ದು ಅವನಿಗೆ ಮರೆತು ಹೋಗಿತ್ತು. ಈ ಬಾರಿ ಸ್ಪಷ್ಟವಾಗಿ 'ನಾಸ್ತಿ' ಎಂದು ಹೇಳಿ ಕಳುಹಿಸುತ್ತೇನೆ ಗಂಗಾಧರರಾಯನು ಕೊಡಲಿ! ಎಂದು ಮೂದಲಿಸುತ್ತೇನೆ, ಎಂದುಕೊಂಡು ನಾರಾಯಣನನ್ನು ಒಳಗೆ ಬರಮಾಡಿಕೊಂಡನು.

ನಾಣಿಯು ಆಫೀಸು ರೂಮಿನೊಳಗೆ ಪ್ರವೇಶಿಸಿದನು "ಬಾ! ನಾರಾಯಣ, ಕುಳಿತುಕೋ" ಎಂದು ಸೌಜನ್ಯದಿಂದ ಹೇಳಿ ಕುರ್ಚಿಯ ಕಡೆ ಕೈ ತೋರಿಸಿದನು. ನಾಣಿಯು ರಂಗರಾಯನಿಗೆ ಕೈಮುಗಿದು ಕುಳಿತುಕೊಂಡನು.

"ಏನು ನಿಮ್ಮ ಫ್ಯಾಕ್ಟರಿ ಹೇಗೆ ನಡೆಯುತ್ತಿದೆ?"

"ಚೆನ್ನಾಗಿಯೇ ನಡೆಯುತ್ತಿದೆ!"

"ಹೌದು! ನಾನೂ ಕೇಳಿದ್ದೇನೆ. ನಿಮ್ಮ ಕಪ್-ಸಾಸರುಗಳು ಹೋಟಲುಗಳಲ್ಲಿ ಫ್ಯಾಷನ್ ಆಗಿದೆಯಂತೆ! ಬಹಳ ಸಂತೋಷ, ಇದು ಯಶಸ್ವಿಯಾಗುವುದಿಲ್ಲವೆಂದುಕೊಂಡಿದ್ದೆ, ನೀನು ಅದನ್ನು ಬಹಳ ಯಶಸ್ವಿಯಾಗಿ ಮಾಡಿದ್ದೀಯೆ. ನಿನಗೆ ಅಸಾಧಾರಣವಾದ ಬಿಸಿನೆಸ್ ನ್ಯಾಕ್ ಇದೆ. ಈ ಕಾಂಗ್ರೆಸ್ಸು ಬಿಟ್ಟುಬಿಟ್ಟರೆ ಇನ್ನೂ ಮುಂದಕ್ಕೆ ಬಂದುಬಿಡುತ್ತಿ."

ನಾಣಿಯು ಸುಮ್ಮನಿದ್ದನು.

ರಂಗರಾಯನು "ಒಂದೇ ವಿಧವಾಗಿದ್ದರೆ ಹೆಚ್ಚು ದಿನ ಲಾಭ ಬರುವುದಿಲ್ಲ ಪೈಪೋಟಿ ಹೆಚ್ಚುತ್ತದೆ. ಬೇರೊಂದು ನಮೂನೆ ಕಂಡು ಹಿಡಿಯಬೇಕು" ಎಂದನು.

"ಹೌದು! ನಾನೂ ಯೋಚನೆ ಮಾಡಿದ್ದೇನೆ. ಒಳ್ಳೆಯ ಬೀಗಗಳನ್ನು ತಯಾರ್ಮಾಡಬಹುದೆಂದು ನಮ್ಮ ಕೆಲಸಗಾರರು ಹೇಳುತ್ತಾರೆ. ನಮ್ಮ ಕಂಪೆನಿಯಲ್ಲಿಯೇ ಮಾಡಿ ತೋರಿಸಿದ್ದಾರೆ. ಅದಕ್ಕೆ ಕೆಲವು ಮಿಷನ್‌ಗಳನ್ನು ತರಬೇಕು. ಬೊಂಬಾಯಿಗೆ ಹೋಗಿ ಅಲ್ಲಿ ನೋಡಿಕೊಂಡು, ಅಲಿಘರ್ ವರೆಗೆ ಹೋಗಿ ಬರೋಣವೆಂದಿದ್ದೇನೆ. ಒಬ್ಬ ಪಂಜಾಬಿಯು ಇಲ್ಲಿ ಕೆಲಸಕ್ಕೆ ಸಿಕ್ಕಿ

ದ್ದಾನೆ. ಅವನು ಬೀಗ ತಯಾರಿಸುವುದರಲ್ಲಿ ಒಳ್ಳೇ ನುರಿತ ಕೈ! "

"ಅದಕ್ಕೆಷ್ಟು ಹಣ ಬೇಕಾಗುತ್ತದೆ?"

"ಸುಮಾರು ಐದು ಸಾವಿರ ರೂಪಾಯಿಗಳು ಬೇಕಾಗಬಹುದು."

"ಯಾರು ಕೊಡುತ್ತಾರೆ? ಗಂಗಾಧರರಾಯರೇನಾದರೂ ಸಹಾ ಮಾಡುತ್ತಾರೆಯೇ?"

ನಾರಾಯಣನು ನಕ್ಕನು. "ಯಾರ ಸಹಾಯವನ್ನೂ ತೆಗೆದುಕೊ ವುದಿಲ್ಲ. ನನಗೆ ಸಹಾಯ ಮಾಡಿದರೆ ಅವರಿಗೇನು ಲಾಭ?"

"ಅದೇ ಸರಿ! ಈಗ ಏನು ಬಂದಿ?"

"ತಾವು ಒಂದು ವರ್ಷದ ಹಿಂದೆ ನನಗೆ ಸಹಾಯ ಮಾಡಿದಿರಿ. ಅದಕ್ಕಾ ಹೃತ್ಪೂರ್ವಕ ಧನ್ಯವಾದಗಳು. ನಾನು ಆ ಉಪಕಾರವನ್ನು ಈ ಜನ್ಮ ಮರೆಯುವಂತಿಲ್ಲ. ನಾನು ಹುಟ್ಟಿದ ಮೇಲೆ ಹತ್ತು ಸಾವಿರ ರೂಪಾಯಿಗಳ ನೋಡಿಯೇ ಇರಲಿಲ್ಲ. ಇದೋ, ತಮ್ಮ ಹಣ ತಂದಿದ್ದೇನೆ! ಸ್ವೀಕರಿಸಿರಿ ಎಂದು ಹೇಳಿ ಜೇಬಿನಿಂದ ನೋಟುಗಳ ಕಂತೆ ತೆಗೆದು ಮೇಜಿನ ಮೆ ಇರಿಸಿದನು.

ರಂಗರಾಯನು ಅಪ್ರತಿಭನಾದನು. ಕ್ಷಣ ಹೊತ್ತು ಸುಮ್ಮನಿದ್ದು ಕೇಳಿ "ಇದೇನು ನಾರಾಯಣ! ಇಷ್ಟು ಹಣ ಒಂದೇ ಗಂಟೆನಲ್ಲಿ ಎಲ್ಲಿ ತಂದಿ?"

"ಹೇಗೋ ಮಾಡಿ ತಂದಿದ್ದೇನೆ, ತೆಗೆದುಕೊಳ್ಳಿರಿ. ಒಂದು ವರ್ಷ ಬಡ್ಡಿಯೂ ಅದರಲ್ಲಿದೆ."

"ನಾರಾಯಣ! ನಾನು ಆ ದಿನ ಬಂದು ಹಣ ಪಾವತಿ ಮ ಬೇಕೆಂದು ಹೇಳಿದ್ದು ನಿನ್ನ ಮನಸ್ಸಿಗೆ ಚುಚ್ಚಿರಬಹುದು. ನಾನು ಹೇಳಿ ಹಣಕಾಸುಗಳ ವಿಷಯದಲ್ಲಿ ನೀವು ಜಾಗರುಕರಾಗಿರಬೇಕೆಂದು ಹೇಳುವುದ ಮಾತ್ರ. ನೀನು ಈ ಹತ್ತು ಸಾವಿರ ಒಂದೇ ಗಂಟೆನಲ್ಲಿ ತಂದಿಡುವಷ್ಟು ನಿ ಬಿಸಿನೆಸ್ ಬೆಳೆದಿಲ್ಲ. ಇದೇಕೆ ಹೀಗೆ ಮಾಡಿದಿ?"

"ಏನೂ ಇಲ್ಲ. ಇವತ್ತು ನೀವು ಹಣ ಕೇಳಿದ್ದು ನನಗೇನೂ ಅಸಮಾ ಧಾನವಿಲ್ಲ. ಅಂದು ಹಣ ಕೊಟ್ಟಿದ್ದು ದೊಡ್ಡ ಉಪಕಾರ! ನೀವು ಆ ದಿನ ಹ ಕೊಡದೇ ಇದ್ದಿದ್ದರೆ ನಾನು ಬೀದಿಯಲ್ಲಿ ಅಲೆಯಬೇಕಾಗಿತ್ತು."

ರಂಗರಾಯನು ಎಷ್ಟೋ ಹೇಳಿದನು. ನಾರಾಯಣನು ಜಗ್ಗಲಿಲ್ಲ. ರಂಗರಾಯನ ಅಪ್ಪಣೆ ಪಡೆದು ಎದ್ದು ಹೊರಟು ಹೋದನು.

ರಂಗರಾಯನು ಹಣವನ್ನು ಲೆಖ್ಖ ಮಾಡಿ ಕಬ್ಬಿಣದ ಪೆಟ್ಟಿಗೆಯಲ್ಲಿ ತೆಗೆದಿಟ್ಟನು. ನಾರಾಯಣನು ಈ ಹಣವನ್ನು ಹೇಗೆ ತಂದ. ಎಂದು ಆಲೋಚಿಸಿದನು. 'ಒಳ್ಳೆಯ ಹಠವಾದಿ ಹುಡುಗ! ಛಲಗಾರ! ಈ ಹಣವನ್ನು ಕಾಂಗ್ರೆಸ್ಸಿನವರೇ ಕೊಟ್ಟಿರಬೇಕು! ಇರಲಿ ನೋಡೋಣ. ಈ ಹಣ ಅವನದಾಗಿಯೇ ಇಟ್ಟಿರುತ್ತೇನೆ' ಎಂದುಕೊಂಡನು.

ಆ ದಿನವೇ ಶ್ಯಾಮಲೆಗೆ ಈ ಎಲ್ಲ ವಿಚಾರಗಳನ್ನೂ ಹೇಳಿದನು. ಅವಳಿಗೂ ಆಶ್ಚರ್ಯವಾಯಿತು. ಆದರೆ ತನ್ನ ಅಣ್ಣನ ದಿಟ್ಟತನವನ್ನು ಮನಸ್ಸಿನಲ್ಲಿಯೇ ಶ್ಲಾಘಿಸಿದಳು.

ನಾರಾಯಣನು ಮನೆಗೆ ಬಂದು ತಾಯಿಯೊಡನೆ ಈ ಮಾತುಗಳನ್ನು ಹೇಳಿದನು. ಆಕೆಯು ಮಗನ ಪ್ರಾಮಾಣಿಕತೆಗಾಗಿ ಸಂತೋಷಪಟ್ಟುಕೊಂಡಳು. ಈ ವಿಷಯವು ತಾರೆಯ ಮುಖಾಂತರವಾಗಿ ಗಂಗಾಧರರಾಯನಿಗೂ ತಿಳಿಯಿತು.

ನಾರಾಯಣನು ವ್ಯಾಪಾರದ ಮೇಲೆ ಬೊಂಬಾಯಿ ಪ್ರಾಂತ್ಯಕ್ಕೆ ಸರ್ಕೀಟು ಹೋದನು. ಆಗ ತಾರೆಯು ತೌರುಮನೆಗೆ ಹೋಗಿದ್ದಳು. ಆಗಾಗ ಅವಳು ತೌರುಮನೆಗೆ ಹೋಗುತ್ತಿದ್ದಳು. ಅವಳು ಶ್ಯಾಮಲೆಯ ಮನೆಗೂ ಹೋಗಿ ಬರುತ್ತಿದ್ದಳು. ರಂಗರಾಯನೂ ತಾರಾದೇವಿಯೊಡನೆ ಧಾರಾಳವಾಗಿ ಮಾತನಾಡುತ್ತಿದ್ದನು. ತಮಾಷೆ ಮಾಡುತ್ತಿದ್ದನು. ಸರಳವಾದ ಹುಡುಗಿ ತಾರೆ ಮತ್ತು ಶ್ಯಾಮಲೆಯರ ಸ್ನೇಹ ಅತ್ಯಂತ ನಿಕಟವೂ ದೈವಿಕವೂ ಆದುದಾಗಿತ್ತು.

## ೧೫

ನಾರಾಯಣನು ಮೈಸೂರಿನಲ್ಲಿ ಮನೆ ಮಾಡಿದಾಗಿನಿಂದ ಶಾಮಾ ಶಾಸ್ತ್ರಿಯು ಬಹಳವಾಗಿ ಆ ಮನೆಗೆ ಬಂದು ಹೋಗುತ್ತಿದ್ದನು. ವ್ರತ ಕಥೆಗಳಿಗೆ ಅವನು ಪುರೋಹಿತ! ಪಾರ್ವತಮ್ಮನಿಗೆ ಅಂಗಡಿಯಿಂದ ಏನಾದರೂ ಸಾಮಾನು ತಂದುಕೊಡಬೇಕಾದರೆ ಶಾಮಾಶಾಸ್ತ್ರಿ. ಅವನಿಗಿಂತಲೂ ನಂಬಿಕೆ ಯಾದವನು ಬೇರೆ ಯಾರೂ ಇರಲಿಲ್ಲ. ಗಂಗಾಧರರಾಯನ ಮನೆಯಲ್ಲಿಯೂ ಅವನಿಗೆ ಗೌರವವಿತ್ತು. ರಂಗರಾಯನ ಮನೆಯಲ್ಲಿ ಅವನಿಗೆ ಅಷ್ಟು ಪುರಸ್ಕಾರ ವಿರಲಿಲ್ಲ. ಆತನು ಅದನ್ನರಿತಿದ್ದನು. ಆದ್ದರಿಂದಲೇ ಅವರ ಮನೆಗೆ ಅವನು ಹೋಗುತ್ತಲೂ ಇರಲಿಲ್ಲ.

ಶಾಮಾಶಾಸ್ತ್ರಿಯು ಬಹಳ ಡಾಂಭಿಕ ಅತಿ ಪರಿಚಯದಿಂದ ಅವನಿಗೆ ಪಾರ್ವತಮ್ಮನಲ್ಲಿ ಮೋಹವುಂಟಾಗಿತ್ತು. ಆ ಮೋಹವು ಅವನ ಅಂತರಂಗ ದಲ್ಲಿಯೇ ಇತ್ತು. ಪಾರ್ವತಮ್ಮನು ಒಬ್ಬಳೇ ಇದ್ದಾಗ ಸ್ವಲ್ಪ ಸ್ವಲ್ಪ ವ್ಯಕ್ತ ಪಡಿಸುತ್ತಿದ್ದ. ಪಾರ್ವತಮ್ಮನಿಗೆ ಅದು ಅರ್ಥವಾಗದೇ ಇರಲಿಲ್ಲ. ಆಗಾಗ ಇದೇನು ಈ ಮನುಷ್ಯನು ಇಷ್ಟು ಅಯೋಗ್ಯನಾಗಿದ್ದಾನೆ, ಎಂದುಕೊಳ್ಳುತ್ತಿ ದ್ದಳು. ಒಂದೊಂದು ಬಾರಿ ಅವನಿಗೆ ಹೇಳಿಬಿಡಬೇಕೆಂದೆನಿಸುತ್ತಿತ್ತು. ದುರಭಿ ಪ್ರಾಯವೇನೂ ಇರಲಾರದು ಸ್ವಲ್ಪ ಚಲ್ಲು ಸ್ವಭಾವದ ಮನುಷ್ಯ ಎಂದು ಕೊಳ್ಳುತ್ತಿದ್ದಳು. ಒಂದೊಂದು ಬಾರಿ ಅವನಿಗೆ "ನೀನು ಅಯೋಗ್ಯ ಮನುಷ್ಯ! ನಮ್ಮ ಮನೆಗೆ ಬರಬೇಡ" ಎಂಬುದಾಗಿ ಹೇಳಿಬಿಡಬೇಕು ಅನಿಸುತ್ತಿತ್ತು. ಶಾಮಾಶಾಸ್ತ್ರಿಯು ಅತ್ಯಂತ ಕಾಮುಕನಾಗಿದ್ದ. ಜೊತೆಗೆ ಭಂಡನೂ ಹೌದು. ಸಂದರ್ಭ ಬಂದಾಗ "ತಾಯಿ! ನೀವು ಅನ್ನಪೂರ್ಣಾದೇವಿ! ಪುಣ್ಯವಂತೆ! ಎಂಥಾ ಮಗಳು. ಎಂಥಾ ಮಗ! ನೀವು ಮಹಾ ಪತಿವ್ರತೆ" ಎನ್ನುತ್ತಿದ್ದ.

ಈ ಮಾತುಗಳಿಗೂ ಅವನ ನಡವಳಿಕೆಗಳಿಗೂ ಸಂಬಂಧವೇ ಇಲ್ಲ. ಹೀಗಾಗಿ ಪಾರ್ವತಮ್ಮ ಸಂದಿಗ್ಧಾವಸ್ಥೆಯಲ್ಲಿದ್ದಳು. ಅಂತೂ ಶಾಮಾಶಾಸ್ತ್ರಿಯು ದಿನವೂ ಆಕೆಯ ಮನೆಗೆ ಬಂದು ಹೋಗುತ್ತಿದ್ದನು

ಪಾರ್ವತಮ್ಮನ ವಯಸ್ಸು ನಲವತ್ತು. ತರುಣ ವಯಸ್ಸಿನಲ್ಲಿ ಒಳ್ಳೆಯ ರೂಪವತಿ! ತಲೆ ತುಂಬಾ ಕೂದಲು. ದಷ್ಟಪುಷ್ಟವಾದ ಶರೀರ! ಎತ್ತರವಾದ ಆಕಾರ! ಪ್ರೌಢಾವಸ್ಥೆಯ ಸುಂದರಿಯೇ ಹೌದು! ಶ್ಯಾಮಲೆಯಷ್ಟೇ ಸೌಂದರ್ಯವತಿ! ಶಾಮಾಶಾಸ್ತ್ರಿಯು ಆ ಸೌಂದರ್ಯ ಪ್ರೌಢಾವಸ್ಥೆಗಳನ್ನು ನೋಡಿ ಮೋಹಿತನಾಗಿದ್ದನೆಂದು ಹೇಳಲಾಗುವುದಿಲ್ಲ ಅವನಿಗೆ ಮೊದಲಿನಿಂದಲೂ ಸ್ತ್ರೀ ಚಾಪಲ್ಯ ಬಹಳ. ವಿಧವೆ, ಏಕಾಕಿನಿ ಸುಲಭವಾಗಿ ವಶಳಾಗಿಬಿಡುವಳೆಂಬ ಆಶೆ! ಏಕಾಂತದಲ್ಲಿ ಅವಳೇ ಮೋಹಿಸಿ ವಶಳಾಗುವಳೆಂಬ ಮೋಹದ ಭ್ರಾಂತಿ! ನಾರಾಯಣನೂ ಊರಿನಲ್ಲಿಲ್ಲ. ತಾರೆಯೂ ಮನೆಯಲ್ಲಿಲ್ಲ. ಅಂಥ ಸಮಯದಲ್ಲಿ ಮೂರು ನಾಲ್ಕು ದಿನ ಹೊಂಚು ಹಾಕಿದನು. ಅಂದು ಪಾರ್ವತಮ್ಮ ಹಜಾರಕ್ಕೆ ಬಂದು ಶಾಮಾಶಾಸ್ತ್ರಿಯೊಡನೆ ಮಾತನಾಡಿ ನಡುಮನೆಗೆ ಹಿಂತಿರುಗುವಾಗ, ಹಿಂದಿನಿಂದಬಂದು ಆಕೆಯ ಬಲತೋಳನ್ನು ಹಿಡಿದುಕೊಂಡನು; ಸೆರಗು ಜಾರಿತು. ಮೈಮೇಲೆ ಕೈ ಹೋಗುವುದರಲ್ಲಿತ್ತು. ಪಾರ್ವತಮ್ಮ ಧೈರ್ಯ ತಂದು ಕೊಂಡು ಪ್ರತಿಭಟಿಸಿದಳು. ಶಾಮಾಶಾಸ್ತ್ರಿಯು ಪಾರ್ವತಮ್ಮನನ್ನು ಹಿಡಿದು ಕೊಂಡು ಪ್ರಣಯ ಭಿಕ್ಷೆಯನ್ನು ಕೇಳಿದನು. ಪಾರ್ವತಮ್ಮ ಕಷ್ಟಪಟ್ಟು ಕೈಕೊಡವಿ ಅವನನ್ನು ದೂರ ತಳ್ಳಿದಳು. ಅವನು ಮೇಲೆದ್ದು ಮತ್ತೆ ಹತ್ತಿರಕ್ಕೆ ಬಂದನು. ಆಗ ಆಕೆ ಪಕ್ಕದಲ್ಲಿದ್ದ ಮಡಿಕೋಲನ್ನು ಕೈಗೆ ತೆಗೆದುಕೊಂಡು ಆತನ ತಲೆಯ ಮೇಲೆ ಗಟ್ಟಿಸಿದಳು. ಪೆಟ್ಟು ಬಲವಾಗಿ ಬೀಳಲಿಲ್ಲ. ಶಾಮಾ ಶಾಸ್ತ್ರಿಯು ತಪ್ಪೇಟು ಬಿದ್ದ ಹಾವಿನಂತೆ ಕೆಂಪೇರಿ ಬುಸುಗುಟ್ಟುತ್ತ "ನಿನ್ನ ಚರಿತ್ರೆಯೆಲ್ಲವನ್ನೂ ಬಲ್ಲೆ! ಬೆಂಗಳೂರಿನ ಮಲ್ಲೇಶ್ವರದಲ್ಲೆಲ್ಲಾ ನಿನ್ನ ಕಥೆಯೇ. ಆಗ ಗತಿಕೆಟ್ಟ ಹೆಂಗಸೆಂದು ಕನಿಕರದಿಂದ ಮುಚ್ಚಿಟ್ಟೆ, ಇಲ್ಲದಿದ್ದರೆ ಆ ರಂಗರಾಯ ನಿನ್ನ ಮಗಳನ್ನು ಮದುವೆಯಾಗುತ್ತಲೇ ಇರಲಿಲ್ಲ. ಗಂಗಾಧರ ರಾಯನು ಅಯೋಗ್ಯ. ಅವನು ತಿಳಿದು ತಿಳಿದೂ ನಿನ್ನ ಸಂಬಂಧ ಮಾಡಿದ. ಈಗ ನೀನು ಅವನ ಸೂಳೆ! ನೀನು ನನ್ನ ವಶವಾದರೆ ಮಾನ ಉಳಿಯುತ್ತೆ,

ಇಲ್ಲದಿದ್ದರೆ, ಜಾತಿಭ್ರಷ್ಟಳೆಂದು ಮಾಡಿ ಬಹಿಷ್ಕಾರ ಹಾಕಿಸುತ್ತೇನೆ” ಎಂದು ಹೆದರಿಸಿದ. ಪಾರ್ವತಮ್ಮನಿಗೆ ಕೋಪವೂ ದುಃಖವೂ ಬಂದಿತು. “ನನ್ನ ಮನೆ ಬಿಟ್ಟು ಹೋಗು ಚಂಡಾಲ. ಇನ್ನು ಒಂದು ಕ್ಷಣ ಇಲ್ಲಿ ನಿಂತರೆ ಮುಖದ ಮೇಲೆ ಹೊಡೆದು ಕಳುಹಿಸುತ್ತೇನೆ” ಎಂದು ಹೇಳಿ ನಡುಮನೆಯ ಬಾಗಿಲನ್ನು ಪಠಾರನೆ ಮುಚ್ಚಿದಳು. ಶಾಮಾಶಾಸ್ತ್ರಿಯು ವಾಚಾಮ ಗೋಚರ ವಾಗಿ ಬೈಯ್ಯುತ್ತಾ ಹೊರಟು ಹೋದನು. ತಲೆಯ ಮೇಲೆ ಕೋಲಿನ ಬಾಸುಂಡೆ ಬಂದಿತ್ತು.

ಇದಕ್ಕೆ ತಕ್ಕ ಪ್ರತಿಕ್ರಿಯೆ ಮಾಡಬೇಕೆಂದು ಶಾಮಾಶಾಸ್ತ್ರಿಯು ಹಠ ತೊಟ್ಟನು. ಅಲ್ಲಿಂದ ನೇರವಾಗಿ ಡಾಕ್ಟರ್ ಸುಬ್ಬರಾಯರ ಷಾಪಿಗೆ ಹೋದನು. ಸುಬ್ಬರಾಯರು ಮರ್ಯಾದೆಯಿಂದ ಮಾತನಾಡಿದರು. “ಏನು ಶಾಸ್ತ್ರಿಗಳೇ! ಇಲ್ಲಿಯ ವರೆಗೆ ಸವಾರಿ ಬಂತು?”

“ಏನೂ ಇಲ್ಲ. ನಿಮ್ಮಲ್ಲಿ ಯಾರಾದರೂ ಬಂದೇ ಬರಬೇಕಲ್ಲ. ಈ ತಲೆ ನೋಡಿ, ಘಾಯವಾಗಿದೆ. ಕೊಟ್ಟಗೆಯಲ್ಲಿ ದನಕ್ಕೆ ಹುಲ್ಲು ಹಾಕಿ ಅವಸರವಾಗಿ ಬರುತ್ತಿದ್ದೆ. ಸೂರು ತಗುಲಿ ಬೋರೆ ಆಗಿದೆ. ನೋಡಿ! ಇದಕ್ಕೇನಾದರೂ ಸ್ವಲ್ಪ ಔಷಧಿ ಸವರುತ್ತೀರಾ?”

ಡಾಕ್ಟರು ಆತನ ತಲೆ ಮುಟ್ಟಿ ನೋಡಿದರು: “ಏನೂ ಪರವಾ ಇಲ್ಲ ಶಾಸ್ತ್ರಿಗಳೇ! ಸ್ವಲ್ಪ ಔಷಧಿ ಹಚ್ಚುತ್ತೇನೆ. ಗುಣವಾಗಿ ಹೋಗುತ್ತೆ. ನಿಮ್ಮ ತಲೆ ಗಟ್ಟಿಯಾಗಿದೆ!”

“ನೋಡಿ ಡಾಕ್ಟರೇ, ಇದೇನೂ ದೊಡ್ಡದಲ್ಲ. ಇದಕ್ಕೆ ನಿಮ್ಮವರೆಗೆ ಬರುತ್ತಿರಲಿಲ್ಲ. ಸ್ವಲ್ಪ ಅರಿಸಿನ ಸುಣ್ಣ ಕಲಿಸಿ ಹಚ್ಚಿದ್ದರೆ ಗುಣವಾಗಿ ಹೋಗು ತ್ತಿತ್ತು. ನಾನು ಕೆಲವು ದಿನಗಳಿಂದಲೂ ನಿಮ್ಮೊಡನೆ ಸ್ವಲ್ಪ ಅಂತರಂಗದ ಮಾತನಾಡಬೇಕಾಗಿತ್ತು. ಈ ಹಾಳು ಚುನಾವಣೆ ಬಂತಲ್ಲಾ, ನಾವೆಲ್ಲಾ ನಿಮಗೇ ವೋಟು ಹಾಕಿದೆವು. ಏನೋ ಈ ಕಲಿಗಾಲ! ಅಧರ್ಮಕ್ಕೆ ಜಯ. ನಿಮ್ಮ ಮನಸ್ಸು ನೊಂದಿತ್ತು. ಆದ್ದರಿಂದ ಬರಲಿಲ್ಲ. ಈಗತಾನೇ ಕೊಟ್ಟಗೆ ಸೂರು ತಾಕಿತು. ಔಷಧಿಯನ್ನು ಹಾಕಿಸಿಕೊಂಡು ನಿಮ್ಮೊಡನೆ ಒಂದೆರಡು ಮಾತನಾಡಿ ಹೋಗೋಣವೆಂದು ಬಂದೆ!”

ಡಾಕ್ಟರು ಔಷಧಿ ಹಾಕಿದರು. ಒಂದು ಪ್ಲಾಸ್ತ್ರಿ ಹಾಕಿದರು!

ಶಾಸ್ತ್ರಿಗಳು ಪಳಾಸ್ತ್ರಿ ಹಾಕಿಸಿಕೊಂಡ ಮೇಲೆ,

" ನಾಳೆ ಬೆಳಗ್ಗೆ ಸ್ನಾನ ಪೂಜೆ ಎಲ್ಲವೂ ಆಗಬೇಕಲ್ಲ? "

" ಬೆಳಗ್ಗೆ ಎದ್ದು ಅದನ್ನು ಕಿತ್ತು ಹಾಕಿಬಿಡಿ. ಪರವಾ ಇಲ್ಲ. ನಾಳೆ ಬನ್ನಿ. ಮತ್ತೊಂದು ಸಾರಿ ಔಷಧಿ ಹಾಕುತ್ತೇನೆ. "

" ಒಳ್ಳೆಯದು ಡಾಕ್ಟರೇ ಹಾಗೇ ಆಗಲಿ. "

ಡಾಕ್ಟರು ಶಾಸ್ತ್ರಿಗಳನ್ನು ಒಳಗಿನ ಕೋಣೆಗೆ ಕರೆದುಕೊಂಡು ಹೋದರು. ಅಲ್ಲಿ ಸೋಫಾದ ಮೇಲೆ ಕೂಡಿಸಿಕೊಂಡು " ಶಾಸ್ತ್ರಿಗಳೇ! ಏನು ವಿಶೇಷ? " ಎಂದರು.

" ಡಾಕ್ಟರೇ ನೀವು ದೇವರಿದ್ದ ಹಾಗೆ. ಸತ್ಯವಾಗಿ ಹೇಳುತ್ತೇನೆ. ಆ ನಾರಾಯಣರಾವ್ ಇದ್ದಾನಲ್ಲ–ಕಾಂಗ್ರೆಸ್ ಮುಖಂಡರೊಡನೆ ಓಡಾಡುವ ಹುಡುಗ. ಅವರ ತಾಯಿ ಪಾರ್ವತಮ್ಮ. ಅವಳನ್ನು ಗಂಗಾಧರರಾಯನೇ ಇಟ್ಟುಕೊಂಡು ಬಿಟ್ಟಿದ್ದಾನೆ. ರಾಜಾರೋಷಾಗಿ ಬಂದು ಹೋಗುತ್ತಾನೆ. ನೋಡಿ! ನಾವೆಲ್ಲಾ ಅವರ ಜಾತಿಯವರು. ತಲೆ ತಗ್ಗಿಸುವ ಹಾಗಾಗಿ ಹೋಗಿದೆ " ಎಂದನು.

" ಓಹೊ! ಹಾಗೇನು ನನಗೂ ಆ ಸಂದೇಹವಿತ್ತು. ಆಗಾಗ ನಮ್ಮ ಷಾಪಿಗೆ ಔಷಧಿಗೆ ಬರುತ್ತಾರೆ. ನಮಗೇಕೆ ಅದೆಲ್ಲಾ! ನಮ್ಮಲ್ಲಿಗೆ ಎಂಥೆಂಥವರೋ ಬರುತ್ತಾರೆ. ಈಗ ಗಂಗಾಧರರಾಯರ ಯೋಗ್ಯತೆ ಬಯಲಾದಂತಾಯಿತು. "

" ಅಷ್ಟೇ ಅಲ್ಲ. ಇನ್ನೂ ಏನೇನೋ ಹೊರಗೆ ಬರುತ್ತೆ. ನೋಡುತ್ತಿರಿ, ನಾನು ಇವರೆಲ್ಲರಿಗೂ ಬಹಿಷ್ಕಾರ ಹಾಕಿಸುತ್ತೇನೆ. "

" ಅಯ್ಯೋ! ಶಾಸ್ತ್ರಿಗಳೇ ಈ ಕಾಲದಲ್ಲಿ ಬಹಿಷ್ಕಾರವೆಲ್ಲಿ ಬಂತು? "

" ಹಾಗಲ್ಲ ಡಾಕ್ಟರೇ! ತಿಥಿ, ವ್ರತ, ಕಥೆ ಬರುತ್ತಲ್ಲಾ, ನಾವೆಲ್ಲಾ ಕಟ್ಟು ಮಾಡಿಕೊಂಡು ಬಿಡುತ್ತೇವೆ. ಅವರ ಮನೆಗೆ ಹೋಗುವುದೇ ಇಲ್ಲ. "

" ಶಾಸ್ತ್ರಿಗಳೇ ಈ ವಿಷಯ ನನಗೇಕೆ ಹೇಳಿದಿರಿ. ನಮಗೂ ನಿಮ್ಮ ಜಾತಿಗೂ ಏನು ಸಂಬಂಧ. ನಾವು ವೈಷ್ಣವರು! "

"ವೈಷ್ಣವರು ಸ್ಮಾರ್ತರು ಬ್ರಾಹ್ಮಣರು ಎಲ್ಲಾ ಒಂದೇ ಡಾಕ್ಟರೇ! ಹಾಲು ಮಾರುವ ಹೆಂಗಸರೆಲ್ಲಾ ಆ ಪಾರ್ವತಮ್ಮನನ್ನು ಆಡಿಕೊಂಡು ನಗುತ್ತಾರೆ. ಆ ಗಂಗಾಧರರಾಯನೇನೋ ಎಲ್ಲದಕ್ಕೂ ಸಿದ್ಧವಾಗಿರೋ ಮನುಷ್ಯ. ಆದರೆ ರಂಗರಾಯ ಯೋಗ್ಯ! ನೀವೂ ರಂಗರಾಯರೂ ಸ್ನೇಹಿತರೆಂದು ಕೇಳಿದ್ದೇನೆ. ಅವರ ಕಿವಿಯಲ್ಲಿ ಈ ಸುದ್ದಿ ಹಾಕಿಬಿಡಿ. ಅವರ ಹೆಂಡತಿಯನ್ನಾದರೂ ಮಾನವಾಗಿ ಕಾಪಾಡಿಕೊಳ್ಳಲಿ."

"ಶಾಸ್ತ್ರಿಗಳೇ, ನೀವು ಹೇಳಿದ್ದೆಲ್ಲಾ ಸತ್ಯವಿರಬಹುದು. ಆದರೆ ನಾನು ಈ ವಿಚಾರಗಳನ್ನು ರಂಗರಾಯರಲ್ಲಿ ಹೇಳುವುದು ಸರಿಯಲ್ಲ. ನೀವೇ ಏನಾದರೂ ಮಾಡಿ ಅವರ ಕಿವಿಗೆ ಚುಚ್ಚಿಬಿಟ್ಟರೆ ಮೇಲು."

"ಇರಲಿ, ನನ್ನಿಂದ ಆಗಿದ್ದೆಲ್ಲಾ ಮಾಡುತ್ತೇನೆ" ಎಂದುಕೊಂಡು ಅಲ್ಲಿಂದ ಹೊರಟ ಆ ಶಾಸ್ತ್ರಿ ಹೀಗೆಯೇ ಆ ಸಮಾಚಾರವನ್ನು ಹತ್ತಾರು ಕಡೆ ಹರಡಿದನು.

ಕ್ರಮೇಣ ಈ ವಿಚಾರವು ರಂಗರಾಯನಿಗೂ ತಿಳಿಯಿತು. ಅವನು ಮೊದಲು ನಂಬಲಿಲ್ಲ. ಪಾರ್ವತಮ್ಮನ ಗಾಂಭೀರ್ಯಾದಿ ಗುಣಗಳನ್ನು ನೋಡಿ ಅವನಿಗೆ ಆಕೆಯಲ್ಲಿದ್ದ ಗೌರವ ಬುದ್ಧಿ ಕ್ರಮೇಣ ಹೋಗುತ್ತಾ ಬಂತು. ಗಂಗಾಧರರಾಯನ ಮೇಲೆ ಅವನಿಗೆ ಬಹಳ ದ್ವೇಷವಿತ್ತು. ಆದ್ದರಿಂದ ಈ ವದಂತಿಯು ಪೂರ್ಣ ಸತ್ಯವೆಂದು ನಂಬಿದನು. ಶ್ಯಾಮಲೆಗೆ ಮಾತ್ರ ಈ ವಿಷಯ ತಿಳಿಯಲಿಲ್ಲ.

ಗಂಗಾಧರರಾಯನಿಗೂ ಇಂಥದೊಂದು ಪುಕಾರು ಹುಟ್ಟಿದೆಯೆಂದು ಗೊತ್ತಾಯಿತು. ಮೊದಲು ಅವನಿಗೆ ಬಹಳ ವ್ಯಥೆಯಾಯಿತು. ನೊಂದುಕೊಂಡನು. ಆದರೆ ಒಂದು ವಾರದೊಳಗಾಗಿ ಅದನ್ನೆಲ್ಲಾ ಮರೆತನು. ಪ್ರಪಂಚದಲ್ಲಿ ಕೆಟ್ಟ ಜನರಿರುತ್ತಾರೆ. ಅವರ ಸ್ವಭಾವವೇ ಹೀಗೆ, ಎಂದುಕೊಂಡು ಯಥಾಪ್ರಕಾರ ನಾರಾಯಣನ ಮನೆಗೆ ಹೋಗಿ ಬರುತ್ತಿದ್ದನು.

ಪಾರ್ವತಮ್ಮನಿಗೂ ಶಾಮಾಶಾಸ್ತ್ರಿಯು ತನ್ನ ವಿಚಾರದಲ್ಲಿ ಅಪವಾದ ಹರಡುತ್ತಿದ್ದಾನೆಂದು ಚೆನ್ನಾಗಿ ತಿಳಿದಿತ್ತು. ಅದಕ್ಕೆ ಪ್ರತಿಕ್ರಿಯೆಯೇನೂ ಇಲ್ಲವೆಂದುಕೊಂಡು ಮನಸ್ಸಿನಲ್ಲಿಯೇ ದುಃಖಪಡುತ್ತಿದ್ದಳು. ಪುರುಷರ ಅತ್ಯಾಚಾರಗಳಿಗೆ ಈ ಪ್ರಪಂಚದಲ್ಲಿ ತಡೆಯೇ ಇಲ್ಲವೆಂದುಕೊಳ್ಳುತ್ತಿದ್ದಳು.

ಪಾರ್ವತಮ್ಮನಿಗೆ ಇದೇ ಕಾರಣದಿಂದ ಆರೋಗ್ಯಸ್ಥಿತಿ ಕೆಟ್ಟಿತು. ಮೊದ ಮೊದಲು ಔಷಧಿ ತೆಗೆದುಕೊಳ್ಳಲಿಲ್ಲ. ಆಮೇಲೆ ನಾರಾಯಣನ ಒತ್ತಾಯ ದಿಂದ ಔಷಧಿ ತೆಗೆದುಕೊಳ್ಳಲು ಒಪ್ಪಿದಳು. ಡಾಕ್ಟರ್ ಸುಬ್ಬರಾಯರ ಹೆಸರು ಪ್ರಸಿದ್ಧವಾಗಿತ್ತು. ನಾರಾಯಣನಿಗೆ ಅವನ ಮೇಲೆ ಏನೂ ದ್ವೇಷವಿರಲಿಲ್ಲ. ಚುನಾವಣೆಗಳ ಸಂದರ್ಭದಲ್ಲಿ ಸ್ವಲ್ಪ ಘರ್ಷಣೆ ಬಂದಿತ್ತು ಅಷ್ಟೆ. ಅದು ಅಲ್ಲಿಗೇ ಮುಗಿದು ಹೋಗಿತ್ತು. ನಾರಾಯಣನು ಸುಬ್ಬರಾಯರನ್ನು ಮನೆಗೆ ಕರೆ ತಂದನು. ಸುಬ್ಬರಾಯರು ಬಂದು ನೋಡಿ ಪರೀಕ್ಷೆ ಮಾಡಿ ಪಾರ್ವತಮ್ಮ ನಿಗೆ ಔಷಧಿಕೊಡಲು ಆರಂಭಿಸಿದರು. ಶ್ಯಾಮಲೆಯು ತಾಯಿಗೆ ಖಾಯಿಲೆ ಯಾಗಿದೆಯೆಂದು ತಿಳಿಯುತ್ತಲೇ ಅಣ್ಣನ ಮನೆಗೆ ಬಂದು ನೋಡಿ ಕೊಂಡು ಹೋಗುತ್ತಿದ್ದಳು. ಸ್ವಲ್ಪ ಹೊತ್ತು ಅಲ್ಲಿಯೇ ಇದ್ದು ಉಪಚಾರ ಮಾಡಿ ಮನೆಗೆ ಹಿಂತಿರುಗಿದ್ದಳು. ಡಾಕ್ಟರು ಸುಬ್ಬರಾಯರ ಔಷಧಿ ಕೊಡುತ್ತಾರೆಂದು ತಿಳಿಯುತ್ತಲೇ ಶ್ಯಾಮಲೆಗೆ ಅಸಮಾಧಾನವಾಯಿತು.ಅವಳು ತಾಯಿಯ ಹತ್ತಿರ ಹೆಚ್ಚು ಹೊತ್ತು ಇರುತ್ತಿರಲಿಲ್ಲ. ಅವಳಿಗೆ ಡಾಕ್ಟರನ್ನು ಅಲ್ಲಿ ಸಂಧಿಸುವುದು ಇಷ್ಟ ವಿರಲಿಲ್ಲ. ಪಾರ್ವತಮ್ಮನಿಗೆ ಖಾಯಿಲೆ ಹೆಚ್ಚುತ್ತಲೇ ಇತ್ತು. ತಾರೆಯೇ ಸದಾ ಕಾಲದಲ್ಲಿಯೂ ಉಪಚರಿಸುತ್ತಿದ್ದಳು. ಕಮಲಮ್ಮನವರು ಪ್ರತಿದಿನವೂ ಒಂದೆ ರಡು ಗಂಟೆಗಳ ಕಾಲ ಮಾತನಾಡುತ್ತಿದ್ದು ಮನೆಗೆ ಹೋಗುತ್ತಿದ್ದರು. ಒಂದು ದಿನ ಕಮಲಮ್ಮ, ತಾರೆ, ಶ್ಯಾಮಲೆ ಇವರುಗಳು ಕುಳಿತು ಮಾತನಾಡುತ್ತಿದಂ ತೆಯೇ ಡಾಕ್ಟರು ಬಂದರು. ಪಾರ್ವತಮ್ಮನನ್ನು ಪರೀಕ್ಷಿಸಿದರು. ಕಮಲಮ್ಮ ನವರು, "ಇದೇನು ಡಾಕ್ಟರೇ, ಇಷ್ಟುದಿನವಾದರೂ ಗುಣವಾಗಿಲ್ಲ. ಏನು ಖಾಯಿಲೆ ಅಂತ ?"

"ಹೊಟ್ಟೆಯಲ್ಲಿ ಹುಣ್ಣಾಗಿರಬಹುದು. ಗುಣವಾಗುತ್ತದೆ" ಎಂದು ಹೇಳಿದನು. ಶ್ಯಾಮಲೆಯು ಅವರ ಕಡೆಗೆ ತಿರುಗಿ ಸಹಾ ನೋಡಲಿಲ್ಲ. ಡಾಕ್ಟರು ಇವಳಿಗೆ ಇನ್ನೂ ಕೋಪವಿದ್ದೇ ಇದೆ, ಎಂದುಕೊಂಡರು.

ತಾಯಿಯ ಖಾಯಿಲೆಗೆ ನಾಣಿಯೂ ಬಹಳ ಪೇಚಾಡುತ್ತಿದ್ದನು. ಡಾಕ್ಟರ ಮನೆಗೆ ಒಂದು ದಿನ ಹೋಗಿ, "ಇದೇನು ಡಾಕ್ಟರೇ! ನಮ್ಮ ತಾಯಿ ಯವರಿಗೆ ಸ್ವಲ್ಪವೂ ಗುಣವಿಲ್ಲ. ಯಾವ ಖಾಯಿಲೆ ಇದು ?" ಎಂದು

ಎಂದು ಕೇಳಿದನು.

"ನಿಮ್ಮ ತಾಯಿಯವರು ಮಲಗಿ ಒಂದು ತಿಂಗಳಾಯಿತು. ಕೊಡಬೇಕಾದ ಔಷಧಿಗಳನ್ನೆಲ್ಲ ಕೊಟ್ಟಿದ್ದೇನೆ. ಇಂಜಕ್ಷನ್ನುಗಳನ್ನೂ ಕೊಟ್ಟಾಯಿತು. ಅವರಿಗೆ ಹೊಟ್ಟೆಯಲ್ಲಿ ಹುಣ್ಣಾಗಿದೆ. 'ಕ್ಯಾನ್ಸರ್' ಎಂದು ಅನುಮಾನಪಟ್ಟಿದ್ದೇನೆ. ಈಗ ಹಾಗೆಯೇ ಗುಣವಾಗುತ್ತದೆ. ಆದರೆ ಕ್ಯಾನ್ಸರ್ ಸಂಪೂರ್ಣವಾಗಿ ಗುಣವಾಗುವ ಖಾಯಿಲೆಯಲ್ಲ!"

ಅದನ್ನು ಕೇಳಿ ನಾರಾಯಣನಿಗೆ ಯೋಚನೆಗಿಟ್ಟುಕೊಂಡಿತು. ಈ ವಿಚಾರಗಳನ್ನೆಲ್ಲಾ ಗಂಗಾಧರರಾಯನಿಗೆ ತಿಳಿಸಿದನು. ಅವನು ರೋಗಿಯನ್ನು ಮದರಾಸಿಗೆ ಕರೆದುಕೊಂಡು ಹೋಗಬೇಕೆಂದು ಹೇಳಿದನು.

ಡಾಕ್ಟರ್ ಸುಬ್ಬರಾಯರ ಔಷಧಿಯೇ ನಡೆಯುತ್ತಿತ್ತು. ನಾರಾಯಣನು ಮದರಾಸಿಗೆ ಹೋಗಿ ಬಂದನು. ನಾರಾಯಣನು ಮದರಾಸಿಗೆ ಹೋಗಿದ್ದಾಗ ಶ್ಯಾಮಲೆಯು ತಾಯಿಯ ಬಳಿಯಲ್ಲಿಯೇ ಇರಬೇಕಾಗುತ್ತಿತ್ತು. ರಾತ್ರಿ ಮನೆಗೆ ಹೋಗುತ್ತಿದ್ದಳು. ರಂಗರಾಯನೇ ಬಂದು ಹೆಂಡತಿಯನ್ನು ಕಾರಿನಲ್ಲಿ ಕರೆದುಕೊಂಡು ಹೋಗುತ್ತಿದ್ದನು.

ಡಾಕ್ಟರ್ ಸುಬ್ಬರಾಯರು ವ್ಯವಹಾರದಲ್ಲಿ ತುಂಬ ಚತುರರು. ಸಮಯ ನೋಡಿ ಶ್ಯಾಮಲೆಯ ಕ್ಷಮಾಪಣೆ ಕೇಳಿಕೊಂಡರು. ತಾಯಿಯ ಖಾಯಿಲೆ, ಡಾಕ್ಟರ ವೈದ್ಯ, ಅವರು ಮನಸಾರ ಕ್ಷಮಾಪಣೆ ಕೇಳಿಕೊಂಡಿದ್ದು ಇದೆಲ್ಲಾ ಶ್ಯಾಮಲೆಯ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿತು. ಅವಳು ಡಾಕ್ಟರೊಡನೆ ಒಂದೊಂದು ಬಾರಿ ಔಷಧೋಪಚಾರಗಳ ವಿಷಯದಲ್ಲಿ ಮಾತನಾಡುತ್ತಿದ್ದಳು. ಡಾಕ್ಟರು ಹಾಗೆಯೇ ತಮ್ಮ ತಪ್ಪು ಮಾಯವಾಯಿತೆಂದು ಸಮಾಧಾನ ಮಾಡಿಕೊಂಡರು.

ಒಂದು ದಿನ ರಾತ್ರಿ ರಂಗರಾಯನು ಮನೆಗೆ ಕರೆದುಕೊಂಡು ಹೋಗುವಾಗ ಶ್ಯಾಮಲೆ ತಾಯಿಯ ಖಾಯಿಲೆಯ ಸ್ಥಿತಿಯನ್ನು ಹೇಳಿದಳು. ಡಾಕ್ಟರು ಕ್ಷಮಾಪಣೆ ಕೇಳಿದ ವಿಷಯವನ್ನೂ ಗಂಡನಿಗೆ ತಿಳಿಸಿದಳು.

ರಂಗರಾಯನ ಮನಸ್ಸಿಗೆ ಶಾಂತಿ ಇರಲಿಲ್ಲ. ಪಾರ್ವತಮ್ಮನ ವಿಚಾರದಲ್ಲಿ ಅವನಿಗೆ ಬಹಳ ಅಸಮಾಧಾನವಿತ್ತು. ಗಂಗಾಧರರಾಯ ಮತ್ತು ನಾರಾ

ಯಣನ ವಿಷಯದಲ್ಲಿ ಅವನಿಗೆ ದ್ವೇಷವಿತ್ತು. ಈ ಜನಗಳ ಮಧ್ಯೆ ಶ್ಯಾಮಲೆ ವಿಶೇಷವಾಗಿ ಹೋಗಿ ಬರುತ್ತಿದ್ದುದು ಅವನಿಗೆ ಸುತರಾಂ ಸಮಾಧಾನವಾಗಿರಲಿಲ್ಲ. ಅದೇ ಮನೆಯಲ್ಲಿ ಡಾಕ್ಟರ್ ಸುಬ್ಬರಾಯನೇ ವೈದ್ಯ! ಇಷ್ಟು ಪ್ರತಿಕೂಲ ವಾತಾವರಣವಿದ್ದಾಗ್ಯೂ ಶ್ಯಾಮಲೆಯನ್ನು ಅವರ ತಾಯಿಯು ರುಗ್ಣಾವಸ್ಥೆಯಲ್ಲಿರುವಾಗ ಅವರ ಮನೆಗೆ ಹೋಗಿ ಬರಬಾರದೆಂದು ನಿರ್ಬಂಧಪಡಿಸುವುದು ನ್ಯಾಯವಲ್ಲವೆಂದು ರಂಗರಾಯನ ಭಾವನೆ. ಅವನಿಗೆ ಶ್ಯಾಮಲೆಯಲ್ಲಿ ಬಲು ನಂಬಿಕೆ. ಆದರೆ ಒಂದು ಬಾರಿ ಕೈ ಜಾರಿದಳೆಂದರೆ ಆಮೇಲೆ ತನ್ನ ಭವಿಷ್ಯ ಬಲು ಕಷ್ಟ, ಎಂದೂ ಅವನು ಅಂದುಕೊಳ್ಳುತ್ತಿದ್ದನು.

ಒಂದು ದಿನ ರಾತ್ರಿ ಕಾರಿನಲ್ಲಿ ವಾಪಸು ಮನೆಗೆ ಹೋಗುತ್ತಿದ್ದಾಗ ರಂಗರಾಯ ಹೆಂಡತಿಯನ್ನು ಕೇಳಿದ :

" ಶ್ಯಾಮಲೆ ನಿಮ್ಮ ತಾಯಿಗೆ ಏನು ಖಾಯಿಲೆ? "

" ಕ್ಯಾನ್ಸರ್ ಎಂದು ಡಾಕ್ಟರು ಹೇಳುತ್ತಾರೆ."

" ಈ ಡಾಕ್ಟರ್ ಕ್ಯಾನ್ಸರ್ ಗುಣಪಡಿಸ ಬಲ್ಲರೆ? "

" ಇಲ್ಲ. ಮದರಾಸಿಗೆ ಹೋಗಬೇಕೆಂದು ಹೇಳುತ್ತಾರಂತೆ. ಅದಕ್ಕಾಗಿಯೇ ನಮ್ಮ ಅಣ್ಣ ಮದರಾಸಿಗೆ ಹೋಗಿದ್ದಾನೆ."

ಮುಂದೆ ಮಾತು ನಡೆಯಲಿಲ್ಲ. ಇಬ್ಬರೂ ಮನೆ ತಲುಪಿ ಭೋಜನ ಮಾಡಿ ಮಲಗಿದರು.

ರಂಗರಾಯನಿಗೆ ರಾತ್ರಿಯೆಲ್ಲಾ ಏಕೋ ನಿದ್ದೆ ಹತ್ತಲಿಲ್ಲ. ಎಷ್ಟೋ ಹೊತ್ತಿನ ಮೇಲೆ ಅವನಿಗೆ ಒಂದು ಉಪಾಯ ಹೊಳೆದು ಸಮಾಧಾನವಾಯಿತು ' ಈ ಪಾರ್ವತಮ್ಮನಿಗೆ ಕ್ಯಾನ್ಸರ್. ಅವಳು ಇನ್ನು ಹೆಚ್ಚು ದಿನ ಬದುಕುವುದಿಲ್ಲ. ಅವಳನ್ನು ಮದರಾಸಿಗೆ ಸಾಗಿಸಿಬಿಟ್ಟರೆ, ಈ ಎಲ್ಲ ಅನಿಷ್ಟಗಳು ಪರಿಹಾರವಾದಂತೆ! ಆಮೇಲೆ ನಾವು ಸುಖವಾಗಿರಬಹುದು ' ಎಂದು ತೋರಿತು. ಅದರ ಬಗ್ಗೆ ಚಿಂತಿಸುತ್ತಿರುವಾಗ ಹಾಗೆಯೇ ನಿದ್ದೆ ಬಂತು.

ಮಾರನೆಯ ಬೆಳಗ್ಗೆ ರಂಗರಾಯನು ಡಾಕ್ಟರ ಷಾಪಿಗೆ ಹೋದನು ಡಾಕ್ಟರು ಗೌರವ ವಿಶ್ವಾಸಗಳಿಂದ ಸ್ವಾಗತ ನೀಡಿ ಅವನನ್ನು ಕೂಡಿಸಿದರು.

" ಏನು ಸಾಹುಕಾರರು ದಯಮಾಡಿಸಿದ್ದು ? "

" ಏನೂ ಇಲ್ಲ. ನಮ್ಮ ಅತ್ತೆಯವರ ಖಾಯಿಲೆ ಸಮಾಚಾರ....? "

" ಅವರಿಗೆ ಕ್ಯಾನ್ಸರ್. ಅದಕ್ಕೆ ಇಲ್ಲಿ ಚಿಕಿತ್ಸೆ ಸಾಧ್ಯವಿಲ್ಲ. ಮದರಾಸಿಗೆ ಕರೆದುಕೊಂಡು ಹೋಗಬೇಕೆಂದು ಹೇಳಿದ್ದೇನೆ.

" ಅದು ಸರಿಯಾಗಿದೆ. ಅದನ್ನೇ ಖಚಿತವಾಗಿ ತಿಳಿದುಕೊಂಡು ಹೋಗೋಣವೆಂದು ಬಂದೆ. ಮದರಾಸಿಗೆ ಕರೆದುಕೊಂಡು ಹೋದರೆ ಗುಣ ವಾಗುತ್ತದೇನು ? "

" ಅದೂ ಅವರ ಅದೃಷ್ಟ. ಕ್ಯಾನ್ಸರ್ ಗುಣವಾಗುವ ಖಾಯಿಲೆಯೇ ಅಲ್ಲ. ನೂರಕ್ಕೊಂದೊ ಎರಡೊ ಗುಣವಾಗುವುದೂ ಉಂಟು."

" ಹಾಗೇನೂ ! ಹೇಗಾದರೂ ಆಗಲಿ, ನಾವು ಮಾಡುವುದೆಲ್ಲಾ ಮಾಡ ಬೇಕಲ್ಲ ! ಹಾಗೇ ಮಾಡೋಣ "

ರಂಗರಾಯನು ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತನಾಡು ತ್ತಿದ್ದು ಮನೆಗೆ ಹೊರಟು ಹೋದನು.

೧೬

ನಾರಾಯಣನು ಮದರಾಸಿನಲ್ಲಿ ಒಂದು ಮನೆಯನ್ನು ಗೊತ್ತುಮಾಡಿ ಡಾಕ್ಟರುಗಳನ್ನು ನೋಡಿ ಮಾತನಾಡಿದನು. ಮೈಸೂರಿಗೆ ಹಿಂತಿರುಗಿ ಬಂದು, ತನ್ನ ಫ್ಯಾಕ್ಟರಿಯನ್ನು ನೋಡಿಕೊಳ್ಳಲು ಸರಿಯಾದವರನ್ನು ಗೊತ್ತುಮಾಡಿ ಮದರಾಸಿಗೆ ಹೊರಡುವ ದಿನವನ್ನೂ ನಿಶ್ಚಯಿಸಿದನು.

ತಾರಾ, ಅವಳ ಅಣ್ಣ ವಾಸುದೇವ, ನಾರಾಯಣ ಮೂವರೂ ಹೊರಡುವು ದೆಂದು ಗೊತ್ತಾಯಿತು. ಪಾರ್ವತಮ್ಮನವರಿಗೆ ಎಲ್ಲವನ್ನೂ ತಿಳಿಸಿದನು. ತನ್ನ ಖಾಯಿಲೆಗಾಗಿ ಮಗನು ಇಷ್ಟೊಂದು ಏರ್ಪಾಡುಗಳನ್ನು ಮಾಡಿರುವುದ ಕ್ಕಾಗಿ ಆಕೆಗೆ ಸಂತೋಷವಾದರೂ, ತನ್ನದು ಗುಣವಾಗುವ ಖಾಯಿಲೆಯಲ್ಲ ವೆಂಬುದು ಅವಳಿಗೆ ಹೇಗೋ ತಿಳಿದುಹೋಗಿತ್ತು. “ ನಾರಾಯಣನೊಡನೆ ಶ್ಯಾಮಲೆಯೂ ಬರಲಿ. ನನಗೆ ಸಂಬಂಧಿಸಿದವರೆಲ್ಲಾ ನನ್ನ ಸಮೀಪದಲ್ಲೇ ಇರಲಿ ” ಎಂದು ಹೇಳಿದಳು.

ಆ ದಿನ ಮಧ್ಯಾಹ್ನವೇ ಶ್ಯಾಮಲೆಯು ಬಂದಳು. ಮದರಾಸಿಗೆ ಹೋಗುವ ವಿಚಾರವನ್ನೆಲ್ಲಾ ನಾರಾಯಣನು ಅವಳಿಗೆ ತಿಳಿಸಿದನು. “ ನೀನೂ ಬರ ಬೇಕೆಂದು ಅಮ್ಮ ಹೇಳುತ್ತಾಳೆ ” ಎಂದನು.

ಶ್ಯಾಮಲೆಯು “ ಬರದೇ ಏನು ? ಆದರೆ ನಿಮ್ಮ ಭಾವನವರು ಒಪ್ಪ ಬೇಕಲ್ಲ. ಅವರಿಗೆ ನಾನು ಇಲ್ಲಿಗೆ ಬರುವುದೇ ಇಷ್ಟವಿಲ್ಲ. ಇನ್ನು ಮದರಾಸಿಗೆ ಕಳುಹಿಸಲು ಒಪ್ಪುತ್ತಾರೆಯೇ ? ”

ನಾಣಿಗೆ ಕೋಪ ಬಂದಿತು. “ ಅದೇನು ಶ್ಯಾಮಲೆ, ಅವರು ಮನುಷ್ಯರೋ ಮರವೋ, ನಾವೇನು ಅವರಿಗೆ ನಿನ್ನನ್ನು ಮಾರಿದ್ದೇವೆಯೆ ? ಅದೆಲ್ಲಾ ಸರಿ ಯಲ್ಲ. ಅವರು ಏನೇ ಹೇಳಲಿ ನೀನು ಬರಲೇಬೇಕು. ನಾಳೆ ಮಧ್ಯಾಹ್ನ

ಪ್ರಯಾಣ."

ಶ್ಯಾಮಲೆಯು ಸುಮ್ಮನಾದಳು.

ಅವಳು ತಾಯಿಯ ಬಳಿಯಲ್ಲಿ ಕುಳಿತು ಉಪಚರಿಸುತ್ತಿದ್ದಳು. ಅಂದು ತಾಯಿ ಸೌಮ್ಯವಾಗಿಯೇ ಇದ್ದಳು. ಶ್ಯಾಮಲೆಯು ಎಂದಿಗಿಂತ ಅಂದು ಬೇಗನೆ ಮನೆಗೆ ಹೊರಟಳು. ನಾರಾಯಣನೇ ಹೋಗಿ ಅವಳನ್ನು ಮನೆಗೆ ಬಿಟ್ಟು ಬಂದನು.

ರಾತ್ರಿ ಭೋಜನವಾಗುತ್ತಲೇ ಶ್ಯಾಮಲೆಯು ರಂಗರಾಯನೊಡನೆ ಮದರಾಸಿನ ಪ್ರಯಾಣದ ವಿಷಯವನ್ನು ಎತ್ತಿದಳು. ರಂಗರಾಯನು ಎಲ್ಲವನ್ನೂ ಸಾವಧಾನವಾಗಿ ಕೇಳಿ—"ಸರಿ! ನೀನೊಬ್ಬಳು ಹೋಗದಿದ್ದರೇನು?" ಎಂದನು.

ಶ್ಯಾಮಲೆಯು "ಅದು ಹೇಗೆ ಆಗುತ್ತೆ! ನಮ್ಮ ಅಮ್ಮನಿಗೆ ಒಬ್ಬ ಮಗ, ಒಬ್ಬ ಮಗಳು. ಅವರು ಬದುಕುವುದಿಲ್ಲವೆಂದು ನಿರ್ಧಾರ ಮಾಡಿಕೊಂಡಿದ್ದಾರೆ. ಸಾಯುವಾಗ ನಾವಿಬ್ಬರೂ ಅವರ ಎದುರಿನಲ್ಲಿರಬೇಕೆಂದು ಅವರ ಆಶೆ!" ಎಂದಳು.

"ನಿಮ್ಮ ಅಮ್ಮ ಇಷ್ಟು ಬೇಗ ಸಾಯುವುದಿಲ್ಲ. ನಾನು ಡಾಕ್ಟರ ಹತ್ತಿರ ಎಲ್ಲ ಮಾತನಾಡಿದ್ದೇನೆ. ಇನ್ನೂ ಒಂದು ವರ್ಷವೋ ಒಂದೂವರೆ ವರ್ಷವೋ! ಅದುವರೆವಿಗೂ ನೀನು ಅವರೊಡನೆ ಇರುವುದು ಸಾಧ್ಯವೆ? ಈ ಮನೆಯ ಯೋಗಕ್ಷೇಮ ನೋಡಿಕೊಳ್ಳುವವರು ಯಾರು?"

"ಅವರಿಗೆ ಕೊಂಚ ಗುಣ ಕಾಣಿಸಿದರೆ ಸಾಕು ನಾನು ಹೊರಟು ಬರುತ್ತೇನೆ. ಎರಡು ಮೂರು ವಾರಗಳಿಗೆ ಹೆಚ್ಚಾಗಿ ನಾನು ಅಲ್ಲಿ ನಿಲ್ಲುವುದಿಲ್ಲ."

ಅದಕ್ಕೆ ರಂಗರಾಯನು ಏನೂ ಮಾತನಾಡಲಿಲ್ಲ. ಆ ರಾತ್ರಿಯೂ ಕಳೆಯಿತು.

ರಂಗರಾಯನಿಗೆ ಬಹಳ ಯೋಚನೆಗಿಟ್ಟುಕೊಂಡಿತು. ಪಾರ್ವತಮ್ಮನವರನ್ನು ಮದರಾಸಿಗೆ ಕರೆದುಕೊಂಡು ಹೋಗುವುದು ಅವನಿಗೆಷ್ಟೋ ಸಂತೋಷವನ್ನುಂಟುಮಾಡಿತ್ತು. ಆಕೆ ಮದರಾಸಿಗೆ ಹೋಗುವುದರಿಂದ ಶ್ಯಾಮಲೆಗೆ ಈ

ಸಹವಾಸ ತಪ್ಪುತ್ತದೆ ಎಂಬುದೇ ಅವನ ಮನಸ್ಸಿಗೆ ಸಮಾಧಾನವನ್ನುಂಟು ಮಾಡಿದ್ದುದು. ಆದರೆ ಈಗ ಶ್ಯಾಮಲೆಯು ಮದರಾಸಿಗೆ ಹೋಗಬೇಕೆಂದರೆ ಅವನ ಸ್ಥಿತಿ ಏನಾಗಬೇಕು? ಆ ಮನೋರಥಗಳೆಲ್ಲಾ ಭಗ್ನವಾಗಿ ಹೋದಂತೆಯೇ! "ಇರಲಿ. ನಾನು ಖಂಡಿತವಾಗಿ ಹೇಳಿಬಿಡುತ್ತೇನೆ. ಇದರಲ್ಲೆಲ್ಲಾ ದಾಕ್ಷಿಣ್ಯವೇನು" ಎಂದು ಮನಸ್ಸು ಗಟ್ಟಿ ಮಾಡಿಕೊಂಡನು.

ನಾರಾಯಣನು ಬೆಳಗ್ಗೆ ರಂಗರಾಯನ ಮನೆಗೆ ಬಂದು ರಂಗರಾಯನೊಡನೆ ಮದರಾಸಿನ ಪ್ರಯಾಣದ ವಿಷಯವನ್ನೆಲ್ಲಾ ವಿವರವಾಗಿ ಹೇಳಿದನು.

ರಂಗರಾಯನು "ಅದೇ ಒಳ್ಳೆಯದು. ನಾನೂ ಡಾಕ್ಟರನ್ನು ನೋಡಿ ಮಾತನಾಡಿದೆ. ಮದರಾಸಿನಲ್ಲಿ ಈ ಖಾಯಿಲೆಗೆ ಸರಿಯಾದ ಚಿಕಿತ್ಸೆ ನಡೆಯುತ್ತದೆ" ಎಂದನು.

"ಆದ್ದರಿಂದಲೇ ಎಲ್ಲವನ್ನೂ ಗೊತ್ತು ಮಾಡಿಕೊಂಡು ಬಂದಿದ್ದೇನೆ. ಇವತ್ತು ಮಧ್ಯಾಹ್ನ ಹೊರಡುತ್ತೇವೆ. ಶ್ಯಾಮಲೆಯು ಬರಲಿ ಎಂದು ನಮ್ಮ ತಾಯಿ ಹೇಳುತ್ತಿದ್ದಾರೆ. ದಯವಿಟ್ಟು ಕಳಿಸಿಕೊಡಿ. ಅದಕ್ಕೇ ನಿಮ್ಮನ್ನು ಕೇಳುವುದಕ್ಕೆ ಬಂದೆ."

"ಶ್ಯಾಮಲೆ ಏಕೆ ಬರಬೇಕು. ಅವಳನ್ನು ಕಳಿಸಿದರೆ ಇಲ್ಲಿ ತುಂಬ ಅನಾನುಕೂಲವಾಗುತ್ತದಲ್ಲ?"

"ಏನೋ....ನಮ್ಮ ತಾಯಿ ತುಂಬ ಹೇಳುತ್ತಿದ್ದಾರೆ. ಅಲ್ಲಿ ನನ್ನ ಹೆಂಡತಿಯೊಬ್ಬಳೇ. ಇಬ್ಬರು ಹೆಂಗಸರಿದ್ದರೆ ಒಳ್ಳೆಯದು."

"ನಿಮ್ಮ ತಾಯಿಯವರ ಇಷ್ಟದಂತೆ ನಾನು ನನ್ನ ಹೆಂಡತಿಯನ್ನು ಕಳಿಸುವುದಕ್ಕಾಗುವುದಿಲ್ಲ, ಇರಲಿ, ಯೋಚನೆ ಮಾಡಿ ಹೇಳಿ ಕಳುಹಿಸುತ್ತೇನೆ."

"ಒಳ್ಳೆಯದು ನಿಮ್ಮ ಇಷ್ಟ" ಎಂದು ಹೇಳಿ ನಾರಾಯಣನು ಹೊರಟು ಹೋದನು.

ರಂಗರಾಯನು ಶ್ಯಾಮಲೆಯನ್ನು ಕರೆದು "ಶ್ಯಾಮಲೆ! ನಿಮ್ಮಣ್ಣನು ಬಂದಿದ್ದ, ನಿನ್ನನ್ನು ಮದರಾಸಿಗೆ ಕಳುಹಿಸಿಕೊಡಬೇಕೆಂದು ಕೇಳಿದ. ನಾನು ಸಾಧ್ಯವೇ ಇಲ್ಲವೆಂದು ಹೇಳಿಬಿಟ್ಟೆ" ಎಂದನು.

ಶ್ಯಾಮಲೆಯು “ ನಾನು ನಿನ್ನೆಯೇ ಹೇಳಿದ್ದೆನಲ್ಲಾ. ನಿಮ್ಮ ಮನಸ್ಸಿಗೆ ಒಪ್ಪಿತವಾಗಲಿಲ್ಲವೋ. ನಾನು ಹೋಗಲೇಬೇಕು. ನಮ್ಮ ತಾಯಿ ಸಾಯುತ್ತಿರುವಾಗಲೂ ನಿಮ್ಮ ಈ ನಿರ್ಬಂಧ ಚೆನ್ನಾಗಿದೆಯೇ ? ”

“ ನನಗೆ ಅದೆಲ್ಲಾ ಸರಿಬೀಳುವುದಿಲ್ಲ. ಇದ್ದರೆ ಗಂಭೀರವಾಗಿ ನಮ್ಮ ಮನೆಯಲ್ಲಿರಬೇಕು. ಇಲ್ಲದಿದ್ದರೆ ಹೊರಟುಹೋಗಬೇಕು. ಈ ಎಡವಟ್ಟು ದಾರಿಗಳೆಲ್ಲಾ ನನಗೆ ಒಪ್ಪುವುದಿಲ್ಲ, ನಾನು ಬಹು ಖಂಡಿತವಾದಿ. ”

“ ನೀವು ಖಂಡಿತವಾದಿಗಳೆಂಬುದು ನನಗೆ ಚೆನ್ನಾಗಿ ಗೊತ್ತು. ಗಂಗಾಧರರಾಯರ ಮನೆಗೆ ಹೋಗಕೂಡದೆಂದಿರಿ. ಹಾಗೆಯೇ ಮಾಡಿಬಿಟ್ಟೆ. ನಾನು ನಿಮ್ಮ ಮನಸ್ಸನ್ನು ತಿಳಿದೇ ಅದಕ್ಕೆ ಹೊಂದಿಕೊಂಡು ಐದು ವರ್ಷಗಳಿಂದ ನಡೆಯುತ್ತಿದ್ದೇನೆ. ಈಗಿನ ಸಂದರ್ಭ ಹಾಗಲ್ಲ, ನಮ್ಮ ತಾಯಿಯ ಸ್ಥಿತಿ ನೋಡಿ. ನಾನು ಅವರೊಡನೆ ಹೋಗಲೇಬೇಕು. ದಯವಿಟ್ಟು ಅಪ್ಪಣೆ ಕೊಡಿ ! ”

“ ನಾನು ಅಪ್ಪಣೆ ಕೊಡುವುದೂ ಇಲ್ಲ. ನೀನು ಹೋಗಲೂ ಬೇಡ. ”

“ ನಾನು ಹೋಗಲೇಬೇಕು !”

“ ಹೋಗಕೂಡದು. ”

“ ನೀವು ಅಪ್ಪಣೆ ಕೊಟ್ಟರೂ ಇಲ್ಲದಿದ್ದರೂ ನಾನು ಹೋಗುವುದೇನೋ ಖಂಡಿತ. ”

“ ಹೋಗುವುದಾದರೆ ತೊಲಗಿ ಹೋಗು ! ಪುನಃ ಈ ಮನೆಗೆ ಕಾಲಿಡಕೂಡದು. ಈ ಮನೆಯ ಋಣ ತೀರಿಹೋಯಿತೆಂದು ತಿಳಿದುಕೊ ! ”

ಆ ಮಾತು ಕೇಳಿ ಶ್ಯಾಮಲೆಗೆ ತುಂಬ ಕೋಪ ಬಂತು. “ ನಿಮ್ಮ ಮನೆಯ ಋಣ ತೀರಿ ಹೋಯಿತೇ ! ಸರಿ ! ಹಾಗೆಯೇ ಆಗಲಿ. ನಮ್ಮಮ್ಮನು ಬುದ್ಧಿ ಇಲ್ಲದೆ ಈ ಹಾಳು ಭಾವಿಗೆ ನನ್ನನ್ನು ತಳ್ಳಿದಳು. ನಾನು ದೇವರು ಧರ್ಮ ಎಲ್ಲವನ್ನೂ ನೋಡಿ ತಾಳಿಕೊಂಡಿದ್ದೆ. ನಿಮಗೆ ಅವು ಯಾವುದೂ ಇಲ್ಲ. ನಿಮ್ಮ ಋಣ ನಿಮಗೆ ಇರಲಿ. ನಾನು ನಮ್ಮ ಅಮ್ಮನೊಡನೆ ಹೋಗುತ್ತೇನೆ. ”

ರಂಗರಾಯನು ಎದ್ದು ಬಂದು ಶ್ಯಾಮಲೆಯ ಕೈಹಿಡಿದುಕೊಂಡನು. “ ಕೇಳು ! ಶ್ಯಾಮಲಾ ! ನಿನಗೊಂದು ಕಡೆಯ ಮಾತು ಹೇಳಿಬಿಡುತ್ತೇನೆ. ಆಮೇಲೆ ಇದ್ದರೆ ಇರು, ಹೋದರೆ ಹೋಗು ! ಕೇಳು ! ನನಗೆ ದೊಡ್ಡ ಮೋಸ

ವಾಯಿತು. ನಿಮ್ಮ ಅಮ್ಮನು ವ್ಯಭಿಚಾರಿಣಿ. ಅವಳು ಗಂಗಾಧರರಾಯನ ಉಪಪತ್ನಿ. ಅವಳಿಗೆ ಬಂದಿರುವುದು ಘೋರವಾದ ಮೇಹ ವ್ಯಾಧಿ; ಕ್ಯಾನ್ಸರ್ ಅಲ್ಲ, ಡಾಕ್ಟರೇ ನನ್ನ ಹತ್ತಿರ ಹೇಳಿದಾರೆ. ಮೈಸೂರಿಗೆ ಮೈಸೂರೇ ಗುಲ್ಲೆದ್ದು ಹೋಗಿದೆ. ಅವಳ ಮಗಳು ನೀನು. ನಾನು ತಿಳಿಯದೇ ಮದುವೆಯಾಗಿಬಿಟ್ಟೆ! ಈ ಕಥೆಯೆಲ್ಲಾ ನನಗೆ ನಿಮ್ಮ ತಾಯಿ ಈ ಊರಿಗೆ ಬಂದು ನಿಂತ ಮೇಲೆ ತಿಳಿಯಿತು. ನಾನು ಅಂದಿನಿಂದ ಖೇದ ಪಡುತ್ತಿದ್ದೇನೆ ನೀನು ಅವರನ್ನಾದರೂ ತೊರೆಯಬೇಕು. ನನ್ನನ್ನಾದರೂ ತೊರೆಯಬೇಕು ಎರಡರಲ್ಲೊಂದು" ಎಂದನು.

ಶ್ಯಾಮಲೆ "ಹಾ! ಹಾ! ಸುಳ್ಳು ಸುಳ್ಳು!" ಎಂದು ಎರಡು ಕೈಗಳಲ್ಲಿ ಕಿವಿ ಮುಚ್ಚಿಕೊಂಡಳು. ಅವಳ ಕಣ್ಣಿಗೆ ಕತ್ತಲೆ ಕವಿಯಿತು. ಕಾಲು ಕುಸಿದು ಹೋದುವು. ದೊಪ್ಪನೆ ಬಿದ್ದು ಮೂರ್ಛೆ ಹೋದಳು.

ಅವಳನ್ನು ಅಲ್ಲೇ ಬಿಟ್ಟು ರಂಗರಾಯನು ಹೊರಟುಹೋದನು. ಸ್ವಲ್ಪ ಹೊತ್ತಾದ ಮೇಲೆ ಆತ ಈ ಕಡೆ ನೋಡದೆ ಆಫೀಸಿಗೂ ಹೊರಟು ಹೋದನು. ಅವನ ಮನಸ್ಸೆಲ್ಲಾ ಅಸ್ತವ್ಯಸ್ತವಾಗಿತ್ತು. ಆದರೂ ಯಾವುದೋ ಧೈರ್ಯ—ಮನಸ್ಸು "ಶ್ಯಾಮಲೆಗೆ ಒಳ್ಳೆಯ ಏಟು ಕೊಟ್ಟಿದ್ದೇನೆ. ಇನ್ನು ಅವಳು ಉಸಿರೆತ್ತುವಂತಿಲ್ಲ" ಎನ್ನುತ್ತಿತ್ತು.

ಎಷ್ಟೋ ಹೊತ್ತಿನ ಮೇಲೆ ಶ್ಯಾಮಲೆಗೆ ಎಚ್ಚರವಾಯಿತು. ಸುತ್ತಲೂ ನೋಡಿದಳು. ಕಣ್ಣಿಗೆ ಏನೂ ಕಾಣಲಿಲ್ಲ. ತಾಯಿಯನ್ನು ಜ್ಞಾಪಿಸಿಕೊಂಡಳು. "ಈ ಪಾಪಿಯನ್ನು ನಾನು ಮದುವೆಯಾದದ್ದು ತಪ್ಪು. ನಾನು ಹುಟ್ಟಿದಂದಿನಿಂದ ಕೇಳದ ಮಾತುಗಳನ್ನು ಇಂದು ಕೇಳಬೇಕಾಯಿತು. ಪರಮ ದ್ವೇಷಿಯಾದರೂ, ನರಘಾತುಕನಾದರೂ ಇಂಥಾ ಮಾತುಗಳನ್ನು ಆಡಲಾರ" ಎಂದುಕೊಂಡಳು. ಬಿಕ್ಕಿ ಬಂದ ಅಳುವು ನಿಂತುಹೋಯಿತು, ಕೋಪ ಬಂದಿತು! ಕಣ್ಣೀರು ತುಂಬಿದ್ದ ಕಣ್ಣುಗಳು ಅಗ್ನಿಜ್ವಾಲೆಯನ್ನು ಉಗುಳುವಂತೆ ಕೆಂಪಡರಿದುವು. ಶ್ಯಾಮಲೆಯು ಎದ್ದು ಕುಳಿತಳು. ತನ್ನ ಒಡವೆಗಳನ್ನೆಲ್ಲಾ ತೆಗೆದು ಪೆಟ್ಟಿಗೆಯಲ್ಲಿಟ್ಟಳು. ಸೀರೆಗಳನ್ನೆಲ್ಲಾ ಕಪಾಟದಲ್ಲಿಟ್ಟಳು. ಕುಳಿತುಕೊಂಡು ಒಂದು ಕಾಗದವನ್ನು ಬರೆದಳು.

" ಪಾಪಿ ! ಪಾಷಂಡ !

ತಾಯಿಗೋಸ್ಕರವಲ್ಲ. ನನಗೋಸ್ಕರವೇ ನಿನ್ನ ಮನೆಯನ್ನು ಪರಿತ್ಯಾಗ ಮಾಡಿದ್ದೇನೆ. ಪರಮ ಪವಿತ್ರಳಾದ ನನ್ನ ತಾಯಿಯ ಮೇಲೆ ಘೋರ ಅಪವಾದವನ್ನು ಬಾಯಿಂದ ಆಡಿದೆ. ಆ ಅಪರಾಧವು ಜನ್ಮಜನ್ಮಾಂತರಕ್ಕೂ ಮರೆಯುವುದಲ್ಲ. ನಿನ್ನ ನಗಗಳನ್ನೆಲ್ಲಾ ಇಲ್ಲೇ ಬಿಸಾಡಿದ್ದೇನೆ. ಅವೆಲ್ಲಾ ನನಗೆ ಕಲ್ಲುಮಣ್ಣುಗಳ ಸಮಾನ! ಬಟ್ಟೆಗಳನ್ನೆಲ್ಲಾ ಇಲ್ಲಿಯೇ ಬಿಟ್ಟಿದ್ದೇನೆ. ಅದೆಲ್ಲಾ ನಿನ್ನ ಪಾಪದ ಕವಚಗಳು. ನನ್ನನ್ನು ಮರೆತುಬಿಡು! ದೇವರು ನಿನಗೆ ತಕ್ಕ ಶಿಕ್ಷೆ ವಿಧಿಸುತ್ತಾನೆ. "

ಆ ಕಾಗದವನ್ನು ಲಕ್ಕೋಟೆಯಲ್ಲಿ ಹಾಕಿ ಹಾಸಿಗೆಯ ಮೇಲಿಟ್ಟಳು. ತನ್ನ ತಾಯಿಯ ಮನೆಯಲ್ಲಿ ಕೊಟ್ಟಿದ್ದ ಸೀರೆಯನ್ನು ಹುಡುಕಿ ಅದನ್ನು ಉಟ್ಟುಕೊಂಡಳು. ಪೆಟ್ಟಿಗೆಗೂ ಕೋಣೆಗೂ ಬೀಗ ಹಾಕಿ, ಮಹಡಿಯಿಂದ ಕೆಳಗಿಳಿದು ಬಂದು, ದೇವರ ಮನೆಯಲ್ಲಿ ಕುಳಿತಿದ್ದ ಭಾಗೀರಥಮ್ಮನರಿಗೆ ಪ್ರಣಾಮ ಮಾಡಿದಳು. " ತಾಯಿ! ನಾನು ನಮ್ಮ ಅಮ್ಮನ ಜೊತೆಯಲ್ಲಿ ಮದರಾಸಿಗೆ ಹೋಗುತ್ತೇನೆ. ಈ ಬೀಗದಕೈಗಳನ್ನು ನಿಮ್ಮ ಮಗನ ಕೈಗೆ ಕೊಟ್ಟುಬಿಡಿ " ಎಂದು ಹೇಳಿ ಹೊರಟುಹೋದಳು. ಭಾಗೀರಥಮ್ಮನವರಿಗೆ ಇದೊಂದೂ ಅರ್ಥವಾಗಲಿಲ್ಲ. ಶ್ಯಾಮಲೆಯು ಉತ್ತರವನ್ನು ನಿರೀಕ್ಷಿಸಲೂ ಇಲ್ಲ. ಸರಸರನೆ ಹಜಾರವನ್ನು ಸೇರಿ ಹೊರಬಾಗಿಲನ್ನು ದಾಟಿಬಿಟ್ಟಳು. ಭಾಗೀರಥಮ್ಮನು ಹಜಾರದ ಬಾಗಿಲಿಗೆ ಬಂದು, ಶ್ಯಾಮಲೆಯು ಕಣ್ಣಿಗೆ ಕಾಣುವವರೆಗೆ ನೋಡುತ್ತ ನಿಂತಿದ್ದಳು. ಆಕೆಗೆ ಏನೂ ತೋಚಲಿಲ್ಲ. ಬೀದಿಯ ಬಾಗಿಲಿನಲ್ಲಿಯೇ ಸುಮ್ಮನೆ ಕುಳಿತುಬಿಟ್ಟಳು.

ಸುಮಾರು ಮಧ್ಯಾಹ್ನ ಒಂದು ಗಂಟೆಯ ಸಮಯ! ರಂಗರಾಯನು ಮನೆಗೆ ಬಂದನು. ತಾಯಿಯು ಬಾಗಿಲಿನಲ್ಲಿ ಬೆಪ್ಪಾಗಿ ಕುಳಿತಿದ್ದುದು ಕಂಡು ಅವನಿಗೆ ಆಶ್ಚರ್ಯವಾಯಿತು.

" ಅಮ್ಮಾ ಇದೇನು ಇಲ್ಲಿ ಕುಳಿತಿದ್ದಿ ? "

" ಶ್ಯಾಮಲೆಯು ದುರ್ಧ್ಯಾನ ಹಿಡಿದವಳಂತೆ ಬಂದು ನನಗೆ ನಮಸ್ಕಾರ ಮಾಡಿ, ಮದರಾಸಿಗೆ ಹೋಗುತ್ತೇನೆಂದು ಹೇಳಿ ಹೊರಟುಹೋದಳು. ಅವಳ

ಹಿಂದೆಯೇ ನಾನು ಹುಚ್ಚಿಯಂತೆ ಬಂದೆ. ಇಲ್ಲಿಯೇ ಕುಳಿತುಬಿಟ್ಟೆ. ಈ ಬೀಗದ ಕೈಗಳನ್ನು ಕೊಟ್ಟು ಹೋಗಿದ್ದಾಳೆ. ನೋಡು!" ಎಂದು ಬೀಗದ ಕೈ ಗೊಂಚಲನ್ನು ರಂಗರಾಯನ ಕೈಗೆ ಕೊಟ್ಟಳು.

ರಂಗರಾಯನು ಬೀಗದ ಕೈ ಸರವನ್ನು ತೆಗೆದುಕೊಂಡು, ದಡದಡನೆ ಮಹಡಿಯ ಮೇಲೆ ಹೋದನು. ಮೊದಲು ಹಾಸಿಗೆಯ ಮೇಲಿದ್ದ ಲಕ್ಕೋಟೆಯನ್ನು ನೋಡಿದನು. ಎದೆ ಜಗ್ಗೆಂದಿತು. ಕಾಗದವನ್ನು ತೆಗೆದು ಓದಿಕೊಂಡನು. ಕೋಪ ಬಂದಿತು! ಮಹತ್ತರವಾದ ಕೋಪ! ಶ್ಯಾಮಲೆ ಎದುರಿಗೆ ಇದ್ದಿದ್ದರೆ, ಕೈಯ್ಯಲ್ಲಿ ಕತ್ತಿಯಿದ್ದಿದ್ದರೆ ಅವಳನ್ನು ತುಂಡರಿಸಿ ಚೂರು ಚೂರು ಮಾಡಿಬಿಡುವಂಥ ಕೋಪ. ಗಂಡನ ಅಧಿಕಾರವು ಅಷ್ಟು ದೊಡ್ಡದೆಂದು ಅವನ ಭಾವನೆ ಆದರೆ ಉತ್ತರಕ್ಷಣದಲ್ಲಿಯೇ ಕುಸಿದುಬಿದ್ದನು. "ಆಹಾ! ಶ್ಯಾಮಲೆಯಂತಹ ಸ್ತ್ರೀರತ್ನವು ಈ ಜಗತ್ತಿನಲ್ಲಿಲ್ಲ" ಎಂದುಕೊಂಡನು. ತಕ್ಷಣ ಅವಳ ತಾಯಿಯ ಜ್ಞಾಪಕ ಬಂದಿತು. "ನಾಗರಹಾವಿನ ಮಗು ಮನೋಹರ ಸರ್ಪ" ಎನ್ನಿಸಿತು.

## ೧೭

ಪಾರ್ವತಮ್ಮನವರನ್ನು ಮದರಾಸಿಗೆ ಕರೆದುಕೊಂಡು ಹೋದರು. ನಾರಾಯಣ, ತಾರಾ, ಶ್ಯಾಮಲಾ, ವಾಸು ಎಲ್ಲರೂ ಜೊತೆಯಲ್ಲಿ ಹೊರಟರು. ಮೈಸೂರಿನಿಂದ ಮಧ್ಯಾಹ್ನ ರೈಲು ಹೊರಟಿತು. ರೈಲು ಹೊರಟ ಮೇಲೆ ಪಾರ್ವತಮ್ಮನವರಿಗೆ ಸ್ವಲ್ಪ ಜೊಂಪು ಹತ್ತಿತು.

ನಾರಾಯಣನು "ಶ್ಯಾಮಲಾ! ನಿಮ್ಮ ಯಜಮಾನರು ನಿನ್ನ ಪ್ರಯಾಣಕ್ಕೆ ಒಪ್ಪಿದರೆ?" ಎಂದು ಕೇಳಿದನು.

ಶ್ಯಾಮಲೆ "ಬಂದುಬಿಟ್ಟಿದ್ದೇನಲ್ಲ!" ಎಂದು ನಕ್ಕಳು. ಆ ಮಾತು ಅಲ್ಲಿಗೆ ಮುಗಿಯಿತು.

ತಾರೆಯು "ಅತ್ತಿಗಮ್ಮಾ ನಿಮ್ಮ ಮನೆಯಲ್ಲಿ ನೀವು ಯಜಮಾನರೋ, ನಿಮ್ಮ ಯಜಮಾನರು ಯಜಮಾನರೋ?" ಎಂದು ಕೇಳಿದಳು.

ಶ್ಯಾಮಲೆಯು ನಗುತ್ತಾ "ನಿಮ್ಮ ಮನೆಯ ಹಾಗೆಯೇ!"

ನಾಣಿಯು "ನಮ್ಮ ಮನೆಯಲ್ಲಿ ತಾರೆಯೇ ಯಜಮಾನಿ. ನಾಳೆಯಿಂದ ಅವಳೇ ಅಡಿಗೆ ಮಾಡಬೇಕು. ಕಾಫಿ ಮಾಡಬೇಕು. ಎಲ್ಲಾ ಅವಳದೇ ಯಜಮಾನಿಕೆ" ಎಂದ.

ತಾರಾ "ನಾನು ಮಾಡಲಾರೆನೆಂದುಕೊಂಡಿದ್ದೀರೋ ನೋಡಿ! ನಾಳೆಯಿಂದ ನಿಮಗೇ ಗೊತ್ತಾಗುತ್ತದೆ" ಎಂದು ಉತ್ತರ ಕೊಟ್ಟಳು.

ವಾಸುವು "ಯಜಮಾನಿಕೆ ಯಾರದೋ! ಹೇಗೇ ಇರಲಿ. ಈ ಪ್ರಪಂಚದಲ್ಲಿ ಹೆಂಗಸರದೇ ಮೇಲುಕೈ" ಎಂದ.

ಅವರುಗಳು ಮಾರನೆಯ ಬೆಳಗ್ಗೆ ಮದರಾಸನ್ನು ತಲಪಿದರು. ನಾರಾಯಣನು ಸ್ಯಾನ್ ಥೋಂನಲ್ಲಿ ಮನೆ ಮಾಡಿದ್ದನು. ಆ ಮನೆ ಸಮುದ್ರ ತೀರ

ದಲ್ಲೇ ಇದ್ದಂತೆ ಇದ್ದಿತು. ಬಾಡಿಗೆ ಮೋಟಾರಿನಲ್ಲಿ ಪಾರ್ವತಮ್ಮನನ್ನು ಕರೆದು ಕೊಂಡು ಹೋದರು. ಆ ಮನೆಯಲ್ಲಿ ಮಂಚ ಕುರ್ಚಿ ಮುಂತಾದ ಸಕಲ ಪರಿ ಕರಣಗಳು ಇದ್ದುವು. ಹಜಾರದಲ್ಲಿ ಒಂದು ಮಂಚದ ಮೇಲೆ ಪಾರ್ವತಮ್ಮ ನನ್ನು ಮಲಗಿಸಿದರು. ವಾಸುವು ಹೊರಗೆ ಹೋಗಿ ಹಾಲು ಕೊಂಡು ತಂದನು. ಶ್ಯಾಮಲೆಯು ಅಡಿಗೆ ಮನೆಗೆ ಹೋಗಿ ಕಾಫಿ ಮಾಡಿ ತಂದಳು. ಪಾರ್ವತಮ್ಮ ನವರಿಗೆ ಸ್ವಲ್ಪ ಕಾಫಿ ಕುಡಿಸಿದರು. ಆ ದಿನವೆಲ್ಲಾ ವಿಶ್ರಾಂತಿಯಾಯಿತು. ಮಾರನೆಯ ದಿನ ಪಾರ್ವತಮ್ಮನನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು. ಆಸ್ಪತ್ರೆಯಲ್ಲಿಯೇ ಒಂದು ವಾರ ಇಡಬೇಕೆಂದು ಡಾಕ್ಟರುಗಳು ಹೇಳಿದರು.

ರಾತ್ರಿ ಆಸ್ಪತ್ರೆಯಿಂದ ಶ್ಯಾಮಲೆಯೂ ನಾರಾಯಣನೂ ಹಿಂದಿರು ಗಿದರು.

ನಾಣಿಯು "ಶ್ಯಾಮಲೆ! ಇದೇನು ಏಕವಸನೆಯಾಗಿ ಬಂದಿರುವೆ! ಮೈಮೇಲೆ ವಡವೆಗಳಿಲ್ಲ ಹಾಸಿಗೆಯಿಲ್ಲ. ಪೆಟ್ಟಿಗೆಯಿಲ್ಲ. ಇದೇನು ನಿನ್ನ ಕಥೆ. ಆಗಲೇ ಕೇಳಬೇಕೆಂದಿದ್ದೆ. ಬೇಡ, ಊರು ಸೇರಿದ ಮೇಲೆ ಕೇಳೋಣ ಎಂತ ಸುಮ್ಮನಾದೆ" ಎಂದನು.

ಶ್ಯಾಮಲೆಯು "ನಾನು ಪತಿಗೃಹವನ್ನು ಸಂಪೂರ್ಣವಾಗಿ ತ್ಯಜಿಸಿ ಬಿಟ್ಟು ಬಂದಿದ್ದೇನೆ. ಅವರ ಒಡವೆ ವಸ್ತುಗಳನ್ನೆಲ್ಲಾ ಅವರ ಮನೆಯಲ್ಲೇ ಬಿಟ್ಟು ಬಂದೆ! ಎಂದಳು "

"ಇದೇನು ಶ್ಯಾಮಲೆ! ಈ ಪ್ರಯಾಣದ ಮಾತಿಗಾಗಿ ಪತಿಗೃಹವನ್ನು ತ್ಯಜಿಸುತ್ತಾರೆಯೇ?"

"ಒಂದು ಮಾತಿಗಾಗಿ ಇಷ್ಟು ಅವಾಂತರವಾಗುತ್ತದೆಯೇ? ಹೊಗೆ ಯಾಡುತ್ತಲೇ ಇತ್ತು. ಈ ಒಂದು ಗಾಳಿಯಿಂದ ಬುಗ್ಗೆಂದು ಬಿಟ್ಟಿತು ಅಷ್ಟೆ."

"ಏಕೆ ಅವರ ಮನೆಯಲ್ಲಿ ನಿನಗೆ ಸುಖವಿರಲಿಲ್ಲವೇ?"

"ಒಡವೆ ವಸ್ತುಗಳು ಬೇಕಾದಷ್ಟಿದ್ದುವು. ಊಟ ತಿಂಡಿಗಳಿಗೇನೂ ಕಡಿಮೆಯಿರಲಿಲ್ಲ. ಆದರೆ ಆ ನನ್ನ ಗಂಡನಿಗೆ ಮನುಷ್ಯತ್ವವೇ ಇಲ್ಲ. ಅವ ನೊಬ್ಬ ಪಶು. ಪಾಪಿಷ್ಠ! ಪಾಷಂಡ. ಈ ಮದರಾಸಿಗೆ ಬರದಿದ್ದರೂ ನಾನು

ಅವನನ್ನು ತ್ಯಜಿಸುತ್ತಿದ್ದೆ. ಮನಸ್ಸನ್ನು ಸ್ಥಿರ ಮಾಡಿಕೊಳ್ಳುವುದಕ್ಕೆ ಇದೊಂದು ಅವಕಾಶ ಸಿಕ್ಕಿತು. ಅಷ್ಟೆ! ನೀನು ಇದನ್ನು ತಾರೆಗೂ ವಾಸುವಿಗೂ ಹೇಳಬೇಡ!"

"ನಾನೇಕೆ ಹೇಳುತ್ತೇನೆ! ನಾವು ಮದರಾಸಿಗೆ ಹೊರಟ ದಿನವೇ ನನಗೆ ಸೂಕ್ಷ್ಮವಾಗಿ ಗೊತ್ತಾಯಿತು. ಆದರೆ ಅವನಿಗೆ ನಿನ್ನಂಥಾ ಹೆಂಡತಿ ಸಿಕ್ಕುತ್ತಾಳೆಯೆ? ಅವನೇ ನಿನ್ನನ್ನು ಹಿಂಬಾಲಿಸಿ ಬರುತ್ತಾನೆ."

"ಬಂದರೆ ನೀನು ನನ್ನನ್ನು ಅವನೊಡನೆ ಕಳಿಸುತ್ತೀಯಾ?"

ಆಗ ನಾಣಿಯು ಮಾತನಾಡಲಿಲ್ಲ. ಅವನಿಗೆ ಅದೊಂದು ಸಮಸ್ಯೆಯಾಗಿ ಪರಿಣಮಿಸಿತು.

ಹತ್ತು ದಿನಗಳು ಕಳೆದುವು. ಆಸ್ಪತ್ರೆಯಲ್ಲಿ ಹತ್ತುದಿನಗಳೂ ಎಕ್ಸ್‌ರೇ ಚಿಕಿತ್ಸೆಯಾಯಿತು. ಪುನಃ ಹತ್ತು ದಿನಗಳು ಬಿಟ್ಟು ಬಂದು ನೋಡಬೇಕೆಂದು ಡಾಕ್ಟರು ಹೇಳಿದರು. ಪಾರ್ವತಮ್ಮನವರನ್ನು ಮನೆಗೆ ಕರೆತಂದುದಾಯಿತು.

ಆಸ್ಪತ್ರೆಗೆ ಹೋಗಿ ಪ್ರತಿದಿನವೂ ಡಾಕ್ಟರಿಗೆ ದೇಹಸ್ಥಿತಿ ಹೇಳಿ ಯಾರಾದರೂ ಔಷಧಿ ತರಬೇಕಾಗಿತ್ತು. ಶ್ಯಾಮಲೆಯು ಔಷಧಿ ತರುವುದಕ್ಕೆ ಹೋಗಿದ್ದಳು. ವಾಸುವೂ ಅವಳ ಜೊತೆಯಲ್ಲಿ ಹೋಗಿದ್ದನು.

ಡಾಕ್ಟರು ರೋಗಿಯ ಯೋಗಕ್ಷೇಮವನ್ನೆಲ್ಲಾ ವಿಚಾರಿಸಿ ಶ್ಯಾಮಲೆಯನ್ನು ಕುರಿತು "ಆಕೆಯು ನಿಮಗೇನಾಗಬೇಕು?" ಎಂದು ಕೇಳಿದರು.

"ನಮ್ಮ ತಾಯಿ."

"ಸರಿ! ಸರಿ! ಅದೇ ಹೋಲಿಕೆ. ಇವರು ನಿಮ್ಮ ಯಜಮಾನರೋ?" ಎಂದರು. ಶ್ಯಾಮಲೆಯ ಮುಖವು ಕೆಂಪಾಯಿತು. ಅವಳು ಮೃದುವಾದ ನಗುವನ್ನು ನಕ್ಕು ತಲೆ ಅಲ್ಲಾಡಿಸಿದಳು.

ಡಾಕ್ಟರು ಅದನ್ನು ಗಮನಿಸಲಿಲ್ಲ. ಔಷಧಿಯನ್ನು ಬರೆದುಕೊಟ್ಟು ಹೊರಟುಹೋದರು. ಶ್ಯಾಮಲೆಯ ಮನಸ್ಸಿನಲ್ಲಿ 'ನಿಮ್ಮ ಯಜಮಾನರೋ' ಎಂಬ ಮಾತು ಆಗಾಗ ಬಂದು ಹೋಗುತ್ತಿತ್ತು.

ಡಾಕ್ಟರ ಮಾತು ವಾಸುವನ್ನೂ ಕಲಕದೇ ಇರಲಿಲ್ಲ. ಮನಸ್ಸಿನಲ್ಲಿ ಹಾಗಾಗಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು, ಎಂದುಕೊಂಡನು.

ಶ್ಯಾಮಲೆಯು “ವಾಸು ಆ ಡಾಕ್ಟರು ಹೇಳಿದ್ದು ನೋಡಿದೆಯಾ?” ಎಂದಳು.

ವಾಸುವು ನಕ್ಕು ಕೇಳಿದನು: “ಅವರೇಕೆ ಹಾಗೆ ಭಾವಿಸಿದರು?”

“ನೋಡು ವಾಸು! ಈ ಸಮಾಜವೇ ಹೀಗೆ. ಎಷ್ಟು ಓದಿದ್ದರೇನು? ಎಷ್ಟು ದೊಡ್ಡ ಮನಸ್ಯರಾದರೇನು? ಸಮವಯಸ್ಸಿನ ಗಂಡು ಹೆಣ್ಣುಗಳನ್ನು ನೋಡಿದರೆ ಜೋಡಿ ಕಟ್ಟಿಬಿಡುತ್ತಾರೆ.”

“ಅದು ಸಹಜವಾಗಿಯೇ ಇದೆ.”

“ಅದೇ ಈ ಪ್ರಪಂಚದ ಎಷ್ಟೋ ಅನರ್ಥಗಳಿಗೆ ಕಾರಣ. ನೀನೂ ಸಹಜವೆನ್ನುತ್ತೀಯೆ. ನೀನು ನನ್ನ ಇನ್ನೊಬ್ಬ ಸಹೋದರನೆಂದುಕೊಳ್ಳಬಾರದೆ, ಸ್ನೇಹಿತರೆಂದುಕೊಳ್ಳಬಾರದೇ.”

“ಅದೇನೋ ನನಗೂ ಗೊತ್ತಾಗುವುದಿಲ್ಲ. ಮೊದಲು ಯೌವನದಲ್ಲಿ ಪತಿ–ಪತ್ನಿಯರ ಸಂಬಂಧವೇ ಕಣ್ಣಿಗೆ ಕಾಣುತ್ತದೆ, ಶ್ಯಾಮಲಾ. ಆಗ ನಿನಗೇಕೆ ಅಳುಕಿತು. ನೀನೇಕೆ ನಮ್ಮ ಅಣ್ಣನೆಂದು ಹೇಳಲಿಲ್ಲ?”

“ನನಗೆ ಆ ಕ್ಷಣ ಏನೂ ತೋರಲಿಲ್ಲ, ನಾಚಿಕೆಯಾಯಿತು.”

“ಹೌದು! ಒಂದೊಂದು ಬಾರಿ ನಾಚಿಕೆಯಾಗುತ್ತದೆ. ನೀನು ಮೈಸೂರಿಗೆ ಬಂದಾಗಿನಿಂದ ನಾನು ನಿನ್ನನ್ನು ತಾರೆಯಂತೆಯೇ ಭಾವಿಸಿದ್ದೇನೆ. ಆದರೂ ಒಂದೊಂದು ಬಾರಿ ನಾಚಿಕೆಯಾಗುತ್ತದೆ. ಅದೇಕೋ ನನಗೇ ಗೊತ್ತಿಲ್ಲ.”

“ನಾಚುವುದು ಮಾನವ ಸ್ವಭಾವ. ಸ್ತ್ರೀ ಪುರುಷರಿಗೆ ನಾಚಿಕೆ ಇರುವುದು ಭೂಷಣ.”

“ಶ್ಯಾಮಲೆ! ನೀನು ನಿನ್ನ ಸಂಸಾರದಲ್ಲಿ ಸುಖವಾಗಿರುವೆಯಾ?”

“ಇದೇನು ವಾಸು! ಸುಖ–ಸುಖ ಎನ್ನುವುದು ನನಗೆ ಅರ್ಥವಾಗುವುದೇ ಇಲ್ಲ. ಪ್ರತಿಯೊಂದು ಸನ್ನಿವೇಶದಲ್ಲಿಯೂ ಸರಿಮಾಡಿಕೊಂಡು ಹೋಗುತ್ತಿರುವುದು. ಹೀಗೆಯೇ ಜೀವನವು ಕಳೆಯುವುದು. ಎಲ್ಲರದೂ ಅಷ್ಟೆ.”

ಮನೆ ಹತ್ತಿರ ಬಂತು. ವಾಸುವಿನ ಮನಸ್ಸು ಕಲಕಿ ಹೋಗಿತ್ತು. ಅವನಿಗೆ ನಾಲ್ಕು ಐದು ವರ್ಷಗಳಿಂದ ಎಷ್ಟೋ ಹೆಣ್ಣುಗಳು ಬಂದಿದ್ದುವು. ಅವನು

ಒಂದನ್ನೂ ಒಪ್ಪಿರಲಿಲ್ಲ; ಹೆಣ್ಣನ್ನೇಕೆ, ಮದುವೆಗೇ ಒಪ್ಪಿರಲಿಲ್ಲ. ಅವನು ಮದುವೆಗೆ ಒಪ್ಪದಿರುವುದು ಎಲ್ಲರಿಗೂ ಕೊರತೆ. ಡಾಕ್ಟರು 'ಇವರು ನಿಮ್ಮ ಗಂಡನೇ' ಎಂದು ಕೇಳಿದ ಮಾತುಗಳು ಸಮುದ್ರದ ಅಲೆಗಳಂತೆ ಅವನ ಮನಸ್ಸಿನ ಮೇಲೆ ಅಪ್ಪಳಿಸುತ್ತಿದ್ದುವು. "ಈ ಶ್ಯಾಮಲೆಯು ನನ್ನ ಹೆಂಡತಿಯಾಗಿದ್ದರೆ?" ಎಂದುಕೊಂಡನು. ಶ್ಯಾಮಲೆಯ ಮನಸ್ಸು ಸುಖಮಯವಾಗಿಲ್ಲ. ಆ ರಂಗರಾಯನನ್ನು ಮೆಚ್ಚಿ ಅವಳು ಮದುವೆಯಾಗಲಿಲ್ಲ. ಮದುವೆಯಾದ ಮೇಲೆಯೂ ಮೆಚ್ಚಲಿಲ್ಲ. ಇದೊಂದು ಇಜ್ಜೋಡಿ! ಎಲ್ಲ ಸಮಾಜಗಳಲ್ಲೂ ಇದು ಇದ್ದೇ ಇದೆ. ಹೆಣ್ಣು ಒಡವೆ ವಸ್ತುಗಳನ್ನೂ ಐಶ್ವರ್ಯವನ್ನೂ ಮೋಹಿಸಿ ಮೆರೆಯುವುದಾದರೆ ಇಂಥಾ ವಿವಾಹಗಳಿಂದ ಅವರು ಸುಖಿಗಳಾಗುತ್ತಾರೆ. ಅಂಥಾ ಐಶ್ವರ್ಯಮೋಹಿತಳಾದ ಹೆಂಡತಿಯನ್ನು ನೋಡಿ ನೋಡಿ ಪುರುಷರೂ ಸಂತೋಷಪಡುತ್ತಾರೆ. ಪ್ರೇಮವನ್ನು ಆರಾಧಿಸುವವರಾದರೆ ಆ ಪತಿ-ಪತ್ನಿಯರು ಸುಖಿಗಳಾಗುವುದಿಲ್ಲ. ಅದು ದೈವೀ ಶಕ್ತಿ ಎಂದುಕೊಂಡನು. ಹಾಗೆಯೇ ವಾಸುವಿಗೆ ನಿದ್ರೆ ಹತ್ತಿತು.

ಪಾರ್ವತಮ್ಮನ ಚಿಕಿತ್ಸೆ ಮುಗಿಯಿತು. ಸ್ವಲ್ಪ ಗುಣಮುಖವಾಯಿತು. ಡಾಕ್ಟರು ಊರಿಗೆ ಹೋಗಬಹುದೆಂದು ಅಪ್ಪಣೆ ಕೊಟ್ಟು, ನಾರಾಯಣನಿಗೆ ಹೇಳಿದರು. "ನಾವು ಚಿಕಿತ್ಸೆ ಮಾಡಿದ್ದೇವೆ. ಇದೊಂದು ಹೊಸ ಚಿಕಿತ್ಸೆ. ನಿಮ್ಮ ತಾಯಿಯು ಆಪರೇಶನ್ ತಡೆದುಕೊಳ್ಳಲಾರರು ಪುನಃ ಏನಾದರೂ ಕೆರಳಿದರೆ ಇಲ್ಲಿಗೆ ಕರೆತನ್ನಿ, ನೋಡೋಣ" ಎಂದು ಹೇಳಿದರು.

ಪಾರ್ವತಮ್ಮನನ್ನು ಕರೆದುಕೊಂಡು ಮೈಸೂರಿಗೆ ಎಲ್ಲರೂ ಹಿಂದಿರುಗಿದರು.

ಶ್ಯಾಮಲೆಯು ಅಣ್ಣನ ಮನೆಯಲ್ಲೇ ಇದ್ದಳು. ಅವಳು ತನಗೂ ರಂಗರಾಯನಿಗೂ ಸಂಬಂಧವಿಲ್ಲವೆಂದು ನಾಣಿಯೊಡನೆ ಸ್ಪಷ್ಟವಾಗಿ ಹೇಳಿದ್ದಳು. ನಾಣಿಯೂ ಅದನ್ನು ಒಪ್ಪಿಕೊಂಡಿದ್ದನು.

೧೮

ರಂಗರಾಯನು ಬಹಳ ಪ್ರತಿಷ್ಠೆಯ ಮನುಷ್ಯ. ಅವನು "ಶ್ಯಾಮಲೆ ಯಂಥಾ ನಾಲ್ಕು ಹುಡುಗಿಯರಾದರೂ ಬರುತ್ತಾರೆ. ನನಗೇನು ಕಡಿಮೆ!" ಎಂದುಕೊಂಡನು. ಅಲ್ಲಲ್ಲಿ ಹುಡುಕಿಸಿದನು. ಯಾವುದೂ ಸರಿಬೀಳಲಿಲ್ಲ. ಯಾರೂ ಹೆಣ್ಣು ಕೊಡಲು ಒಪ್ಪಲಿಲ್ಲ. ಅವನಿಗೆ ಜೀವನವು ಬೇಸರವಾಗುತ್ತಾ ಬಂದಿತು. ಪುನಃ ಶ್ಯಾಮಲೆಯ ಕಡೆಗೆ ಮನಸ್ಸು ಹೋಯಿತು. 'ಶ್ಯಾಮಲೆ ಏನೂ ತಪ್ಪುಮಾಡದೆ ನಾಲ್ಕು ವರ್ಷ ನಮ್ಮ ಮನೆಯಲ್ಲಿರಲಿಲ್ಲವೇ? ಬಹಳ ಮೂರ್ಖ ಹುಡುಗಿ ಅಷ್ಟೆ! ಘನ ಗಾಂಭೀರ್ಯಗಳಲ್ಲಿ ಅವಳ ಸಮಾನ ಯಾರೂ ಇಲ್ಲ. ಆ ಹೆಣ್ಣಿನ ತಾಯಿ ಸತ್ತು ಹೋದರೆ ಶ್ಯಾಮಲೆ ಪುನಃ ನಮ್ಮ ಮನೆಗೆ ಬಂದು ಸೇರುತ್ತಾಳೆ. ಆ ಸಹವಾಸಗಳು ಚೆನ್ನಾಗಿಲ್ಲ. ಆ ತಾಯಿ ನಡತೆ ವಂತಳಾಗಿದ್ದಿದ್ದರೆ ಮಗಳನ್ನು ಗಂಡನ ಮನೆಗೆ ಹೋಗು, ಎಂದು ಕಳುಹಿಸುತ್ತಿ ರಲಿಲ್ಲವೇ?' ಎಂದುಕೊಳ್ಳುತ್ತಿದ್ದನು.

ಹೆಂಡತಿ ಬಿಟ್ಟುಬಿಟ್ಟಿದ್ದಾಳೆಂದು ಊರೆಲ್ಲಾ ಪುಕಾರಾಗಿತ್ತು. ಜನರು ಅದರ ಕಾರಣವನ್ನು ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ರಂಗ ರಾಯನಿಗೆ ವ್ಯಾಪಾರದಲ್ಲಿಯೂ ಮನಸ್ಸಿಲ್ಲದೇ ಹೋಯಿತು. ಅವನು ಇಷ್ಟೊಂದು ಐಶ್ವರ್ಯವನ್ನಿಟ್ಟುಕೊಂಡು ಏನು ಮಾಡಲೆಂದು ಆಲೋಚಿಸತೊಡ ಗಿದನು. ಅವನು ಸರ್ ಚೆಟ್ಟಿರ ಆಶ್ರಯ ಮಾಡಿದ್ದನು. ಸರ್ ಚೆಟ್ಟಿ ರೆಂದರೆ ಮಹಾರಾಜರ ಆಪ್ತ ಸಚಿವರು ಮಾತ್ರವಲ್ಲ. ಸೀಮೆಯ ಸರ್ವಾಧಿ ಕಾರಿಯಂತಿದ್ದರು. ಅವರ ಹತ್ತಿರ ಹೋಗಿ ಬರುವುದೇ ರಂಗರಾಯನಿಗೊಂದು ಗೌರವ. ಅನೇಕರು ಹಾಗೆಯೇ ಭಾವಿಸುತ್ತಿದ್ದರು. ಸರ್ಕಾರದಿಂದ ಏನು

ಕೆಲಸ ಮಾಡಬೇಕಾದರೂ ಸರ್. ಚೆಟ್ಟರು ಒಂದು ಮಾತು ಹೇಳಿ ಬಿಟ್ಟರೆ ಮುಗಿಯಿತು. ಕೊಟ್ಟರೆ ವರ! ಇಟ್ಟರೆ ಶಾಪ! ಶ್ರೀ ಚೆಟ್ಟರವರ ಸ್ನೇಹದಿಂದ ರಂಗರಾಯರು ಏನಾದರೂ ಧರ್ಮ ಮಾಡಬೇಕೆಂದೂ ಬಿರುದು ಪಡೆಯ ಬೇಕೆಂದೂ ಆಲೋಚಿಸ ತೊಡಗಿದನು. ಚೆಟ್ಟರವರು "ಒಂದು ಲಕ್ಷ ರೂಪಾಯಿಗಳ ಧರ್ಮ ಮಾಡಿ. ನಿಮಗೊಂದು ದೊಡ್ಡ ಬಿರುದು ಕೊಡಿಸು ತ್ತೇನೆ" ಎಂದು ಹೇಳುತ್ತಿದ್ದರು. ರಂಗರಾಯನು "ನೀವು ಹೇಳಿದ ಧರ್ಮ ಮಾಡುತ್ತೇನೆ" ಎಂದು ಹೇಳುತ್ತಿದ್ದನು "ಇರಲಿ! ಸಮಯ ನೋಡಿ ಹೇಳು ತ್ತೇನೆ" ಎಂದು ಚೆಟ್ಟರವರೂ ಹೇಳುತ್ತಿದ್ದರು. ರಂಗರಾಯನು ಆಗಲೇ ಬಿರುದು ಬಂದಂತೆಯೇ ಜಂಭದಿಂದ ಓಡಾಡುತ್ತಿದ್ದನು. ಚೆಟ್ಟರಲ್ಲಿ ಶಿಫಾರಸು ಮಾಡಿ ಎಷ್ಟೋ ಜನರಿಗೆ ಸಹಾಯ ಮಾಡಿದ್ದನು. ಒಂದೆರಡು ಬಾರಿ ರಂಗ ರಾಯನಿಗೆ ಮಹಾರಾಜರವರ ಭೇಟಿಯೂ ಆಗುತ್ತಿತ್ತು.

ಅಷ್ಟರಲ್ಲಿ ಒಂದು ದೊಡ್ಡ ಪ್ರಕರಣವು ಬಂತು. ಒಬ್ಬ ದೊಡ್ಡ ವ್ಯಾಪಾ ರಿಗಳ ಹತ್ತಿರ ಒಂದು ಸಾವಿರ ಟನ್ ಸೀಮೇಯೆಣ್ಣೆ ದಾಸ್ತಾನು ಮಾಡಲ್ಪಟ್ಟಿದೆ ಎಂದೂ ಊರೆಲ್ಲಾ ವರ್ತಮಾನ ಹಬ್ಬಿತು. ಅಧಿಕಾರಿಗಳು ಮೌನವಾಗಿರಲು ಸಾಧ್ಯವಾಗಲಿಲ್ಲ. ಮಾರನೆಯ ದಿನ ಅವರು ಬಂದು ನೋಡುವ ಸಮ ಯಕ್ಕೆ ಅದೆಲ್ಲಾ ಮಾಯವಾಗಿತ್ತು. ರಂಗರಾಯನು ಅಷ್ಟರೊಳಗಾಗಿ ಸಾವಿ ರಾರು ರೂಪಾಯಿಗಳ ವೆಚ್ಚ ಮಾಡಿಬಿಟ್ಟಿದ್ದನು. ತನ್ನ ಬೀಡಿನ ದಾರಿಯಲ್ಲಿ ಒಂದು ದಿನ ಲಾರಿ ಸಿಕ್ಕಿ ಬಿದ್ದಿತು. ಈ ತಕರಾರಿನಿಂದ ಬಿಡಿಸಿಕೊಳ್ಳಲು ರಂಗರಾಯನಿಗೆ ಮೂರು ತಿಂಗಳ ಕಾಲ ಬೇಕಾಯಿತು; ಹತ್ತು ಸಹಸ್ರ ರೂಪಾಯಿಗಳು ಖರ್ಚಾಯಿತು.

ರಂಗರಾಯನಿಗೆ ಸರಕಾರದ ಮೇಲೂ, ಅಧಿಕಾರಿಗಳ ಮೇಲೂ ದ್ವೇಷ ಹೆಚ್ಚಿ ಹೋಗಿತ್ತು.

ಸರ್ ಚೆಟ್ಟರು ಒಂದು ದಿನ ಹೇಳಿ ಕಳುಹಿಸಿದರು. ರಂಗರಾಯನು ಹೋಗಿ ಭೇಟಿ ಮಾಡಿದನು. ಸರ್ ಚೆಟ್ಟರವರು ಆತನನ್ನು ಬಹಳ ಗೌರವ ದಿಂದ ಕಂಡರು. "ಏನು ರಂಗರಾಯರೇ! ಬಹಳ ದಿನಗಳಿಂದಲೂ ಕಾಣ

ಲಿಲ್ಲ. ಹುಜೂರರಲ್ಲಿ ಅರಿಕೆ ಮಾಡಿ ಟೈಟಲ್ ವಿಷಯ ಗೊತ್ತುಮಾಡಿದ್ದೆ."

"ಟೈಟಲ್ ನಮ್ಮಂಥವರಿಗೇಕೆ ಸ್ವಾಮೀ. ಈ ರಾಜ್ಯದಲ್ಲಿ ನಮ್ಮಂಥವರು ಇರಬಾರದು. ಮರ್ಯಾದೆಯಿಲ್ಲ. ಕಾಂಗ್ರೆಸ್ಸಿನವರೇ ಸರಿ ನಿಮಗೆ!"

"ಇದೇನರೀ ರಂಗರಾಯರೇ, ಏನೇನೋ ಮಾತನಾಡುತ್ತೀರಿ!"

"ಮತ್ತೇನು ಸ್ವಾಮಿ! ಅಧಿಕಾರಿಗಳು ಹೊಟ್ಟೆಕಿಚ್ಚಿನಿಂದ ನನಗಿದ್ದ ಗೌರವ ಹಾಳುಮಾಡಬೇಕೆಂದು ಸುಳ್ಳು ಕೇಸು ತಂದರು. ಅವರಿಗೆ ತುಂಬಾ ಲಂಚ ಕೊಟ್ಟಿದ್ದರೆ ಎಲ್ಲಾ ಅಲ್ಲೇ ಹಷಪ್ ಆಗಿ ಹೋಗುತ್ತಿತ್ತು. ತಮ್ಮಲ್ಲಿ ಬಂದು, ಗೌರವ ಉಳಿಸಿ, ಎಂದು ಕೇಳಿಕೊಂಡೆ. ತಾವು ಎಷ್ಟೊಂದು ನಿಕೃಷ್ಟವಾಗಿ ತಳ್ಳಿ ಬಿಟ್ಟಿರಿ."

"ಇದೆಲ್ಲಾ ನನಗೇಕರಿ ಹೇಳುತ್ತೀರಿ?"

"ಕಾರಣವಿದೆ ಸಾರ್. ನಾನು ತಮ್ಮ ಕಡೆಯವನೆಂದೇ ಈ ಅಧಿಕಾರಿಗಳು ನನಗೆ ಈ ಅವಮಾನ ಮಾಡಿದರು. ತಾವೇ ಯೋಚನೆ ಮಾಡಿ. ಬೆಂಗಳೂರಿನಲ್ಲಿ ನಮ್ಮ ರೇಷನ್ ಕಾರ್ಡು ವಿಷಯ ಅಸೆಂಬ್ಲಿಗೆ ಕೂಡಾ ಬರುವಂತೆ ಮಾಡಿದವರು ಈ ಅಧಿಕಾರಿಗಳೇ ಅಲ್ಲವೇ?"

"ಕಾನೂನಿಗೆ ಅಡ್ಡಿಪಡಿಸುವುದು ಧರ್ಮವಲ್ಲ. ವೃಥಾ ತಪ್ಪುಮಾಡಿದ ಅಧಿಕಾರಿಗಳು ಅವರೇ ಅನುಭವಿಸುತ್ತಾರೆ."

"ಏನೋ ಅದೆಲ್ಲಾ ದೊಡ್ಡ ವಿಷಯ ಸ್ವಾಮೀ. ನಾನು ದೂರವಿರಲಿ ಹತ್ತಿರವಿರಲಿ ತಮ್ಮಲ್ಲಿ ಗೌರವವುಳ್ಳವನು. ಇನ್ನು ಈ ರಾಜ್ಯದಲ್ಲಿ ಇರಬಾರದು. ನನ್ನ ಮನಸ್ಸಿನಲ್ಲಿದ್ದ ದುಃಖ ಹೇಳಿಕೊಂಡು ಬಿಟ್ಟೆ. ಅಪ್ಪಣೆ ಕೊಡಿ ಸ್ವಾಮೀ ಮತ್ತೊಂದು ಬಾರಿ ತಮ್ಮ ಭೇಟಿ ಮಾಡುತ್ತೇನೆ" ಎಂದು ಹೇಳಿ ಹೊರಟು ಬಂದರು. ಅಲ್ಲಿಗೆ ರಂಗರಾಯನ ದೊಡ್ಡಸ್ಥಿಕೆ ಮುಗಿಯಿತು.

ಮನೆಗೆ ಬಂದು ಕಾಂಗ್ರೆಸ್ಸಿಗೇ ಸೇರಿ ಬಿಡಲೇ ಎಂದು ಆಲೋಚಿಸ ತೊಡಗಿದನು. ಸ್ವಲ್ಪ ಸ್ವಲ್ಪವಾಗಿ ಕಾಂಗ್ರೆಸ್ಸಿನವರ ಸ್ನೇಹಕ್ಕೆ ಆರಂಭಿಸಿದನು. ಅವನು ಕಾಂಗ್ರೆಸ್ಸಿಗೆ ಸೇರುವುದಕ್ಕೇನೂ ಅಡ್ಡಿ ಇರಲಿಲ್ಲ ಆದರೆ ಗಂಗಾಧರ

ರಾಯನ ಮೇಲೆ ದ್ವೇಷವಿತ್ತು. ನನ್ನ ಸಂಸಾರವನ್ನು ಹಾಳು ಮಾಡಿದವನೇ ಗಂಗಾಧರರಾಯ! ಅವನು ಕಾಂಗ್ರೆಸ್ಸಿನಲ್ಲಿ ಪ್ರಧಾನ ವ್ಯಕ್ತಿ. ಆ ಕಾಂಗ್ರೆಸ್ಸಿಗೆ ನಾನು ಸೇರಿದರೆ ದೇವರು ಮೆಚ್ಚುತ್ತಾನೆಯೇ?" ಎಂದುಕೊಳ್ಳುತ್ತಿದ್ದ.

ನಾರಾಯಣನ ಮನೆಯವರೆಲ್ಲಾ ಊರಿಗೆ ಬಂದರೆಂದು ರಂಗರಾಯನಿಗೆ ತಿಳಿಯಿತು. ಇನ್ನೇನು ಶ್ಯಾಮಲೆಯೂ ಮನೆಗೆ ಬರುತ್ತಾಳೆ ಎಂಬ ಆಲೋಚನೆ ಹೊಳೆಯಿತು. "ಅವಳು ಗರತಿಯಾಗಿದ್ದರೆ ಈಗ ಬರಲೇ ಬೇಕು. ಮದರಾಸು ಪ್ರಯಾಣದ ವಿಷಯದಲ್ಲಿ ಅವಳ ಹಠವೇ ಗೆದ್ದಿದೆ. ತಾಯಿಗೆ ಆಪತ್ತಿನ ಖಾಯಿಲೆ ಎಂದರೆ ಹೋಗದೇ ಇರಲಾದೀತೆ? ಈಗ ಯಥಾಪ್ರಕಾರ ಮನೆಗೆ ಬರುವುದೂ ಸಂಭಾವಿತರ ಸಂಪ್ರದಾಯ! ಬರಬಹುದು ನೋಡೋಣ!" ಎಂದುಕೊಂಡನು.

ಒಂದೆರಡು ವಾರ ನೋಡಿದನು. ಬರುವ ಸೂಚನೆಯೇ ಕಾಣಿಸಲಿಲ್ಲ. "ನಾನೇ ಒಂದು ಬಾರಿ ಹೋಗಿ ಬರಬಾರದೇಕೆ" ಎಂದು ಯೋಚಿಸಿದನು. ಮನಸ್ಸು ಹಿಂದೆಗೆಯಿತು. ಹೀಗೆ ಎರಡು ತಿಂಗಳುಗಳು ಕಳೆದುವು.

ಪಾರ್ವತಮ್ಮನವರಿಗೆ ಪುನಃ ಖಾಯಿಲೆಯು ಹೆಚ್ಚಾಯಿತು. ಡಾಕ್ಟರ್ ಸುಬ್ಬರಾಯರನ್ನು ಕರೆತಂದು ಔಷಧಿ ಕೊಡಿಸಿದರು. ರೋಗವು ದಿನ ದಿನಕ್ಕೂ ವಿಷಮಿಸುತ್ತಾ ಬಂದಿತು. ನಾರಾಯಣನು ಪುನಃ ಮದರಾಸಿಗೆ ಕರೆದುಕೊಂಡು ಹೋಗುವ ಯೋಚನೆ ಮಾಡುತ್ತಿದ್ದನು.

ಅಷ್ಟರಲ್ಲಿ ಮೈಸೂರಿನ ಸತ್ಯಾಗ್ರಹವು ಬಂದು ಬಿಟ್ಟಿತು. ನಾರಾಯಣನೂ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲಿಗೆ ಹೊರಟು ಹೋದನು. ಎಲ್ಲ ಭಾರವೂ ಶ್ಯಾಮಲೆ ಮತ್ತು ತಾರೆಯರ ಮೇಲೆಯೇ ಬಿತ್ತು. ಈ ಬಾರಿ ಬಲು ಕಷ್ಟವಾಗಿತ್ತು. ಇಬ್ಬರು ಆಸ್ಪತ್ರೆಯ ದಾದಿಯರನ್ನೇ ನೇಮಿಸಿದ್ದರು. ತಾರೆ ಮತ್ತು ಶ್ಯಾಮಲೆಯರು ರಾತ್ರಿ ಹಗಲೂ ಉಪಚರಿಸುತ್ತಿದ್ದರು. ಅಲ್ಲಿಗೇ ಲೇಡೀ ಡಾಕ್ಟರು ಬಂದು ನೋಡುತ್ತಿದ್ದಾಗ್ಯೂ ಡಾಕ್ಟರ್ ಸುಬ್ಬರಾಯರದೇ

ಚಿಕಿತ್ಸೆ. ದಿನವೂ ಮೂರು ನಾಲ್ಕು ಬಾರಿ ಇಂಜಕ್ಷನ್ ಕೊಡಬೇಕಾಗುತ್ತಿತ್ತು. ಪ್ರತಿಯೊಂದು ಬಾರಿಯೂ ಡಾಕ್ಟರು ಸ್ವತಃ ಬಂದು ಇಂಜಕ್ಷನ್ ಕೊಡುತ್ತಿದ್ದರು. ಅವರ ಶ್ರದ್ಧೆ ಮತ್ತು ಉಪಕಾರ ಸ್ಮರಣೆಗಳು ಶ್ಯಾಮಲೆಯ ಮನಸ್ಸಿನ ದುಗುಡವನ್ನೆಲ್ಲಾ ತೆಗೆದು ಹಾಕುತ್ತಿತ್ತು. ಶ್ಯಾಮಲೆಯು ಅತ್ಯಂತ ಸರಳ ಭಾವನೆಯಿಂದ ವರ್ತಿಸುತ್ತಿದ್ದಳು. ಅತ್ತಿಗೆ ತಾರೆಯೂ ಮಾಡುತ್ತಿದ್ದ ಸೇವೆಯು ಎಲ್ಲರನ್ನೂ ಆಶ್ಚರ್ಯಗೊಳಿಸುತ್ತಿತ್ತು. ಗಂಗಾಧರರಾಯನೂ ಜೈಲಿಗೆ ಹೊರಟು ಹೋಗಿದ್ದನು. ಎರಡು ಮನೆಗಳ ಯಾಜಮಾನ್ಯವೂ ವಾಸುವಿನದೇ ಆಗಿತ್ತು.

ಇಂದೋ ನಾಳೆಯೋ ಪಾರ್ವತಮ್ಮನು ಪರಲೋಕಯಾತ್ರೆ ಮಾಡುವರೆಂದು ವಾಸುವಿಗೆ ಗೊತ್ತಿತ್ತು. ಅಷ್ಟು ವಿಷಮಿಸಿತ್ತು ಅವರ ಕಾಯಿಲೆ. ಅವನು ಎಲ್ಲದಕ್ಕೂ ಸಿದ್ಧವಾಗಿದ್ದನು. ಆ ದಿನ ಸಂಧ್ಯಾಕಾಲ ವೇದನೆಯು ಹೆಚ್ಚಾಗಿದ್ದಿತು. ವಾಸುವು ಬಹಳ ಹೊತ್ತು ಅಲ್ಲೇ ಇದ್ದು ಮನೆಗೆ ಹೋದನು. ಕಮಲಮ್ಮನವರೂ ಬೆಳಗ್ಗೆಯಿಂದ ಅಲ್ಲೇ ಇದ್ದು ಬೀಗಿತ್ತಿಯ ಯೋಗಕ್ಷೇಮ ನೋಡುತ್ತಿದ್ದರು. ಅವರಿಗೂ ಪಾರ್ವತಮ್ಮ ಉಳಿಯುವುದಿಲ್ಲವೆಂಬುದು ತಿಳಿದಿತ್ತು. ಒಂದೇ ಒಂದು ದೊಡ್ಡ ಕೊರತೆ. ಅವರ ಏಕಮಾತ್ರ ಪುತ್ರ ನಾಣಿ ಅವರ ಸಮೀಪದಲ್ಲಿಲ್ಲ. ಆದರೆ ಪಾರ್ವತಮ್ಮನದು ಬಹಳ ಗಾಂಭೀರ್ಯ ಸ್ವಭಾವ! ಅವರು ಒಂದು ಬಾರಿಯಾದರೂ ಮಗನು ಸಮೀಪದಲ್ಲಿಲ್ಲವಲ್ಲಾ ಎಂದು ವ್ಯಸನವನ್ನು ತೋರಿಸಲಿಲ್ಲ. ನಾಣಿಗೆ ಯಾವಾಗ ಬಿಡುಗಡೆಯಾಗುವುದೆಂಬ ನಿಶ್ಚಯವಿಲ್ಲ. ಆ ದಿನ ಕಮಲಮ್ಮನವರೂ ವಾಸುವೂ ಮನೆಗೆ ಹೊರಟು ಹೋದರು. ಸುಮಾರು ಸಂಧ್ಯಾಕಾಲ ಏಳುಗಂಟೆಯ ಸಮಯವಿರಬಹುದು. ತಾರಾ ಅತ್ತೆಯವರಿಗೆ ಗ್ಲೂಕೋಸ್ ಕುಡಿಸುತ್ತಿದ್ದಳು. ಪಾರ್ವತಮ್ಮನಿಗೆ ಕಣ್ಣು ಆಲಿಗಳು ತಿರುಗುತ್ತಿದ್ದುವು. ಜ್ಞಾನ ತಪ್ಪಿದಂತೆ ಆಯಿತು. ತಾರೆಯು ಸಾವಧಾನತೆಯಿಂದ ಅತ್ತಿಗೆಯನ್ನು ಕರೆದು " ಶ್ಯಾಮಲಾ ! ನೀನು ಅತ್ತೆಯವರ ಹತ್ತಿರ ಇರು. ನಾನು ಹೋಗಿ ಡಾಕ್ಟರನ್ನು ಕರೆತರುತ್ತೇನೆ " ಎಂದು ಹೇಳಿ ಹೊರಟಳು.

ತಾರಾ ಡಾಕ್ಟರ ಷಾಪಿಗೆ ಓಡಿಹೋದಳು. ಅಲ್ಲಿ ಡಾಕ್ಟರು ಸ್ನೇಹಿತ ರೊಂದಿಗೆ ಮಾತನಾಡುತ್ತಿದ್ದರು. ತಾರಾ ಷಾಪಿಗೆ ಬರುತ್ತಲೇ, "ಹೇಗಿದೆ ತಾರಾದೇವಿ ?" ಎಂದು ಕೇಳಿದರು.

ತಾರಾ "ಜ್ಞಾನ ತಪ್ಪುತ್ತಿದೆ! ಕೊನೆಯ ಘಳಿಗೆಗಳೆಂದು ತೋರುತ್ತದೆ" ಎಂದಳು. ಡಾಕ್ಟರು ಬೇಗ ಇಂಜಕ್ಷನ್ ಸಲಕರಣೆಗಳನ್ನು ತೆಗೆದುಕೊಂಡು ತಾರೆಯ ಜೊತೆಯಲ್ಲಿಯೇ ಮನೆಗೆ ಬಂದರು.

ಡಾಕ್ಟರು ರೋಗಿಯನ್ನು ಒಮ್ಮೆ ನೋಡಿದರು; ತಲೆಯ ಕಡೆ ಕುಳಿತಿದ್ದ ಶ್ಯಾಮಲೆಯ ಮುಖವನ್ನೊಮ್ಮೆ ನೋಡಿದರು. ಶ್ಯಾಮಲೆಯು ಗಂಭೀರವಾಗಿ "ಪ್ರಾಣ ಹೋಗಿದೆಯೇ ?" ಎಂದಳು. ಡಾಕ್ಟರು "ಇಲ್ಲ! ನೋಡೋಣ!" ಎಂದು ಹೇಳಿ ಇಂಜಕ್ಷನ್ ಕೊಟ್ಟರು. ಐದು ನಿಮಿಷಗಳೊಳಗಾಗಿ ಪಾರ್ವತಮ್ಮನವರು ಕಣ್ಣು ಬಿಟ್ಟರು.

"ನಾಣಿ! ನಾಣಿ!" ಎಂದರು.

ಡಾಕ್ಟರು "ನಾನಮ್ಮಾ ಡಾಕ್ಟರು" ಎಂದರು. ಎಲ್ಲರ ಕಣ್ಣುಗಳಲ್ಲಿಯೂ ನೀರು ಬಂದಿತು. ಪಾರ್ವತಮ್ಮನವರು ಸ್ಫುಟವಾಗಿ ಮಾತನಾಡಿದರು. "ಡಾಕ್ಟರೆ! ಬಹಳ ಸಂತೋಷ! ನೀವು ಬಹಳ ಉಪಕಾರ ಮಾಡಿರುವಿರಿ! ಅದಕ್ಕಾಗಿ ನಮ್ಮ ಮನೆಯವರೆಲ್ಲಾ ನಿಮಗೆ ಕೃತಜ್ಞರಾಗಿರುತ್ತಾರೆ" ಎಂದು ಹೇಳಿ ಡಾಕ್ಟರ ತಲೆ ಸವರಿ ಹರಸಿದಳು. ಡಾಕ್ಟರಿಗೂ ಕಣ್ಣುಗಳಲ್ಲಿ ನೀರು ತುಂಬಿತು. ಅವರು ಸಮೀಪದಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡರು. ಪಾರ್ವತಮ್ಮನು ಪಕ್ಕಗಳಲ್ಲಿ ತಿರುಗಿ ನೋಡಿದಳು. ಕಣ್ಣು ಸನ್ನೆಯಿಂದ ಶ್ಯಾಮಲೆಯನ್ನೂ ತಾರೆಯನ್ನೂ ಹತ್ತಿರ ಕರೆದಳು. ಎರಡು ಕೈಗಳಿಂದಲೂ ಇಬ್ಬರನ್ನೂ ತಬ್ಬಿ ಎದೆಗಪ್ಪಿಕೊಂಡಳು. ತಲೆಯ ಮೇಲೆ ಕೈ ಇಟ್ಟು ಸವರುತ್ತಾ ಆಶೀರ್ವದಿಸಿದಳು. ಮುಖದಲ್ಲಿ ಮಂದಹಾಸವು ಸೂಸುತ್ತಿತ್ತು. ಹಾಗೆಯೇ ಕಣ್ಣು ಮುಚ್ಚಿತು. ಮೈ ನಡುಗುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಶಾಂತವಾಯಿತು. ಚಿರಶಾಂತಿಯು ನೆಲಸಿತು. ಡಾಕ್ಟರು ಹತ್ತಿರ ಬಂದು ಬಗ್ಗಿ ನೋಡಿದರು. ನಾಡಿಯನ್ನು ಹಿಡಿದು ಪರೀಕ್ಷಿಸಿದರು. ಎದೆಯನ್ನು

ಮುಟ್ಟಿ ನೋಡಿದರು. ಎರಡು ನಿಮಿಷ ಸುಮ್ಮನೆ ನಿಂತಿದ್ದು, ಡಾಕ್ಟರು ಕೈಯೆತ್ತಿ "ಆಗಿ ಹೋಯಿತು!" ಎಂದರು.

ಇಬ್ಬರು ಹುಡುಗಿಯರೂ ಅಳತೊಡಗಿದರು. ಡಾಕ್ಟರು ಬಹಳ ಹೊತ್ತು ಸುಮ್ಮನೆ ಕುಳಿತಿದ್ದರು. ಅವರ ಕಣ್ಣುಗಳಲ್ಲಿ ನೀರು ತುಂಬಿತ್ತು.

ಶ್ಯಾಮಲೆಯು ಡಾಕ್ಟರ ಕಡೆಗೆ ತಿರುಗಿ "ಡಾಕ್ಟರೇ, ನೀವೇಕೆ ಕುಳಿತಿರಬೇಕು. ನೀವು ಮನೆಗೆ ಹೋಗಿ ಮಲಗಿಕೊಳ್ಳಬಾರದೇ? ನಿಮಗೆ ಅನಂತ ವಂದನೆಗಳು" ಎಂದಳು.

ಡಾಕ್ಟರು, "ಇಲ್ಲವಮ್ಮಾ! ನಿಮ್ಮಿಬ್ಬರು ಹೆಂಗಸರನ್ನೇ ಬಿಟ್ಟು ನಾನು ಹೇಗೆ ಹೋಗಲಿ!" ಎಂದರು.

ಶ್ಯಾಮಲೆಯೂ ತಾರೆಯೂ ಪಾರ್ವತಮ್ಮನ ಹತ್ತಿರ ಕುಳಿತರು. ಡಾಕ್ಟರು ತಾರೆಯನ್ನು ಕುರಿತು "ನಿಮ್ಮ ಮನೆಗೆ ತಿಳಿಸಬೇಡವೇ?" ಎಂದರು.

ಶ್ಯಾಮಲೆಯು, "ತಿಳಿಸಬೇಕು. ಆದರೆ ಈ ಅರ್ಧರಾತ್ರಿಯಲ್ಲಿ ಯಾರಿದ್ದಾರೆ?" ಎಂದು ಕೇಳಿದಳು.

"ನಮ್ಮ ಷಾಪಿನಲ್ಲಿ ಆಳು ಮಲಗಿರುತ್ತಾನೆ. ಅವನ ಕೈಲಿ ಚೀಟಿ ಬರೆದು ಕಳುಹಿಸುತ್ತೇನೆ!" ಎಂದು ಹೇಳಿ ಡಾಕ್ಟರು ಹೊರಟು ಹೋದರು.

ಸ್ವಲ್ಪ ಹೊತ್ತಿನೊಳಗಾಗಿ ಕಮಲಮ್ಮನವರೂ ವಾಸುವೂ ಬಂದರು. ಅವರು ಬಂದು ಶ್ಯಾಮಲೆಯನ್ನೂ ತಾರೆಯನ್ನೂ ಸಮಾಧಾನ ಪಡಿಸುತ್ತಿದ್ದರು. ವಾಸುವೂ ಡಾಕ್ಟರೂ ಹುಟ್ಟು ಸಾವುಗಳ ಸಮಸ್ಯೆಯನ್ನು ಕುರಿತು ಮಾತನಾಡುತ್ತಿದ್ದರು. ಪಾರ್ವತಮ್ಮ ವಿಧವೆ! ಹಿಂದೂ ಸಮಾಜದಲ್ಲಿ ವಿಧವೆಯರ ಬಾಳನ್ನು ಕುರಿತು ಇಬ್ಬರೂ ಮಾತನಾಡಿದರು. ಕಮಲಮ್ಮ ತಾರಾ ಇಬ್ಬರೂ ಪಾರ್ವತಮ್ಮನ ಗುಣಕಥನ ಮಾಡುತ್ತಿದ್ದರು ಶ್ಯಾಮಲೆ ತನ್ನ ತಂದೆಯವರು ಸತ್ತದ್ದನ್ನೂ ಆಗ ತಮಗೆ ಬಂದ ಕಷ್ಟಗಳನ್ನೂ ಹೇಳಿಕೊಂಡು ಅತ್ತಳು.

ಹೀಗೆಯೇ ಬೆಳಕು ಹರಿಯಿತು. ಮುಂದೇನು ಮಾಡಬೇಕೆಂಬುದು ವಾಸುವಿಗೆ ತಿಳಿಯದು. ಡಾಕ್ಟರೇ ಎಲ್ಲ ಜವಾಬ್ದಾರಿಯನ್ನೂ ವಹಿಸಿದರು.

ಬ್ರಾಹ್ಮಣ ಧರ್ಮ ಸಹಾಯ ಸಂಘಕ್ಕೆ ಹೇಳಿಕಳುಹಿಸಿದರು. ಪುರೋಹಿತರು ಬ್ರಾಹ್ಮಣರು ಎಲ್ಲರೂ ಬಂದರು. ವಾಸುವು ರಂಗರಾಯನಿಗೆ ಹೇಳಿಕಳುಹಿಸಿದನು. ಶಾಮಾಶಾಸ್ತ್ರಿಯು ತಾನಾಗಿಯೇ ಬಂದು ನೋಡಿಕೊಂಡು ಹೋದನು.

ಶವಸಂಸ್ಕಾರ ದಹನಕ್ರಿಯೆಗಳನ್ನು ಪೂರೈಸಿಕೊಂಡು ಎಲ್ಲರೂ ಗಂಗಾಧರರಾಯನ ಮನೆಗೆ ಬಂದರು.

ಮಾರನೆಯ ದಿನವೇ ಶ್ಯಾಮಲೆಯು ಅಣ್ಣನ ಮನೆಗೆ ಬಂದುಬಿಟ್ಟಳು. ತಾರೆಯು ಶ್ಯಾಮಲೆಯೊಬ್ಬಳನ್ನೇ ಬಿಟ್ಟಿರಲಾರದೇ ತಾನೂ ಅವಳ ಜೊತೆಯಲ್ಲಿಯೇ ಹೊರಟಳು. ಪ್ರತಿ ದಿನವೂ ವಾಸುವು ರಾತ್ರಿ ಅಲ್ಲಿಯೇ ಮಲಗುತ್ತಿದ್ದನು.

ಒಂದು ದಿನ ಪ್ರಾತಃಕಾಲ ಒಂಭತ್ತು ಗಂಟೆಯ ಸಮಯದಲ್ಲಿ ರಂಗರಾಯನು ಶ್ಯಾಮಲೆಯ ಮನೆಗೆ ಬಂದನು. ಬಾಗಿಲು ತೆರೆದಿತ್ತು. ಹಜಾರದಲ್ಲಿ ಕುರ್ಚಿಯ ಮೇಲೆ ಕುಳಿತುಕೊಂಡನು. ಐದು ನಿಮಿಷಗಳಾದುವು. ಯಾರೂ ಇರಲಿಲ್ಲ. "ಶ್ಯಾಮಲೇ! ಶ್ಯಾಮಲೇ!" ಎಂದು ಕೂಗಿದನು.

ಶ್ಯಾಮಲೆಯು ಹಿತ್ತಲ ಕಡೇ ಇದ್ದಳು. ಹಜಾರದಲ್ಲಿ ತನ್ನನ್ನು ಯಾರೋ ಕೂಗುತ್ತಿರುವುದು ಕೇಳಿಸಿತು. ನಡುಮನೆಗೆ ಬರುವುದರ ಒಳಗೆ ಆ ದನಿಯು ರಂಗರಾಯನದೆಂದು ಗೊತ್ತಾಯಿತು. ಅವಳ ಹೃದಯ ನಡುಗಿತು. 'ಪತಿಯು ಬಂದಿದ್ದಾನೆ. ಇವನಿಗೇನು ಹೇಳುವುದು?' ಎಂದು ಕ್ಷಣ ಹೊತ್ತು ಸಂದಿಗ್ಧವಾಗಿತ್ತು. "ಓಹೋ! ಅವನಿಗೆ ಅಂದೇ ಹೇಳುವುದನ್ನೆಲ್ಲಾ ಹೇಳಿದ್ದೇನೆ" ಎಂದುಕೊಂಡು ದಿಟ್ಟತನದಿಂದ ಹಜಾರದಲ್ಲಿ ಬಂದು ನಿಂತಳು.

ರಂಗರಾಯನು ಶ್ಯಾಮಲೆಯನ್ನು ಆಪಾದ ಮಸ್ತಕವಾಗಿ ನೋಡಿದನು. ಅದೇ ಮನೋಹರ ಲಾವಣ್ಯ! ಅದೇ ಮೋಹಕವಾದ ರೂಪರಾಶಿ! ಅದೇ ಗಾಂಭೀರ್ಯ!

"ಶ್ಯಾಮಲೆ! ನಿಮ್ಮ ತಾಯಿ ಹೋಗಿಬಿಟ್ಟರು. ಅವತ್ತು ಹೇಳಿಕಳುಹಿಸಿದ್ದರು. ನಾನು ಊರಿನಲ್ಲಿರಲಿಲ್ಲ."

"ಒಳ್ಳೆಯದಾಯಿತು. ಊರಿನ ಜನರ ಬೈಗಳು ತಪ್ಪಿತು. ನಮ್ಮ

ತಾಯಿ ಸತ್ತರೆ ನೀವೇಕೆ ಬರಬೇಕು ?"

"ಎಲ್ಲಾ ಪೂರೈಸಿ ಹೋಯಿತಷ್ಟೆ. ಇನ್ನು ನೀನು ಮನೆಗೆ ಮರ್ಯಾದೆಯಾಗಿ ಬಂದರೆ ಚೆನ್ನು !"

"ನನಗೆ ಮನೆ ಎಲ್ಲಿದೆ?"

"ಇದೇನು ಶ್ಯಾಮಲೆ ಹೀಗೆ ಹೇಳುವೆ? ನೀನು ನನ್ನ ಧರ್ಮಪತ್ನಿಯಲ್ಲವೇ ? ನನ್ನದೆಲ್ಲಪಕ್ಕೂ ನೀನೇ ಸ್ವಾಮಿನಿಯಲ್ಲವೆ ?"

"ಅಲ್ಲ. ನಾನು ಪರಿತ್ಯಕ್ತೆ."

"ನಾನೆಲ್ಲಿ ಪರಿತ್ಯಜಿಸಿದೆ. ನೀನೇ ದುಡುಕಿನಿಂದ ಹೊರಟು ಹೋದೆ!"

"ನಾನು ಹೊರಟು ಹೋದುದು ಎಷ್ಟೋ ಒಳ್ಳೆಯದಾಯಿತು. ಮಾತೃದೇವತೆಯ ಸೇವೆಯನ್ನು ಕೈಲಾದಷ್ಟು ಮಾಡಿದೆ. ಅಂಥಾ ಪುಣ್ಯವು ನನಗೆಲ್ಲಿ ದೊರೆಯುತ್ತಿತ್ತು! ನಿಮ್ಮ ಔದಾರ್ಯದಿಂದಲೇ ದೊರೆಯಿತು !"

"ಅದೆಲ್ಲಾ ಪೂರೈಸಿತು. ನೀನು ಈ ರೀತಿ ಏಕಾಂಗಿಯಾಗಿರುವುದು ಸರಿಯಲ್ಲ. ಈಗ ನಡೆ ! ಮನೆಗೆ ಹೋಗೋಣ."

"ನಾನು ಎಂದು ನಿಮ್ಮ ಮನೆಯನ್ನು ಬಿಟ್ಟೆನೋ ಅಂದೇ, ಆಮರಣಾಂತ ಏಕಾಕಿನಿಯಾಗಿರುವುದು ಎಂದು ಸಂಕಲ್ಪ ಮಾಡಿದ್ದೇನೆ."

"ನೀನು ಬರುವುದಿಲ್ಲವೇ ? ಖಂಡಿತ ಬರುವುದಿಲ್ಲವೇ ? ಇಂದಿಗೆ ನಮ್ಮಿಬ್ಬರ ಋಣ ತೀರಿಹೋಯಿತೇ ?"

"ಎಂದೋ ತೀರಿಹೋಯಿತು. ನಮ್ಮಿಬ್ಬರ ಋಣವೆಂಬುದೇ ಭ್ರಾಂತಿ."

"ನೀನು ಮುಂದೆ ಹೇಗೆ ಜೀವನ ಮಾಡುತ್ತೀ ?"

"ಹೇಗಾದರೂ ಜೀವನ ಮಾಡುತ್ತೇನೆ. ನ್ಯಾಯವಾದ ಜೀವನೋಪಾಯ ಸಿಕ್ಕದಿದ್ದರೆ ಭಿಕ್ಷೆ ಬೇಡಿ ಜೀವಿಸುತ್ತೇನೆ."

"ಶ್ಯಾಮಲೆ! ನಾನು ನಿನ್ನನ್ನು ಮದುವೆ ಮಾಡಿಕೊಂಡಿದ್ದು ತಪ್ಪು. ತಲೆ ಎತ್ತದಂಥಾ ಅವಮಾನವಾಯಿತು. ನೀನೇಕೆ ದುಡಿದು ಜೀವನ ಮಾಡುತ್ತೀ ? ನೀನೇಕೆ ಭಿಕ್ಷೆ ಬೇಡಿ ಜೀವನ ನಡಸುತ್ತೀ ? ನನಗೆ ಗೊತ್ತಿಲ್ಲವೆಂದು ಭಾವಿಸಿದ್ದೀಯೆ. ನಿನಗಿರುವ ಈ ಸೌಂದರ್ಯದ ಆಕರ್ಷಣೆ! ಈ

ಶರೀರದ ಸೊಬಗು. ಇದನ್ನು ಮಾರಿ ಜೀವಿಸುತ್ತೀ! ನೀನು ಕುಲಟೆ! ತಿಳಿದು ತಿಳಿದೂ ಲೋಕದ ಆಪಾದನೆಯಿಂದ ನಿನ್ನನ್ನು ಉದ್ಧಾರ ಮಾಡೋಣ ವೆಂದು ನಾನೇ ಮಾನ ಮರ್ಯಾದೆಗಳನ್ನು ನೋಡದೆ ಈ ಮನೆಗೆ ಬಂದೆ! ನೀನು ತಿರಸ್ಕರಿಸಿದ್ದೀಯೆ. ನನ್ನ ಕೈಗಳಿಂದಲೇ ನಿನ್ನ ಕೊರಳನ್ನು ಹಿಸುಕಿ ಕೊಂದುಹಾಕುತ್ತಿದ್ದೆ. ಆದರೆ ಈ ಲೋಕದ ಕಣ್ಣು ಕುರುಡು! ನನ್ನನ್ನು ಕೊಲೆಪಾತಕಿ ಎಂದು ನಿಂದಿಸುತ್ತದೆ."

ಶ್ಯಾಮಲೆ "ಹಾ! ಹಾ! ಸಾಕು! ಸಾಕು! ಈಗ ನೀವಾದರೂ ಈ ಮನೆ ಬಿಟ್ಟು ಹೋಗಿರಿ. ಅಥವಾ ನಾನೇ ಹೊರಟು ಹೋಗುತ್ತೇನೆ" ಎಂದು ಚೀರಿದಳು.

ರಂಗರಾಯನು ಕೋಪೋದ್ರೇಕದಿಂದ "ಪಿಶಾಚಿ! ಹೋಗು! ಹಾಳಾಗಿ ಹೋಗು!" ಎಂದು ಬೈಯ್ಯುತ್ತಾ ಹೊರಟು ಹೋದನು.

೧೯

ಕಾಂಗ್ರೆಸ್ಸಿನವರಿಗೆ ಅಧಿಕಾರವು ಬಂತು! ಕಾಂಗ್ರೆಸ್ಸಿಗರೆಲ್ಲಾ ಜೈಲುಗಳಿಂದ ಹೊರಗೆ ಬಂದರು. ಕಾಂಗ್ರೆಸ್ ಮುಖಂಡರುಗಳು ಮಂತ್ರಿಗಳಾದರು. ಮೈಸೂರು ಬೆಂಗಳೂರು ನಗರಗಳಲ್ಲಿಯೂ ಹಳ್ಳಿ ಹಳ್ಳಿಗಳಲ್ಲಿಯೂ ಸ್ವಾತಂತ್ರ್ಯೋತ್ಸವಗಳು ನಡೆದುವು. ನಾರಾಯಣನೂ ಮನೆಗೆ ಬಂದನು. ತಾಯಿಯ ಮರಣಕ್ಕಾಗಿ ಆತನಿಗೆ ತುಂಬ ದುಃಖವಾಯಿತು. ಅವನೊಡನೆ ಅತ್ತ ಶ್ಯಾಮಲೆ ತಾರೆಯರನ್ನು ಕೊನೆಗೆ ಅವನೇ ಸಮಾಧಾನಗೊಳಿಸಬೇಕಾಯಿತು.

ಗಂಗಾಧರರಾಯನೂ ಜೈಲಿನಿಂದ ಮನೆಗೆ ಬಂದನು. ಜೈಲಿನಲ್ಲಿಯೇ ಆತನ ಆರೋಗ್ಯ ಕೆಟ್ಟಿತ್ತು. ದೊಡ್ಡ ದೊಡ್ಡ ಡಾಕ್ಟರುಗಳು ಬಂದು ನೋಡಿ ಔಷಧಿಗಳನ್ನು ಕೊಟ್ಟರು. ಆದರೆ ಖಾಯಿಲೆ ಹೆಚ್ಚುತ್ತಲೇ ಬಂದಿತು.

ಇದ್ದಕ್ಕಿದ್ದ ಹಾಗೆ ಒಂದು ದಿನ ಅವನಿಗೆ ಅವಸಾನ ಕಾಲವೂ ಬಂತು. ಅವನು ಸ್ವರ್ಗಸ್ಥನಾದನು. ಮನೆಯವರೆಲ್ಲರೂ ದುಃಖದಲ್ಲಿ ಮುಳುಗಿದರು. ಕಾಂಗ್ರೆಸ್ ಮುಖಂಡರೆಲ್ಲರೂ ಬಂದು ಸಂತಾಪವನ್ನು ಸೂಚಿಸಿ ಮನೆಯವರನ್ನು ಸಂತೈಸಿ ಹೋದರು. ಅವರಲ್ಲಿ ಕೆಲವರು ಅವರ ಸೇವೆಯನ್ನು ಕೊಂಡಾಡುತ್ತಾ "ನಮ್ಮ ರಾಯರು ಈ ಕಾಂಗ್ರೆಸ್ಸಿಗಾಗಿ ಹತ್ತು ವರ್ಷಗಳು ಕಷ್ಟಪಟ್ಟರು. ಅವರು ಬದುಕಿದ್ದರೆ ಮಂತ್ರಿಗಳಾಗುತ್ತಿದ್ದರು" ಎಂದು ಹೇಳಿದರು.

ಈಗ ಮನೆಗೆ ವಾಸುವೇ ಯಜಮಾನ! ಅವನಿಗೆ ಸುಮಾರು ಮೂವತ್ತು ವರ್ಷ ವಯಸ್ಸು. ಆದರೂ ಮದುವೆಯಾಗಿಲ್ಲ. ಕಮಲಮ್ಮನವರಿಗೆ ಪತಿ ದುಃಖಕ್ಕಿಂತಲೂ ವಾಸುವು ಮದುವೆಯಾಗದಿರುವುದು ಹೆಚ್ಚು ದುಃಖವನ್ನುಂಟು

ಮಾಡಿತ್ತು. ಆತ ಈಗ ಲಾಯರು! ಕೋರ್ಟಿಗೆ ಹೋಗಿ ಬರುತ್ತಿದ್ದನು. ಗಂಗಾಧರರಾಯನ ಆಫೀಸು ಈಗ ದೊಡ್ಡ ಆಫೀಸು. ಕಕ್ಷಿಗಾರರು ಅದೇ ವಾಂಛಲ್ಯದಿಂದ ಬರುತ್ತಿದ್ದರು. ಸಂಪಾದನೆಯೂ ಸುಮಾರಾಗಿತ್ತು.

ತಾರೆಗೂ ಅಣ್ಣನು ಮದುವೆಯಾಗದೆ ಇದ್ದಾನಲ್ಲ, ಎಂದು ಪೇಚಾಟ ವಾಗಿತ್ತು. ಅವನು ಈ ರೀತಿ ಹಠ ಮಾಡಲು ಕಾರಣವೇನು ಎಂದು ಅವಳು ಚಿಂತಿಸುತ್ತಿದ್ದಳು, ಅವನು ತಾರೆಯ ಮನೆಗೆ ನಿತ್ಯವೂ ಹೋಗಿ ಬರು ತ್ತಿದ್ದನು.

ತಾರೆಯೂ ಶ್ಯಾಮಲೆಯೂ ಅನೇಕ ಬಾರಿ ವಾಸುದೇವನ ಮದುವೆಯ ವಿಚಾರವಾಗಿ ಮಾತನಾಡುತ್ತಿದ್ದರು. ಆದರೆ "ಅವನೇಕೆ ಮದುವೆಯಾಗುವು ದಿಲ್ಲ?" ಎಂಬ ಪ್ರಶ್ನೆಯು ಪ್ರಶ್ನೆಯಾಗಿಯೇ ಉಳಿಯುತ್ತಿತ್ತು.

ಸಂಧ್ಯಾಕಾಲ ವಾಸುವು ತಾರೆಯ ಮನೆಯಲ್ಲಿ ಮಾತನಾಡುತ್ತಾ ಕುಳಿತಿ ದ್ದನು. ತಾರೆ ಕಾಫಿ ತಿಂಡಿ ತಂದಿಟ್ಟಳು. ವಾಸುವು ಕಾಫಿಯನ್ನು ಕುಡಿ ಯುತ್ತಿದ್ದನು.

"ಅಣ್ಣಾ, ನೀನೇಕೆ ಮದುವೆಗೆ ಒಪ್ಪುವುದಿಲ್ಲ?" ಎಂದು ತಂಗಿ ಅಣ್ಣ ನನ್ನು ಕೇಳಿದಳು.

"ನಾನು ಮದುವೆಗೆ ಒಪ್ಪುವುದಿಲ್ಲವೆಂದು ಯಾರು ಹೇಳಿದರು?"

"ಇನ್ನೆಷ್ಟು ದಿನಕ್ಕೆ ನಿನ್ನ ಮದುವೆ. ಯಾವ ಮಹಾರಾಯತಿ ಹೆಂಡತಿ ಯಾಗಬೇಕೋ?"

"ಎಲ್ಲದಕ್ಕೂ ಕಾಲ ಬರಬೇಕು ತಾರಾ! ಮದುವೆ ಮದುವೆ ಎಂದು ಹಂಬಲಿಸಿ ಇಜ್ಜೋಡಿಯನ್ನು ಮದುವೆಯಾದರೆ ಅವಳಿಗೂ ಸುಖವಿಲ್ಲ. ನನಗೂ ಸುಖವಿಲ್ಲ. ನಿಮಗೂ ತೊಂದರೆ!"

"ಇದೇನು ವಾಸು, ಇಜ್ಜೋಡಿ ಎಂದರೇನು? ನಿನಗಿನ್ನೂ ಮೂವತ್ತೇ ವರ್ಷ. ಈಗ ಕಾಲೇಜುಗಳಲ್ಲಿ ಓದುವ ಹುಡುಗಿಯರು ಬೆಳೆದಿರುತ್ತಾರೆ. ನಿನಗೆ ಜೋಡಿಯಾಗುವ ಹುಡುಗಿಯರು ಎಷ್ಟೋ ಮಂದಿ ಇದ್ದಾರೆ."

"ಅಯ್ಯೋ ಹುಡುಗಿ! ಇಜ್ಜೋಡಿ ಎಂದರೆ ರೂಪಲಾವಣ್ಯಗಳೇ!

ವಯಸ್ಸೇ ಜೋಡಿ ಜೋಡಿ ಬೊಂಬೆಗಳನ್ನು ಮಾಡುತ್ತದೆಯೆಂದುಕೊಂಡಿ ರುವೆಯಾ ? ಸ್ವಭಾವ ಮನೋಭಾವನೆಗಳಲ್ಲಿಯೂ ಜೋಡಿಯಾಗಿರಬೇಕು. "

" ಏನಣ್ಣಾ ಲೋಕದಲ್ಲಿಲ್ಲದ ಮಾತುಗಳನ್ನಾಡುವೆ. ನಿಮ್ಮ ಭಾವ ಇದ್ದಾರಲ್ಲ, ಅವರು ಸ್ವಭಾವ-ಮನೋಭಾವನೆಗಳನ್ನು ಪರೀಕ್ಷಿಸಿ ಮದುವೆ ಯಾದರೇನು ? "

" ನಾಣಿಯ ವಿಷಯವೇ ! ಅವನು ನಿನ್ನ ಮನೋಭಾವನೆಗಳನ್ನು ಅನು ಸರಿಸಿಕೊಂಡು ಇದ್ದಾನೆ. ಹಾಗೆಯೇ ಈ ಶ್ಯಾಮಲೆಯನ್ನು ನೋಡು ! ಆ ರಂಗ ರಾಯನ ಮನೋಭಾವಕ್ಕೂ ಇವಳ ಮನೋಭಾವಕ್ಕೂ ಸರಿಬೀಳಲಿಲ್ಲ. ಅವನನ್ನು ಬಿಟ್ಟುಬಿಟ್ಟಳು. ಇಂಥಾ ಮದುವೆಯನ್ನು ನನಗೂ ಮಾಡಬೇಕೆನ್ನು ತ್ತೀರೇನು ? "

" ಅಣ್ಣಾ, ಈ ಚಾತುರ್ಯವೆಲ್ಲಾ ಕೋರ್ಟು ಕಛೇರಿಗಳದು. ಇದೆಲ್ಲಾ ಇಲ್ಲಿ ನಡೆಯುವುದಿಲ್ಲ. ನೀನು ಯಾವಳನ್ನೋ ಒಪ್ಪಿರುವಿ. ಹೇಳು ! ಅವ ಳಾರು ! ಯಾವ ಕುಲದವಳಾದರೂ ಸರಿ ! ಯಾವ ಜಾತಿಯವಳಾದರೂ ಸರಿ ! ನಾವು ತಂದು ಮದುವೆ ಮಾಡುತ್ತೇವೆ. "

" ಆಗಲಿ ! ಒಪ್ಪಿದ ಮೇಲೆ ನಿನಗೂ ಗುಟ್ಟಾಗಿ ಬಂದು ಹೇಳುತ್ತೇನೆ. ನಿಮ್ಮ ಮನೆಗೇ ಕರೆತರುತ್ತೇನೆ. "

ತಾರೆಯು " ಏನು ಅತ್ತಿಗೆ ! ನೀವೇನು ಹೇಳುತ್ತೀರಿ ? " ಶ್ಯಾಮಲೆ ಯನ್ನು ಕೇಳಿದಳು.

ಶ್ಯಾಮಲೆಯು " ಮದುವೆಯ ವಿಷಯದಲ್ಲಿ ನನ್ನ ತೀರ್ಪು ಅಸಂಬದ್ಧ. ನಾನು ಆ ವಿಚಾರದಲ್ಲಿ ವಿಜಯವನ್ನು ಪಡೆಯಲಿಲ್ಲ. ನನ್ನ ಮಾತು ಲೆಖ್ಖಕ್ಕಿಲ್ಲ" ಎಂದಳು.

ವಾಸುವು " ಶ್ಯಾಮಲೆ ! ನಿನಗೆ ವಿವಾಹ ಸಂಬಂಧದಲ್ಲಿ ಯಾವ ವ್ಯಥೆಯೂ ಇಲ್ಲವೇ ? " ಎಂದನು.

" ಕೊಂಚವೂ ವ್ಯಥೆಯಿಲ್ಲ ! ನಾನು ಸ್ವತಂತ್ರಳಾಗಿ ಸುಖಿಯಾಗಿ ದ್ದೇನೆ. "

" ನಾನು ಹಾಗೆಯೇ ಸುಖಿಯಾಗಿದ್ದೇನೆ. ನನ್ನನ್ನೇಕೆ ಪೀಡಿಸುತ್ತೀರಿ. ಪುರುಷರು ಮದುವೆಯಾಗದೆಯೇ ಆಮರಣಾಂತ ಇರಬಹುದು. "

" ಅಣ್ಣ ಇದೆಲ್ಲಾ ನಿರಾಶಾವಾದ. ಇದನ್ನು ನಾವು ಒಪ್ಪುವುದಿಲ್ಲ. ಮದುವೆ ಇಲ್ಲದ ಮೇಲೆ ಮನೆಯೇಕೆ? ಗುಂಡು ಗೋವಿಂದನಂತೆ ತಿರುಗುತ್ತಿದ್ದರಾಯಿತು" ಎಂದು ಮುಖವನ್ನು ಶಿಂಡರಿಸಿದಳು.

ವಾಸುವು ಕುರ್ಚಿಯಿಂದ ಎದ್ದು ತಾರಳ ಗಲ್ಲವನ್ನು ಹಿಡಿದು " ಕೋಪ ಮಾಡಬೇಡಮ್ಮಾ. ನಿನಗೊಬ್ಬ ಅತ್ತಿಗೆ ಬರುತ್ತಾಳೆ " ಎಂದು ಹೇಳಿದನು.

ತಾರೆಯೂ ನಕ್ಕಳು. ಶ್ಯಾಮಲೆಯೂ ನಕ್ಕಳು. ಅಷ್ಟು ಹೊತ್ತಿಗೆ ನಾರಾಯಣನು ಮನೆಗೆ ಬಂದನು. ಶ್ಯಾಮಲೆಯು ಕಾಫಿಯನ್ನು ತಂದು ಕೊಟ್ಟಳು.

ನಾರಾಯಣನು ಕಾಫಿಯನ್ನು ಕುಡಿಯುತ್ತಾ " ಏನೋ! ವಾಸು! ಅಣ್ಣ ತಂಗಿಯರು ನಾಟಕ ಮಾಡುತ್ತಿದ್ದೀರಿ ? " ಎಂದು ನಕ್ಕ.

" ಏನೂ ಇಲ್ಲ ನಾಣಿ ನಿನ್ನ ಹೆಂಡತಿ ನನ್ನನ್ನು ಮದುವೆಗೆ ತಯಾರು ಮಾಡುತ್ತಿದ್ದಾಳೆ. "

" ಹೌದು ವಾಸು ! ಹುಡುಗಾಟವಲ್ಲ. ನೀನು ಮದುವೆ ಮಾಡಿಕೊಳ್ಳಲೇ ಬೇಕು. "

" ಸರಿ ! ನೀನು ಹೆಣ್ಣು ನೋಡಿ ಮದುವೆ ಮಾಡು, ನಾನು ಬೇಡವೆಂದರೆ ಹೇಳು. "

" ನಾಣೀ ! ಸಾಕು ಇನ್ನು ಈ ಹರಟೆ. ಈ ದಿನ 'ಪೋತನ' ಚಿತ್ರ ಇದೆ. ಎಲ್ಲರೂ ಹೋಗೋಣ; ಸೀಟುಗಳನ್ನು ರಿಜರ್ವ್ ಮಾಡಿ ಸಿದ್ದೇನೆ. "

ಎಲ್ಲರೂ ಸಿನಿಮಾಕ್ಕೆ ಹೊರಟರು ! ಬಾಗಿಲಿನಲ್ಲಿ ಮೋಟಾರು ನಿಂತಿತ್ತು. ಹೆಚ್ಚು ಅವಕಾಶವಿರಲಿಲ್ಲವಾದುದರಿಂದ ಅವಸರ ಅವಸರವಾಗಿ ಎಲ್ಲರೂ ಕುಳಿತರು. ಕೂಡುವಾಗ ಯಾರೂ ಏನೂ ಯೋಚನೆ ಮಾಡಲಿಲ್ಲ. ಕಾರು ಹೊರ

ಟಿತು. ಶ್ಯಾಮಲೆಯ ಮನಸ್ಸು ಕಳಕ್ಕೆಂದಿತು. ಅವಳ ಪಕ್ಕದಲ್ಲಿ ವಾಸುವು ಕುಳಿತಿದ್ದನು. ಶ್ಯಾಮಲೆಯು "ಎಂಥಾ ತಪ್ಪಾಯಿತು! ಇದೇನು? ಜನರು ಏನೆಂದುಕೊಂಡಾರು? ವಾಸುವು ನನಗೆ ಸಹೋದರನಂತೆ! ಆದರೆ ಜನರೇಕೆ ಒಪ್ಪುತ್ತಾರೆ?" ಎಂದುಕೊಂಡಳು. ಸೆರಗಿನಿಂದ ಮುಖ ಮುಚ್ಚಿಕೊಳ್ಳುತ್ತಾ ತಲೆ ತಗ್ಗಿಸಿಕೊಂಡು ಕುಳಿತಳು. ಎಲ್ಲರಿಗೂ ಸಿನಿಮಾಕ್ಕೆ ಹೋಗುವ ಆತುರ. ಯಾರೂ ಮಾತನಾಡಲಿಲ್ಲ. ಕಾರು ಸಿನಿಮಾ ಮಂದಿರದ ಬಾಗಿಲಿನಲ್ಲಿ ಹೋಗಿ ನಿಂತಿತು. ಶ್ಯಾಮಲೆಯು ಮೊದಲು ಕಾರಿನಿಂದ ಇಳಿದಳು. ಸೀರೆಯ ನೆರೆ ಸಿಕ್ಕಿಕೊಂಡು ನೆಲದ ಮೇಲೆ ಮುಗ್ಗರಿಸುತ್ತಿದ್ದಳು. ವಾಸುವು ಶ್ಯಾಮಲೆಯ ಎರಡು ತೋಳುಗಳನ್ನು ಹಿಡಿದುಕೊಂಡುದರಿಂದ ಅವಳು ಬೀಳಲಿಲ್ಲ. ಅಷ್ಟರಲ್ಲಿ ತಾರಾ ಗಾಡಿಯನ್ನಿಳಿದು ಶ್ಯಾಮಲೆಯನ್ನು ಹಿಡಿದುಕೊಂಡಳು.

"ಯಾಕೆ ಶ್ಯಾಮಲಾ! ಬೀಳುತ್ತಿದ್ದೆ?"

"ಇಲ್ಲ! ಸ್ವಲ್ಪ ಎಡವಿದೆ" ಎಂದು ನಗುಮುಖ ಮಾಡಿಕೊಂಡಳು. ಮೂವರೂ ಹೋಗಿ ಬಾಕ್ಸಿನಲ್ಲಿ ಕುಳಿತರು. ಅವರಿಬ್ಬರನ್ನು ಅಲ್ಲಿ ಬಿಟ್ಟು ನಾಣಿ ಬಂದು ಟಿಕೆಟ್ ತೆಗೆದುಕೊಳ್ಳುತ್ತಿದ್ದನು. ಅಲ್ಲಿಗೆ ಡಾಕ್ಟರು ಬಂದರು.

ನಾಣಿಯು "ಒಳ್ಳೆಯದಾಯಿತು ಬನ್ನಿ! ನಾನು ಟಿಕೆಟ್ ತೆಗೆದು ಕೊಂಡಿದ್ದೇನೆ" ಎಂದು ಹೇಳಿ ಡಾಕ್ಟರನ್ನು ಕರೆತಂದನು. ಡಾಕ್ಟರನ್ನು ಬಾಕ್ಸಿ ನಲ್ಲಿ ಕುಳ್ಳಿರಿಸಿ ತಾನು ಮತ್ತೊಂದು ಕುರ್ಚಿಯನ್ನು ತರಿಸಿಕೊಂಡು ಕುಳಿತು ಕೊಂಡನು.

ಚಿತ್ರ ಪ್ರಾರಂಭವಾಯಿತು. ಬಹಳ ಹೊತ್ತು ಶ್ಯಾಮಲೆಗೆ ಆ ಸನ್ನಿ ವೇಶವು ಸರಿಬೀಳಲಿಲ್ಲ. ಇಷ್ಟೊಂದು ಗಂಡಸರ ಮಧ್ಯೆ ಕುಳಿತಿರುವುದು ಅವಳಿಗೆ ಹಿತವಾಗಲಿಲ್ಲ. ಆ ಬಾಕ್ಸಿನಲ್ಲಿಯೇ ಡಾಕ್ಟರು ಕುಳಿತಿದ್ದರು. ಅವರು ತನ್ನನ್ನು ಆಕ್ರಮಣ ಮಾಡಿದ ದೃಶ್ಯ ಕಣ್ಣಿಗೆ ಕಟ್ಟಿದಂತಾಯಿತು. ಮೈನಡುಗಿತು. ಅದನ್ನು ಮರೆಯಲು ಪ್ರಯತ್ನಿಸಿದಳು. ಮದರಾಸಿನಲ್ಲಿ ಡಾಕ್ಟರು ಕೇಳಿದ ಪ್ರಶ್ನೆಯು ಕಿವಿಯಲ್ಲಿ ಝೇಂಕರಿಸಿತು. ಶ್ಯಾಮಲೆ ತನಗೆ ಮೈ ಚೆನ್ನಾಗಿಲ್ಲ

ವೆಂದು ಹೇಳಿ ತಾನು ಮನೆಗೆ ಹೊರಟುಹೋಗಬೇಕೆಂದು ಮನಸ್ಸಾಯಿತು. ಅಷ್ಟರಲ್ಲಿ, ಪೋತನನ ದಾರಿದ್ರ್ಯ ಕಷ್ಟಗಳ ಚಿತ್ರಗಳು ಚಿತ್ರಿತವಾಗುತ್ತಿದ್ದುವು. ಆ ಪೋತನನ ಸ್ಥಿತಿಯನ್ನು ನೋಡುತ್ತಾ ಶ್ಯಾಮಲೆಯು ತನ್ನ ವಿಷಯವೆಲ್ಲವನ್ನೂ ಮರೆತಳು. ಇಂಟರ್‌ವಲ್ ಸಮಯದಲ್ಲಿ ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. ತಾರೆಯ ಮುಖವೂ ದುಃಖಾಶ್ರುವಿನಿಂದ ತುಂಬಿದ್ದಿತು.

# ೨೦

ಪಾರ್ವತಮ್ಮನು ಪರಲೋಕ ಯಾತ್ರೆ ಮಾಡಿದ ಮೇಲೆ ಶ್ಯಾಮಲೆಯು ಸುಮ್ಮನೆ ಹೊತ್ತು ಕಳೆಯುತ್ತಿರಲಿಲ್ಲ. ತಾರೆಯಂತೆ ಅವಳಿಗೆ ಕಸೂತಿ ಹಾಕುವುದು, ವೀಣೆ ಅಭ್ಯಾಸ ಮಾಡುವುದು ರುಚಿಸುತ್ತಿರಲಿಲ್ಲ. ತಾರೆಯೂ ಶ್ಯಾಮಲೆಯೂ ಸಮಸಮ ವಯಸ್ಕರಾದರೂ ತಾರೆಯು ಹುಡುಗಿಯಂತೆ ಆಡುತ್ತಿದ್ದಳು. ಆದರೆ ಶ್ಯಾಮಲೆಗೆ ಆ ಅಲ್ಪಕಾಲದ ಜೀವನದಲ್ಲಿಯೇ ಸಾಕಷ್ಟು ಅನುಭವವಾಗಿತ್ತು. ಶ್ಯಾಮಲೆಯು ಎಂಟು ಹತ್ತು ಬಡ ಹುಡುಗರನ್ನು ಸೇರಿಸಿಕೊಂಡು ಪಾಠ ಹೇಳಿಕೊಡುತ್ತಿದ್ದಳು. ನಾರಾಯಣನು ಅವರಿಗೆಲ್ಲಾ ಬಟ್ಟೆಗಳನ್ನು ಹೊಲಿಸಿ ಕೊಟ್ಟಿದ್ದನು. ತಾರೆಯು ಅವರಿಗೆ ಸಂಗೀತ ಹೇಳಿಕೊಡುತ್ತಿದ್ದಳು. ಶ್ಯಾಮಲೆಯದೇ ಒಂದು ಸಣ್ಣ ಪಾಠಶಾಲೆಯಾಗಿ ಹೋಗಿತ್ತು. ಈ ಹವ್ಯಾಸದಲ್ಲಿ ಕಾಲ ಕಳೆಯುವುದು ಶ್ಯಾಮಲೆಗೆ ಸುಖಮಯವಾಗಿತ್ತು.

ದೊಡ್ಡ ಮನುಷ್ಯರ ಮನೆಯ ಹುಡುಗರನ್ನು ಆ ಪಾಠಶಾಲೆಯು ಆಕರ್ಷಿಸಿತು. ಹೆಚ್ಚು ಹೆಚ್ಚು ಬಾಲಕರು ಆ ಪಾಠಶಾಲೆಗೆ ಸೇರಿದರು. ಇನ್ನು ಹೆಚ್ಚು ಬಾಲಕರನ್ನು ಸೇರಿಸಿಕೊಳ್ಳಲು ಮನೆ ಸಾಲದಾಯಿತು. ಆದರೆ ಹೊಸ ಮಕ್ಕಳ ತಾಯಿ ತಂದೆಗಳು ಬಂದು ಶ್ಯಾಮಲೆಯನ್ನು ಕಾಡಲಾರಂಭಿಸಿದರು.

ಶ್ಯಾಮಲೆಗೆ ಏನು ಮಾಡಬೇಕೋ ತಿಳಿಯಲಿಲ್ಲ. ಆ ನಿಸ್ಪುರವನ್ನು ತಡೆಯಲಾರದೇ, ಈ ಪಾಠ ಹೇಳುವುದನ್ನೇ ಬಿಟ್ಟುಬಿಡಬೇಕೆಂದು ಆಲೋಚಿಸಿದಳು. ತಾರಾ ಅದಕ್ಕೊಪ್ಪಲಿಲ್ಲ. ವಾಸುವು ಬಂದು ಮಾತನಾಡುತ್ತಾ ಕುಳಿತಿರುವಾಗ ಈ ಮಾತು ಬಂತು.

ತಾರೆಯು “ ನಾವೊಂದು ದೊಡ್ಡ ಮನೆಯನ್ನು ತೆಗೆದುಕೊಂಡು ಒಂದು ಪಾಠಶಾಲೆಯನ್ನೇ ಏಕೆ ಆರಂಭಿಸಬಾರದು ? ” ಎಂದಳು.

ಶ್ಯಾಮಲೆಯು “ ಬೇಡವಮ್ಮಾ ಬೇಡ! ಆ ಗೊಂದಲವೆಲ್ಲಾ ಬೇಡ! ಮನೆಗೆ ಬಾಡಿಗೆ ಕೊಡಬೇಕು. ಉಪಾಧ್ಯಾಯಿನಿಯರನ್ನು ನೇಮಿಸಬೇಕು. ಎಲ್ಲರಿಗೂ ಸಂಬಳ ಕೊಡಬೇಕು. ಅದಕ್ಕೆ ಊರಿನವರನ್ನೆಲ್ಲಾ ಚಂದಾ ಕೇಳಬೇಕು. ಇದೊಂದು ವ್ಯಾಪಾರ ಹಚ್ಚಿದರೆಂದು ದ್ವೇಷಿಗಳು ಬೈದರೆ ಬೈಸಿಕೊಳ್ಳಬೇಕು. ಇದನ್ನೆಲ್ಲಾ ಮಾಡುವ ಶಕ್ತಿಯೂ ನಮಗಿಲ್ಲ. ಆದರಿಂದ ಒಳ್ಳೆಯ ಹೆಸರೂ ಬರುವುದಿಲ್ಲ ” ಎಂದಳು.

ತಾರೆಯು “ ಇದೇನು ಅತ್ತಿಗೆ ಯಾವುದಕ್ಕೂ ಹೀಗೆ ನಿರುತ್ಸಾಹ ಮಾಡುತ್ತೀರಿ ? ಒಂದು ಸೇವಾ ಕಾರ್ಯ ಮಾಡೋಣವೆಂದರೆ ಅದಕ್ಕೆ ನೀವು ಅಡ್ಡಿ ” ಎಂದಳು.

ಶ್ಯಾಮಲೆಯು ನಕ್ಕು “ ಅದೆಲ್ಲಾ ಶಾಶ್ವತವಾಗಿ ನಡೆಯುವುದಿಲ್ಲ ” ಎಂದಳು.

ನಾಣಿ, ಡಾಕ್ಟರು, ವಾಸು ಮೂವರೂ ಒಟ್ಟುಗೂಡಿ ಈ ಸ್ಕೂಲಿನ ವಿಷಯ ಆಲೋಚಿಸಿದರು ಮೂವರೂ ಒಂದೊಂದು ಸಾವಿರ ರೂಪಾಯಿಗಳನ್ನು ಹಾಕುವುದೆಂದೂ ಒಂದು ವರ್ಷ ಪಾಠಶಾಲೆ ನಡಸಿ ಆಮೇಲೆ ಹೇಗಾಗುವುದೋ ನೋಡಬೇಕೆಂದೂ ತೀರ್ಮಾನಿಸಿದರು

“ ಡಾಕ್ಟರ್ ! ನೀವು ಯಾವಾಗಲೂ ಪೂರ್ವಾಪರ ಯೋಚಿಸುವುದಿಲ್ಲ. ಈ ವರ್ಷವೇನೋ ನಡೆಯುತ್ತದೆ. ಮುಂದಿನ ವರ್ಷ ಏನು ಮಾಡುವುದು ? ” ಎಂದು ವಾಸುವು ಕೇಳಿದನು.

ಡಾಕ್ಟರು “ ಹಿಂದು ಮುಂದು ನೋಡುತ್ತಾ ಕುಳಿತರೆ ಯಾವ ಕೆಲಸ ನಡೆಯುತ್ತದೆ. ಮಾನ್ಯ ಗೋಖಲೆಯವರ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ ಹೇಗಾಯಿತು, ಆನಿ ಬೆಸೆಂಟರವರ ಥಿಯಸಾಫಿಕಲ್ ಸೊಸೈಟಿ ಹೇಗಾಯಿತು. ಯಾರೋ ಸ್ಥಾಪಿಸುತ್ತಾರೆ ಯಾರೋ ನಡಸಿಕೊಂಡು ಹೋಗುತ್ತಾರೆ. ಇದೇ ದೇಶಸೇವೆಯ ಸೂತ್ರ. ನೀನು ಯಾವಾಗಲೂ ನಿರಾಶಾವಾದಿ !”

ಎಂದರು.

ಎಲ್ಲವೂ ಇತ್ಯರ್ಥವಾಗಿ ಹೋಯಿತು. ಲಕ್ಷ್ಮೀಪುರದಲ್ಲಿಯೇ ದೊಡ್ಡ ದೊಂದು ಮನೆಯನ್ನು ಬಾಡಿಗೆಗೆ ಗೊತ್ತುಮಾಡಿದರು. ಒಳ್ಳೆಯ ದಿನವನ್ನು ನೋಡಿ ಪಾಠಶಾಲೆ ಆರಂಭಿಸುವುದು ಎಂದು ಗೊತ್ತಾಯಿತು.

ಚಪ್ಪರ ತಳಿರು ತೋರಣಗಳು ಸಿದ್ಧವಾದುವು. ರಾಷ್ಟ್ರಧ್ವಜಗಳು ಹಾರಾಡತೊಡಗಿದುವು. ಪುರಪ್ರಮುಖರೆಲ್ಲರೂ ಸೇರಿದರು. 'ಮೈಸೂರು ಶಿಶು ವಿಹಾರ' ಆರಂಭೋತ್ಸವಕ್ಕೆ ಮಾನ್ಯ ಮಂತ್ರಿಗಳು ಬಂದಿದ್ದರು. ಬಹುಮಂದಿ ಮಹಿಳೆಯರೂ ಸೇರಿದ್ದರು. ಕಾಂಗ್ರೆಸ್ ಮುಖಂಡರುಗಳೂ ಬಂದಿದ್ದರು. ಪಾಠಶಾಲೆಯ ಆರಂಭೋತ್ಸವವು ಬಹಳ ವಿಜೃಂಭಣೆಯಿಂದ ನೆರವೇರಿತು. ನಾರಾಯಣರಾಯನ ಉಜ್ವಲ ಭಾಷಣವಾಯಿತು. ಮಾನ್ಯ ಮಂತ್ರಿ ಶ್ರೀ ಚಂಗಲರಾಯರೆಡ್ಡಿಯವರ ಭಾಷಣವಾಯಿತು. ಕಾಂಗ್ರೆಸ್ ಮುಖಂಡರಾದ ನಾರಾಯಣರಾಯರ ಸೇವಾಧರ್ಮವನ್ನು ಅವರು ಪ್ರಶಂಸಿಸಿದರು. ಆದರ್ಶ ಕಾಂಗ್ರೆಸ್ ಭಕ್ತರೆಂದು ಎಲ್ಲರೂ ನಾರಾಯಣರಾಯರನ್ನು ಹೊಗಳಿದರು. ಶ್ಯಾಮಲೆಯು ಹೆಂಗಸರ ಮಧ್ಯದಲ್ಲಿ ಗೌರವವಾಗಿ ಕುಳಿತಿದ್ದಳು. ತಾರೆಯು ಎಲ್ಲರಿಗೂ ಗಂಧಪುಷ್ಪಗಳನ್ನು ಹಂಚುತ್ತಿದ್ದಳು.

ಪಾಠಶಾಲೆಯು ಆರಂಭವಾಯಿತು. ತಾರೆ ಮತ್ತು ಶ್ಯಾಮಲೆ ಇಬ್ಬರೇ ಉಪಾಧ್ಯಾಯನಿಯರು. ಅವರುಗಳಿಗೆ ಮನೆಯ ಕೆಲಸಗಳನ್ನು ಮಾಡುವುದಕ್ಕೆ ಪುರುಸತ್ತೇ ಸಿಗುತ್ತಿರಲಿಲ್ಲ.

ಶಾಲೆಯ ಚಟುವಟಿಕೆಗಳನ್ನು ನೋಡಿ ಡಾಕ್ಟರು, ನಾಣಿ ಮತ್ತು ವಾಸು ಪರಮಾನಂದಭರಿತರಾಗಿದ್ದರು. ಅವರುಗಳು ಬಹಳ ಸುಲಭವಾಗಿ ಪಾಠಶಾಲೆ ಯನ್ನು ಸ್ಥಾಪಿಸಿಬಿಟ್ಟಿದ್ದರು. ಮಂತ್ರಿಗಳೂ ಪುರಪ್ರಮುಖರೂ ಎಲ್ಲರೂ ಬಂದು ಅವರುಗಳ ಸೇವಾಕಾರ್ಯವನ್ನು ಪ್ರಶಂಸಿಸಿದ್ದರು. ಸ್ವರಾಜ್ಯ ಬಂದಮೇಲೆ ಇದಕ್ಕಿಂತಲೂ ಹೆಚ್ಚಿನ ಸೇವಾಕಾರ್ಯವು ಯಾವುದೂ ಇಲ್ಲವೆಂದು ಅವರು ಭಾವಿಸಿದ್ದರು.

ಅವರು ಮೂವರು ಮಾತನಾಡುತ್ತಾ ಕುಳಿತಿರುವಾಗ ಡಾಕ್ಟರು "ಏನಯ್ಯಾ

ವಿಚಿತ್ರ! ಈ ಪಾಠಶಾಲೆಯ ನಿಜವಾದ ಸ್ಥಾಪಕರಾರು? ಶ್ಯಾಮಲಮ್ಮ ಮತ್ತು ತಾರಾದೇವಿಯವರ ಮಾತುಗಳನ್ನೇ ಯಾರೂ ಎತ್ತಲಿಲ್ಲ" ಎಂದರು.

ತಾರೆಯು "ಮೊದಲೇ ಆ ಮಾತು ನಿಶ್ಚಯವಾಗಿತ್ತು. ಶ್ಯಾಮಲೆಯು ಯಾರಾದರೂ ತನ್ನ ಹೆಸರೆತ್ತಿದರೆ ಓಡಿ ಹೋಗುವುದಾಗಿ ಹೇಳಿದ್ದಳು. ತಾರೆಯೂ ನೀವು ನನ್ನ ಹೆಸರನ್ನೆತ್ತಿದರೂ ಒಂದೇ, ಬಿಟ್ಟರೂ ಒಂದೇ!" ಎಂದು ಹೇಳಿದ್ದಳು.

ಪಾಠಶಾಲೆಯು ಸುವ್ಯವಸ್ಥೆಯಿಂದ ನಡೆಯಲು ಆರಂಭವಾಯಿತು. ಎಲ್ಲರೂ ಆ ಶಾಲೆಯನ್ನು "ಶ್ಯಾಮಲಾ ಶಿಶುವಿಹಾರ" ಎಂದೇ ಕರೆಯುತ್ತಿದ್ದರು. ಶ್ಯಾಮಲೆಯ ಹೆಸರು ಕೇಳಿ ನಾಲ್ಕಾರು ಸ್ತ್ರೀಯರು ಬಂದು ಸೇರಿದರು. ಇವರೆಲ್ಲರೂ ಅನಾಥರು. ಪರಿತ್ಯಕ್ತೆಯರು. ಅವರು ಆ ಶಾಲೆಯಲ್ಲಿ ಉಪಾಧ್ಯಾಯಿನಿಯರು; ಕೆಲಸಗಾರರು. ಶ್ಯಾಮಲೆಯ ಸುತ್ತಲೂ ಈ ಗುಂಪು ಹೆಚ್ಚಿತು. ಅವಳು ನಾಣಿಯೊಂದಿಗೆ "ಅಣ್ಣ ನನ್ನ ಸಂಸಾರ ಬೆಳೆದಿದೆ. ನಾನು ಯಾರನ್ನೂ ಬಿಡುವಂತಿಲ್ಲ. ನಮ್ಮ ಸಮಾಜವು ಇವರನ್ನು ಗೌರವಿಸುವುದಿಲ್ಲ. ಕಸಕ್ಕಿಂತ ಕಡೆಯಾಗಿ ಕಾಣುತ್ತಿದೆ. ನಿಮ್ಮ ಸಂಸಾರದಲ್ಲಿ ನಾವು ಇನ್ನು ಮುಂದೆ ಇರುವುದಕ್ಕಾಗುವುದಿಲ್ಲ" ಎಂದಳು.

"ಬೇರೆ ಮನೆಯನ್ನು ಮಾಡೋಣ. ಆದರೆ ಆ ಮನೆಯನ್ನು ನೋಡಿಕೊಳ್ಳುವವರಾರು?"

"ನಮ್ಮ ಮನೆಯನ್ನು ನಾವೇ ನೋಡಿಕೊಳ್ಳುತ್ತೇವೆ."

ಬೇರೆಯ ಮನೆಯೂ ಏರ್ಪಾಡಾಯಿತು. ಅದು ಶ್ಯಾಮಲೆಯ ಮನೆ. ಐದಾರು ಅನಾಥ ಸ್ತ್ರೀಯರು ಆ ಮನೆಯ ಪರಿವಾರ. ಅದೊಂದು ಅನಾಥಾಶ್ರಮ.

ಒಂದು ಕಡೆ ಶ್ಯಾಮಲೆಯ ಪಾಠಶಾಲೆ ಮತ್ತೊಂದು ಕಡೆ ಅನಾಥ ಸ್ತ್ರೀಯರ ನಿಲಯ. ಆ ಸ್ತ್ರೀಯರುಗಳನ್ನೇ ಪಾಠಶಾಲೆಯ ಉಪಾಧ್ಯಾಯಿನಿಯರುಗಳಾಗಿ ಶ್ಯಾಮಲಾ ತಯಾರು ಮಾಡಿದ್ದಳು. ಸ್ತ್ರೀಯರೇ ಈ ಸಂಸ್ಥೆಗಳನ್ನು ನೋಡಿ ಧನಸಹಾಯ ಮಾಡುತ್ತ ಬಂದರು.

ಶ್ಯಾಮಲೆಯು ಮನೆಗೆ ಬರುವುದೇ ಅಪರೂಪವಾಯಿತು. ತಾರೆಯು ಒಬ್ಬಂಟಿಗಳಾದಳು. ಶ್ಯಾಮಲೆಯಿಲ್ಲದ ಮನೆಯು ತಾರೆಗೆ ಮರುಭೂಮಿಯಂತಾಯಿತು. ತಾರೆಯು ಆಗಾಗ ಶ್ಯಾಮಲೆಯನ್ನು ಬಲಾತ್ಕಾರವಾಗಿ ಮನೆಗೆ ಕರತರುತ್ತಿದ್ದಳು. ತಾರೆಯ ಸ್ನೇಹಬಂಧನದಿಂದ ಬದ್ಧಳಾದರೂ ಶ್ಯಾಮಲೆಯು ಸಂಧ್ಯಾಕಾಲ ಪ್ರಾರ್ಥನೆಯಾದನಂತರ ಮನೆಗೆ ಬಂದುಬಿಡುತ್ತಿದ್ದಳು.

ವಾಸುವು ವಿಶೇಷವಾಗಿ ತಾರೆಯ ಮನೆಯಲ್ಲಿಯೇ ಕಾಲ ಕಳೆಯುತ್ತಿದ್ದನು. ಏಕೆ ಅವನು ಸರ್ವದಾ ತಾರೆಯ ಮನೆಯಲ್ಲಿಯೇ ತೊಳಲುತ್ತಿದ್ದನೆಂಬುದು ಅವನಿಗೇ ತಿಳಿದಿರಲಿಲ್ಲ.

ಒಂದು ದಿನ ತಾರೆಯು ವಾಸುವಿನೊಡನೆ ಮಾತನಾಡುತ್ತಾ "ವಾಸು! ಈ ಶ್ಯಾಮಲೆಯು ಈ ಪಾಠಶಾಲೆ ಆಶ್ರಮಗಳಲ್ಲಿ ಮುಳುಗಿದ್ದಾಳೆ. ಅದೊಂದು ಸಮಾಜಸೇವೆಯೆನ್ನುತ್ತಾಳೆ. ನನಗೇನೋ ಹಾಗೆ ಕಾಣುವುದಿಲ್ಲ" ಎಂದಳು.

"ಯಾವುದು ಸಮಾಜ ಸೇವೆಯೋ ಯಾವುದು ಅಲ್ಲವೋ ನನಗೆ ತಿಳಿಯುವುದಿಲ್ಲ. ಆದರೆ ಶ್ಯಾಮಲೆಗೆ ಇದು ತಕ್ಕದ್ದಲ್ಲ. ಅವಳಿಗೆ–ಸಂಸಾರವು ಒಡೆದು ಹೋಗಿ ಮನಸ್ಸು ಚೂರು ಚೂರಾಗಿ ಹೋಗಿದೆ. ಆದ್ದರಿಂದ ಈ ಆಶ್ರಮಗಳ ಹವ್ಯಾಸವನ್ನು ಕಟ್ಟಿಕೊಂಡಿದ್ದಾಳೆ."

"ಶ್ಯಾಮಲೆಯು ಇನ್ನು ಯಾವ ರೀತಿ ಜೀವನವನ್ನು ಸಾಗಿಸಬಹುದಾಗಿತ್ತು?"

"ಅವಳು ವಿದ್ಯಾವತಿ. ಬೇರೊಬ್ಬ ಪತಿಯನ್ನು ವರಿಸಿ ಸಂಸಾರವಂದಿಗಳಾಗಿರಬಹುದಾಗಿತ್ತು."

"ಆಹಾ! ಎಂತಹ ಮಾತನಾಡುವೆ? ಈ ಸಮಾಜವು ಅಂಥ ದಂಪತಿಗಳನ್ನು ಎಷ್ಟು ನಿಕೃಷ್ಟವಾಗಿ ಕಾಣುತ್ತದೆ. ಈ ಸಮಾಜದ ತಿರಸ್ಕಾರವನ್ನು ಸಹಿಸುವುದು ಯಾರಿಂದ ಸಾಧ್ಯವಾದೀತು?"

"ಉಚ್ಚ ಶಿಕ್ಷಿತ ಸಮಾಜದಲ್ಲಿ ಅದು ದೋಷವಾಗಿ ಪರಿಗಣಿತವಾಗಿಲ್ಲ."

" ಶ್ಯಾಮಲೆಯ ಸ್ವಭಾವ ತುಂಬ ತೀಕ್ಷ್ಣವಾದುದು. ಅವಳು ಯಾರೊಡನೆ ಸಂಸಾರ ಮಾಡಲೊಪ್ಪುತ್ತಾಳೆ ? " ಎಂದಳು.

ವಾಸುವು ನಕ್ಕು " ಅವಳ ಸ್ವಭಾವ ಎಷ್ಟು ತೀಕ್ಷ್ಣವೋ ಅಷ್ಟೂ ಮೃದುವಾದುದು. ಅವಳನ್ನು ಪಡೆಯುವ ಪುರುಷನು ಪುಣ್ಯವಂತ " ಎಂದನು.

ತಾರೆ " ವಾಸು ! ನಿನ್ನ ಪುರಾಣವು ಸಾಕು ! ಶ್ಯಾಮಲೆಗೆ ಮತ್ತೊಂದು ಮದುವೆ ಮಾಡುವುದಕ್ಕೆ ನೀನಾರು ? ನಾನಾರು ? " ಎಂದು ಆ ಮಾತನ್ನು ಅಲ್ಲಿಗೆ ನಿಲ್ಲಿಸುವಂತೆ ಹೇಳಿದಳು.

" ಅದು ನಿಜ ! ಆದರೆ ಶ್ಯಾಮಲೆಯ ಮಾತನ್ನೆತ್ತಿದವಳು ನೀನು ! "

" ಹೌದು ! ಶ್ಯಾಮಲೆಯ ಮಾತು ಹಾಗಿರಲಿ ! ನೀನೆಷ್ಟು ಮೂರ್ಖ. ಮದುವೆ ಮಾಡಿಕೊಳ್ಳದೇ ನಮ್ಮೆಲ್ಲರ ಮನಸ್ಸನ್ನೂ ನೋಯಿಸುತ್ತಿದ್ದೀ ! "

" ನಾನೂ ಶ್ಯಾಮಲೆಯಂತೆಯೇ ! ನನ್ನ ಮದುವೆಯ ಮಾತು ನಿಮಗೇಕೆ ? "

ತಾರೆಯು ಸುಮ್ಮನಾದಳು. ಆದರೆ ಬಹು ದಿನ ಈ ಸಮಸ್ಯೆಯನ್ನು ಮುಚ್ಚಿಡಲು ವಾಸುವು ಸಮರ್ಥನಾಗಲಿಲ್ಲ. ಅವನು ಶ್ಯಾಮಲೆಯಲ್ಲಿ ಸಂಪೂರ್ಣ ಅನುರಕ್ತನಾಗಿದ್ದಾನೆಂದು ತಾರೆಯು ಕಂಡುಕೊಂಡಳು. ಅವಳಿಗೆ ಮೊದ ಮೊದಲು ಇದೆಂತಹ ವಿಪರೀತ ಎಂದು ತೋರುತ್ತಿತ್ತು. ಕ್ರಮೇಣ ಏಕಾಗ ಬಾರದು, ಶ್ಯಾಮಲೆ ವಾಸುದೇವನೂ ಪತಿ ಪತ್ನಿಯರಾದರೆ—ಆ ಸಂಸಾರವು ಎಷ್ಟು ಶೋಭಿಸುತ್ತದೆ, ಎಂದು ಚಿಂತಿಸತೊಡಗಿದಳು. ಈ ಚಿಂತೆಯು ಪದೇ ಪದೇ ಏಕೆ ಅವಳಿಗೆ ಬರುತ್ತಿತ್ತೋ ಅದನ್ನವಳರಿಯಳು ! ಆ ಕಲ್ಪನೆಯು ಅವಳಿಗೆ ಸಹಜವೆಂದು ಕಾಣುತ್ತಿತ್ತು. ಆದರೆ ಒಮ್ಮೊಮ್ಮೆ ಪೂರ್ಣ ಅಸಹಜವೆಂದೂ ಅವಳಿಗೆ ಬೋಧೆಯಾಗುತ್ತಿತ್ತು.

## ೨೧

ರಂಗರಾಯನ ಜೀವನದಲ್ಲಿ ಅನೇಕ ಪರಿವರ್ತನೆಗಳುಂಟಾಗಿದ್ದುವು. ಈಗ ಅವನು ಬಹಿರಂಗವಾಗಿ ಕಾಂಗ್ರೆಸ್ ಭಕ್ತ. ಗಾಂಧೀ ಟೋಪಿಯನ್ನು ಧರಿಸುತ್ತಾನೆ. ಮಂತ್ರಿಗಳು ಯಾರೇ ಬರಲಿ, ರಂಗರಾಯನಿಗೆ ಮೊದಲನೆಯ ಭೇಟಿ. ಕಾಂಗ್ರೆಸ್ಸಿನವರೆಲ್ಲಾ ತನ್ನನ್ನು ಗೌರವಿಸುತ್ತಾರೆಂದು ಅವನ ದೃಢ ಭಾವನೆ. ಡಾಕ್ಟರ್ ಸುಬ್ಬರಾಯರೂ ರಂಗರಾಯನೂ ಈಗ ಬಹಳ ಸ್ನೇಹಿತರು. ಸುಬ್ಬರಾವ್ ನಾರಾಯಣರಾಯನ ಮನೆ ಡಾಕ್ಟರು. ಆಗಾಗ ಶ್ಯಾಮಲೆ ಮತ್ತು ತಾರೆಯರ ಸಮಾಚಾರವನ್ನು ರಂಗರಾಯನಿಗೆ ಬಂದು ಹೇಳುತ್ತಿದ್ದರು. ರಂಗರಾಯನಿಗೆ ಶ್ಯಾಮಲೆಯ ಸಮಾಚಾರವನ್ನು ಕೇಳುವ ಚಪಲ. ಒಂದು ದಿನ ಅವನು ಡಾಕ್ಟರ ಷಾಪಿಗೆ ಬಂದು ಡಾಕ್ಟರನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಮಹಡಿಯ ಮೇಲೆ ಕರೆದೊಯ್ದು ಕೂಡಿಸಿಕೊಂಡನು. ಸಂಭ್ರಮವಾಗಿ ಗ್ಲಾಸಿನಲ್ಲಿ ಸೋಡಾ ವಿಸ್ಕಿ ಬೆರಸಿ ಡಾಕ್ಟರಿಗೆ ಕೊಟ್ಟನು. ಇಬ್ಬರೂ ಸೇವನೆ ಮಾಡುತ್ತಾ ಮಾತಿಗೆ ಮೊದಲಿಟ್ಟರು.

ಡಾಕ್ಟರ್ " ಏನಯ್ಯಾ ! ನೀನು ಈಗ ಕುಡಿತದಲ್ಲಿ ಖದೀಮನಾಗಿ ಬಿಟ್ಟಿದ್ದೀಯೆ. ನಿನ್ನ ಹೆಂಡತಿಯು ಹೊರಟು ಹೋದ ಮೇಲೆ ನಿನಗೆ ಪೂರ್ಣ ಸ್ವಾತಂತ್ರ್ಯ ಬಂದುಹೋಗಿದೆ " ಎಂದರು.

" ಅದೇನೂ ಇಲ್ಲ. ಶ್ಯಾಮಲೆಯು ನನ್ನ ಪಾನಕ್ಕೆ ಎಂದೂ ಅಡ್ಡಿ ಮಾಡುತ್ತಿರಲಿಲ್ಲ. ನನಗೆ ಯಾವುದು ಸುಖವೋ ಅದೇ ಅವಳ ಸಂತೋಷ. ಬಹು ಒಳ್ಳೇ ಹುಡುಗಿ. ಆದರೆ ಬಲು ಮೂರ್ಖ ಹೆಣ್ಣು. "

" ನೀನು ಈಗ ತಾಜಾ ಹದಿನಾರಾಣೆ ಕಾಂಗ್ರೆಸ್ಸಿನವನಾಗಿದ್ದಿ. ಇದು

ಕಾಂಗ್ರೆಸ್ಸಿನವರಿಗೆ ತಿಳಿದರೆ ಸುಮ್ಮನಿರುತ್ತಾರೆಯೇ ? "

" ನಿನಗೆ ಕಾಂಗ್ರೆಸ್ ವಿಚಾರ ಗೊತ್ತಿಲ್ಲ. ನನ್ನ ಸ್ವಂತ ಆಚಾರ ವ್ಯವಹಾರ ನಡತೆಗಳಲ್ಲಿ ಅವರು ತಲೆ ಹಾಕುವುದಿಲ್ಲ. ಕಾಂಗ್ರೆಸ್ಸಿನ ಸೇವೆ ದೇಶಸೇವೆಯನ್ನು ಚೆನ್ನಾಗಿ ಮಾಡಿಬಿಟ್ಟರೆ ಸರಿ ! "

" ಹಾಗಾದರೆ ನಿನ್ನನ್ನು ಅವರೆಲ್ಲರೂ ಗೌರವಿಸುತ್ತಾರೆಯೇ ? "

" ಗೌರವಿಸುವುದೇ ? ಶರಣಾಗತರಾಗಿದ್ದಾರೆ. ಗಾಂಧೀ ನಿಧಿ ! ಕಸ್ತೂರಿಬಾ ನಿಧಿ ! ಇದೆಲ್ಲಾ ನಾನಿಲ್ಲದಿದ್ದರೆ ಮೈಸೂರಿನಲ್ಲಿ ತಲೆ ಏಳುತ್ತಲೇ ಇರಲಿಲ್ಲ. ಅವರಿಗೆಲ್ಲಾ ಆಶ್ಚರ್ಯ. ಈ ಯುಗದಲ್ಲಿ ದುಡ್ಡಿಗಿಂತಲೂ ದೊಡ್ಡದು ಯಾವುದಿದೆಯಯ್ಯಾ ! "

" ಹಾಗಾದರೆ ನೀನೂ ಒಂದು ದಿನ ಮಂತ್ರಿಯಾಗಿ ಬಿಡುತ್ತೀ "

ರಂಗರಾಯನು ದೊಡ್ಡ ನಗುವನ್ನು ನಕ್ಕು " ಅದೇನು ದೊಡ್ಡ ಮಾತು ! ಅವರು ಈಗಲೇ ನನ್ನನ್ನು ಮಂತ್ರಿಮಂಡಲಕ್ಕೆ ತೆಗೆದುಕೊಳ್ಳಲು ಸಿದ್ಧ " ಎಂದ.

" ಮತ್ತೇಕೆ ಮಂತ್ರಿಯಾಗಿಬಿಡಬಾರದು. ಅದೂ ಒಂದು ಕೈ ನೋಡಿಬಿಡು ! "

" ಅಯ್ಯೋ ! ಆಮೇಲೆ ನಮ್ಮ ವ್ಯಾಪಾರ ಸಾಪಾರ ಇದನ್ನೆಲ್ಲಾ ನಡಸುವರಾರು ? "

" ಇದೇನು ಹೀಗೆ ಮಾತನಾಡುತ್ತೀ ! ಈ ಕಾಲದಲ್ಲಿ ವ್ಯಾಪಾರವೇ ರಾಜ್ಯಭಾರ. "

ಮತ್ತೊಂದು ಬಾರಿ ಪಾನಪಾತ್ರೆಗೆ ಪಾನೀಯವನ್ನು ಬಗ್ಗಿಸಿಕೊಂಡು ಇಬ್ಬರೂ ಕುಡಿದರು.

" ಹಾಗಾದರೆ ಸರ್ ಚೆಟ್ಟರ ಸ್ನೇಹಕ್ಕಿಂತ ಇದೇ ಒಳ್ಳೇಯದಾಯಿತು."

" ಅಲ್ಲವೇ ಮತ್ತೆ ! ಈ ಕಾಲದಲ್ಲಿ ಇದೇ ಗೌರವ ! ನನಗೇನು ಕಡಿಮೆ. ಆದರೆ.... "

" ಆ ' ಆದರೆ ! ' ಏನು ? "

" ಆ ಶ್ಯಾಮಲೆ! ಕೈಕೊಟ್ಟುಬಿಟ್ಟಳು. ಅದೇ ನನ್ನ ಕೊರತೆ. "

ಡಾಕ್ಟರ್ ನಗುತ್ತಾ " ಅವಳೇನು ಕೈಕೊಟ್ಟಳು! ಅವಳೂ ದೇಶಸೇವೆ ಮಾಡುತ್ತಾ ಗೌರವವಾಗಿಯೇ ಇದ್ದಾಳೆ. " ಎಂದು ಹೇಳಿದರು.

ರಂಗರಾಯನು ವಿಷಣ್ಣವದನನಾಗಿ " ಅದೆಂಥಾ ದೇಶಸೇವೆ ಡಾಕ್ಟರ್, ಇಂಥಾ ಮನೆಯಲ್ಲಿ ಗೌರವವಾಗಿರದೇ ಎಲ್ಲಿಯೋ ಸ್ಕೂಲು, ಎಲ್ಲಿಯೋ ವನಿತಾಶ್ರಮ! ಇದೆಲ್ಲಾ ವೃದ್ಧನಾರಿಯರು ಮಾಡುವ ಕೆಲಸ! ಶ್ಯಾಮಲೆ! ತುಂಬು ಯೌವನದ ಪ್ರೌಢೆ. ವಿದ್ಯಾವತಿ ' ಮಾತಿನಲ್ಲಿ ಚತುರೆ! ಸೌಂದರ್ಯದ ಖನಿ! ಅವಳು ಈ ಮನೆಯಲ್ಲಿದ್ದಿದ್ದರೆ ಆ ಗೌರವವೇ ಬೇರೆ! " ಎಂದ.

" ಇಷ್ಟು ಅಭಿಲಾಷೆಯುಳ್ಳವನು ಶ್ಯಾಮಲೆಯನ್ನೇಕೆ ಕಳಿಸಿಬಿಟ್ಟೆ ? "

" ಆ ಕಥೆ ನಿನಗೆಲ್ಲಿ ಗೊತ್ತು? ಅವಳೇ ಓಡಿಹೋದಳು. ಈ ಪಾಠಶಾಲೆ ಆಶ್ರಮ ಇದೆಲ್ಲಾ ಹೊರಗಿನ ಆಡಂಬರ! ನನಗೆ ಗೊತ್ತು ಅವಳು ಈಗ ವ್ಯಥೆ ಪಡುತ್ತಲೇ ಇದಾಳೆ! ನೋಡು! ಡಾಕ್ಟರ್, ನೀನು ನನಗೆ ಪರಮ ಆಪ್ತ! ನಿನ್ನಲ್ಲಿ ಹೇಳದೇ ಏನು? ಆ ವಾಸು! ಅವನ ಸಹವಾಸದಿಂದ ಅವಳಿಗೆ ಈಗ ಬಹಳ ಕೆಟ್ಟ ಹೆಸರು! ಅಪವಾದ ತಪ್ಪದು. "

" ಅದೆಲ್ಲಾ ಏನು? ನೀನು ಚೆನ್ನಾಗಿ ಕುಡಿದಿದ್ದಿ. ಏನೇನೋ ಮಾತನಾಡುತ್ತಿ. ಶ್ಯಾಮಲೆಯು ಶುದ್ಧ ಚಾರಿತ್ರ್ಯಳೆಂದು ಲೋಕವೇ ಒಪ್ಪುತ್ತದೆ. "

" ನಾನು ಕುಡಿದಿದ್ದರೂ ಸಮಸ್ಥಿತಿಯಲ್ಲಿರುತ್ತೇನೆ. ನನಗೆ ಮೊದಲು ತಿಳಿದಿರಲಿಲ್ಲ. ಆ ವಾಸುವು ಮೊದಲಿನಿಂದಲೂ ಅವಳಿಗೆ ಮಾಯ ಮಾಡಿದ್ದಾನೆ. ಅವಳೂ ವಾಸುವೂ ದಂಪತಿಗಳಂತೆಯೇ ಇದಾರೆಂದು ನನಗೆ ಗೊತ್ತಾಗಿದೆ. ಅದೇ ನನ್ನ ಮನೋವ್ಯಥೆ. ಶ್ಯಾಮಲೆಯು ನನ್ನ ವಸ್ತು–ಅವರಿಬ್ಬರನ್ನು ನಾನು ಒಂದೇ ಘಳಿಗೆಯಲ್ಲಿ ಮುಗಿಸಿಬಿಡಬಲ್ಲೆ! "

" ಅಲ್ಲಿಗೆ ನಿನ್ನ ಅಧ್ಯಾಯವೂ ಪೂರೈಸುತ್ತದೆ. ಅದೆಲ್ಲಾ ಶುದ್ಧ ಸುಳ್ಳು! ನನ್ನ ಮಾತನ್ನು ಕೇಳು. ನಿನಗೆ ನಾನೊಂದು ಗುಟ್ಟು ಹೇಳುತ್ತೇನೆ. ಆ ವಾಸುವು ಶುದ್ಧ ಹೆಣ್ಣಿಗ! ನಪುಂಸಕ! ಅವನನ್ನು ನೆನೆದು ನೀನು ಕಲ್ಪನಾ ಪ್ರಪಂಚದಲ್ಲಿ ಮುಳುಗಿ ಅಂಧನಾಗಿದ್ದೀಯೆ. "

" ಡಾಕ್ಟರ್ ! ಶ್ಯಾಮಲೆಯನ್ನು ಶುದ್ಧ ಚಾರಿತ್ರ್ಯಳೆಂದು ಒಪ್ಪುತ್ತೀಯಾ ? ಹಾಗಾದರೆ ನನ್ನಂತಹ ಪುಣ್ಯವಂತರಾರಿದ್ದಾರೆ. ನೀನು ಆ ಶ್ಯಾಮಲೆಯನ್ನು ನಮ್ಮ ಮನೆಗೆ ಬರುವಂತೆ ಮಾಡಿದರೆ ನಾನು ನಿನಗೆ ಚಿರಋಣಿಯಾಗಿ ರುತ್ತೇನೆ. "

" ನಾನು ಏನಾದರೂ ಮಾಡುತ್ತೇನೆ. "

ರಂಗರಾಯನು ಎದ್ದು ಡಾಕ್ಟರನ್ನು ಬಾಚಿ ತಬ್ಬಿಕೊಂಡನು. " ಡಾಕ್ಟರ್ ನೀನು ನನ್ನ ಪರಮ ಮಿತ್ರ. "

ಡಾಕ್ಟರು ತಮ್ಮ ಮನೆಗೆ ಹೊರಟುಹೋದರು. ರಂಗರಾಯನು ಮತ್ತೊಮ್ಮೆ ಪಾನಮಾಡಿದನು. ತನ್ನ ಮಂಚದ ಮೇಲೆ ಅಸ್ತವ್ಯಸ್ತವಾಗಿ ಬಿದ್ದುಕೊಂಡನು. ರಾತ್ರಿಯೆಲ್ಲವೂ ಅವನಿಗೆ ಸ್ವಪ್ನಮಯವಾಗಿತ್ತು. ಶ್ಯಾಮ ಲೆಯ ನೆನಪು ! ಶ್ಯಾಮಲೆಯು ತನ್ನ ಬಳಿಗೆ ಬಂದು ಪುನಃ ಪರಿಗ್ರಹಿಸ ಬೇಕೆಂದು ಬೇಡಿಕೊಂಡಂತೆ ! ತಾನು ಶ್ಯಾಮಲೆಯನ್ನು ಪರಿಗ್ರಹಿಸಿ ಆಕಾಶಕ್ಕೆ ಹಾರಿಹೋದಂತೆ ; ಶ್ಯಾಮಲೆಯೊಡನೆ ಗಂಧರ್ವಲೋಕದಲ್ಲಿ ಮೆರೆಯುತ್ತಿರು ವಂತೆ ! ಸ್ವಪ್ನಗಳು ! ಬೆಳಕು ಹರಿಯಿತು, ಕಣ್ಣು ಬಿಟ್ಟು ನೋಡಿದನು. ಅದೇ ಶೂನ್ಯಗೃಹ ; ಖಾಲಿಯಾಗಿರುವ ವ್ಹಿಸ್ಕಿ ಸೀಸೆ, ಗಾಜಿನಬಟ್ಟಲು !

ರಂಗರಾಯನು ಸ್ನಾನಾದಿಗಳನ್ನು ತೀರಿಸಿಕೊಂಡು ಸುಮಾರು ಒಂಭತ್ತು ಗಂಟೆಯ ಸಮಯದಲ್ಲಿ ಬೀದಿಯ ಜಗುಲಿಗೆ ಬಂದನು. ಅವನ ಮ್ಯಾನೇಜರ್ ಶ್ರೀಕಂಠಯ್ಯನು ಅಲ್ಲಿ ಸಾಹುಕಾರರಿಗಾಗಿ ಕಾದಿದ್ದನು. ಸಾಹುಕಾರರು " ಏನು ಶ್ರೀಕಂಠಯ್ಯ, ಏಕೆ ಬಂದೆ ? " ಎಂದು ಕೇಳಿದರು.

" ಸ್ವಾಮೀ ! ನಿನ್ನೆ ಒಂದು ಅಚಾತುರ್ಯ ನಡೆದುಹೋಗಿದೆ. ಹೇಳಿ ಬಿಡೋಣವೆಂದು ಬಂದೆ. "

" ಏನದು ? "

" ನಮ್ಮ ಮಂಡಿಯಲ್ಲಿ ನೂರು ಪಲ್ಲಾ ಅಕ್ಕಿ ಇದೆಯೆಂದು ಅಧಿಕಾರಿ ಗಳು ಗೊತ್ತುಹಚ್ಚಿ ಕಾವಲು ಹಾಕಿದ್ದಾರೆ. ಈ ದಿನ ಮಹಜರ್ ನಡ ಸುತ್ತಾರೆ. "

“ಓಹೋ ಇಷ್ಟೇತಾನೇ! ಅದಕ್ಕೆ ಹೆದರಬೇಡ! ನಾನು ಈಗಲೇ ಮಿನಿಸ್ಟರಿಗೆ ಟೆಲಿಫೋನ್ ಮಾಡುತ್ತೇನೆ. ನಮ್ಮ ತಂಟೆಗೆ ಬರುವುದಕ್ಕೆ ಯಾರಿಗೆ ಧೈರ್ಯ ಇದೆ! ನಾನು ಬರುವ ವರೆಗೂ ಅಂಗಡಿಯ ಬಾಗಿಲನ್ನೇ ತೆಗೆಯಬೇಡಿ!”

“ಅಪ್ಪಣೆ ಸ್ವಾಮೀ!” ಎಂದು ಹೇಳಿ ಶ್ರೀಕಂಠಯ್ಯನು ಹೊರಟು ಹೋದನು.

ರಂಗರಾಯನು ಮಹಡಿಯ ಮೇಲೆ ಹೋಗಿ ಬೆಂಗಳೂರಿಗೆ–ಮಂತ್ರಿಗಳಿಗೆ–ಫೋನ್ ಮಾಡಿದನು. ಆದರೆ ಉತ್ತರವೇ ಇಲ್ಲ!

ಮನೆಯ ಆಳು ಬಂದು “ಸ್ವಾಮೀ! ಸಬ್ ಇನ್ಸ್‌ಪೆಕ್ಟರ್ ಬಾಬೂರಾವ್ ಬಂದಿದ್ದಾರೆ” ಎಂದು ತಿಳಿಸಿದನು.

ರಂಗರಾಯನು “ಅವರನ್ನು ಮೇಲಕ್ಕೆ ಕರೆದುಕೊಂಡು ಬಾ!” ಎಂದು ಹೇಳಿದನು.

ಬಾಬೂರಾವ್ ಮೇಲಕ್ಕೆ ಬಂದು ರಂಗರಾಯನ ಭೇಟಿ ಮಾಡಿದನು.

“ಏನು! ಬಾಬೂರಾಯರೇ! ಏನು ಸಮಾಚಾರ?”

“ಸ್ವಾಮೀ ತಮ್ಮ ಮಂಡಿಯಲ್ಲಿ ನೂರು ಮೂಟೆ ಅಕ್ಕಿ ಇದೆಯೆಂದು ಆಹಾರ ಇಲಾಖೆಯವರು ರಿಪೋರ್ಟು ಮಾಡಿದ್ದಾರೆ. ಈಗ ಅದನ್ನು ಮಹಜರ್ ಮಾಡಿ ಸ್ವಾಧೀನಪಡಿಸಿಕೊಳ್ಳಬೇಕು”

“ಆ ಫುಡ್ ಇಲಾಖೆಯವರು ಲಂಚ ತಿಂದು ಕೊಬ್ಬಿಹೋಗಿದ್ದಾರೆ. ಅವರಿಗೆ ತಕ್ಕದ್ದು ಮಾಡಿಸುತ್ತೇನೆ. ನೀವು ಮುಡುಕಬೇಡಿ! ನಾನೀಗ ಬೆಂಗಳೂರಿಗೆ ಮಂತ್ರಿಗಳಿಗೆ ಫೋನ್ ಮಾಡಿದ್ದೇನೆ. ಈಗ ಡೆಪ್ಟೀಕಮೀಷನ್ನರಿಗೆ ಫೋನ್ ಬರುತ್ತೆ. ನಮ್ಮಲ್ಲಿ ಅಕ್ಕಿ ಇರುವುದಕ್ಕೆ ಕಾರಣವೇನು? ನಾವೇನು ಅಕ್ಕಿ ವ್ಯಾಪಾರಿಗಳೇ! ಇದೆಲ್ಲಾ ಆಶ್ಚರ್ಯವಾಗಿದೆ?”

“ಅಷ್ಟೆಲ್ಲಾ ಏಕೆ ಸಾರ್? ನೀವೇ ಡೆಪ್ಯುಟೀ ಕಮೀಷನರನ್ನು ನೋಡಿಬಿಡಿ! ತಮ್ಮಂಥಾ ದೊಡ್ಡಮನುಷ್ಯರ ಮಾತು ನಡೆಯದೇ ಇದ್ದೀತೆ?”

“ಹಾಗಾದರೆ ಸರಿ! ಹಾಗೆಯೇ ಮಾಡುತ್ತೇನೆ.”

ರಂಗರಾಯನು ಕೆಳಗಿಳಿದು ಬಂದು ಡೆಪ್ಯೂಟಿಕಮೀಷನರ ಮನೆಗೆ ಹೋಗಿ ಅವರನ್ನು ಭೇಟಿ ಮಾಡಿದನು. ಡೆಪ್ಯುಟಿ ಕಮೀಷನರಿಗೂ ರಂಗರಾಯನಿಗೂ ಮಾತುಕಥೆಗಳು ನಡೆದುವು. ಅಧಿಕಾರಿಗಳು ಜಗ್ಗಲಿಲ್ಲ. ಕೊನೆಗೆ ರಂಗರಾಯನಿಗೆ ಕೋಪ ಬಂತು.

" ನೀವು ಬೇಕಾದ್ದು ಮಾಡಿ! ನನ್ನ ದ್ವೇಷಿಗಳ ಮಾತು ಕೇಳಿ ನನಗೆ ಅವಮಾನ ಮಾಡಬೇಕೆಂದು ನೀವೆಲ್ಲಾ ಒಂದಾಗಿ ಸೇರಿ ದಾಂಧಲೆ ನಡಸುತ್ತಿದ್ದೀರಿ. ನಾನು ಕಾಂಗ್ರೆಸ್ಸಿಗೆ ಮಾಡಿರುವ ಸೇವೆ ಎಲ್ಲಾ ವ್ಯರ್ಥವೇ. ನೋಡಿ ಬಿಡುತ್ತೇನೆ. ಈ ದಿನ ಸಂಧ್ಯಾಕಾಲದೊಳಗೆ ಮಂತ್ರಿಗಳಿಂದಲೇ ಆರ್ಡರು ತರುತ್ತೇನೆ. ನೋಡೋಣ! ಇದೂ ಒಂದು ಹಠಸಾಧನೆ! ಈ ಕಾಂಗ್ರೆಸ್ ಸರ್ಕಾರ ಇದೆಯೋ ಇಲ್ಲವೋ ನೋಡಿಬಿಡುತ್ತೇನೆ " ಎಂದು ಹೇಳಿ ಎದ್ದು ಹೊರಟನು.

ಅಧಿಕಾರಿಗಳು ತಮ್ಮ ಕೆಲಸವನ್ನು ತಾವು ನಡಸಿದರು. ರಂಗರಾಯನು ಮೋಟಾರಿನಲ್ಲಿ ಬೆಂಗಳೂರಿಗೆ ಹೊರಟನು. ಅಠಾರಾ ಕಛೇರಿಯಲ್ಲಿ ಮಂತ್ರಿಗಳ ಭೇಟಿ ಮಾಡಿದನು. ತನ್ನ ಮಾನ ಉಳಿಸಬೇಕೆಂದು ಕೇಳಿಕೊಂಡನು; ಮರ್ಯಾದೆಯನ್ನುಳಿಸಬೇಕೆಂದು ಬೇಡಿಕೊಂಡನು. ಮಂತ್ರಿಗಳು ರಂಗರಾಯನ ಪ್ರಾರ್ಥನೆಗೆ ಕಿವಿಗೊಡಲಿಲ್ಲ. ಎಲ್ಲ ಮಂತ್ರಿಗಳಿಗೂ ಶರಣು ಹೊಡೆದನು. ಏನೂ ಪ್ರಯೋಜನವಾಗಲಿಲ್ಲ. " ನಾನು ಕಾಂಗ್ರೆಸ್ಸಿಗೆ ಮಾಡಿದ ಸೇವೆಯೆಲ್ಲಾ ವ್ಯರ್ಥವಾಯಿತೆ! " ಎಂದು ಮಂತ್ರಿಗಳನ್ನು ಜರೆದು ಹಿಂದಿರುಗಿದನು. ಅವನು ಮೈಸೂರಿಗೆ ಬರುವ ಹೊತ್ತಿಗೆ ರಾತ್ರಿ ಹತ್ತು ಗಂಟೆಯಾಗಿತ್ತು. ಶ್ರೀಕಂಠಯ್ಯನು ಮನೆಯ ಬಾಗಿಲಿನಲ್ಲಿ ಕಾದು ಕುಳಿತಿದ್ದನು. ರಂಗರಾಯನು ಕಾರಿನಿಂದ ಇಳಿದು " ಶ್ರೀಕಂಠಯ್ಯ! ಏನು ಸಮಾಚಾರ? " ಎಂದು ಪ್ರಶ್ನೆ ಮಾಡಿದನು.

ಶ್ರೀಕಂಠಯ್ಯನು " ಅಧಿಕಾರಿಗಳು ಮಹಜರ್ ಮಾಡಿ ಎಲ್ಲವನ್ನೂ ಸೀಲ್ ಮಾಡಿದ್ದಾರೆ " ಎಂದು ಹೇಳಿದನು.

" ಇರಲಿ! ಈ ಅಧಿಕಾರಿಗಳೆಲ್ಲಾ ಒಂದಾಗಿದ್ದಾರೆ. ಈ ಅಧಿಕಾರಿಗಳು

ಮಂತ್ರಿಗಳನ್ನು ಒಳಗೆ ಹಾಕಿಕೊಂಡಿದ್ದಾರೆ. ನಮ್ಮಂಥಾ ಗೌರವಸ್ಥರಿಗೆ ಇನ್ನು ಮೇಲೆ ಈ ರಾಜ್ಯದಲ್ಲಿ ಕಾಲವಿಲ್ಲ. ನಾಳೆ ಕೋರ್ಟಿನಲ್ಲಿ ತೋರಿಸುತ್ತೇನೆ. ನನ್ನ ಸರ್ವಸ್ವವೂ ಖರ್ಚಾದರೂ ಸರಿ! ಈ ಕೇಸು ಕೊನೆಯ ವರೆಗೆ ನೋಡಿ ಬಿಡುತ್ತೇನೆ" ಎಂದು ಹೇಳಿ ರಂಗರಾಯನು ಮನೆಯೊಳಗೆ ಹೊರಟು ಹೋದನು.

ಮರುದಿನ ಬೆಳಿಗ್ಗೆ ರಂಗರಾಯನು ತನ್ನ ಸ್ನೇಹಿತರೊಂದಿಗೆ ಆಲೋಚನೆ ಮಾಡಿದನು. "ವಾಸುದೇವರಾಯನಂಥಾ ಗಟ್ಟಿ ಲಾಯರು ಬೇರೆ ಇಲ್ಲ. ಅವನನ್ನೇ ಈ ಕೇಸಿಗೆ ಗೊತ್ತುಮಾಡಬೇಕು. ಅವನು ಸರ್ಕಾರದ ಬಣ್ಣ ವನ್ನೆಲ್ಲಾ ಹೊರಗೆಡವಿಬಿಡುತ್ತಾನೆ" ಎಂದು ನಿರ್ಧಾರ ಮಾಡಿದರು.

ರಂಗರಾಯನು ವಾಸುದೇವರಾಯನ ಮನೆಗೆ ಹೋದನು. ವಾಸುದೇವ ರಾಯನಿಗೆ ಆಶ್ಚರ್ಯವಾಯಿತು. ಅವನು ರಂಗರಾಯನನ್ನು ಗೌರವದಿಂದ ಸ್ವಾಗತಿಸಿ ಆಸನದಲ್ಲಿ ಕುಳ್ಳಿರಿಸಿ, ರಾಯರು ಅಪರೂಪವಾಗಿ ದಯಮಾಡಿಸಿದ ಕಾರಣವೇನೆಂದು ಕೇಳಿದನು.

ರಂಗರಾಯನು "ವಾಸುದೇವರಾವ್! ನಮ್ಮ ಮೇಲೆ ಒಂದು ದೊಡ್ಡ ಕೇಸು ಬಂದಿದೆ. ಅಕ್ಕಿ ದಾಸ್ತಾನಾಗಿದೆಯೆಂದು ಅಧಿಕಾರಿಗಳು ಒಂದು ರಗಳೆ ಹಚ್ಚಿದ್ದಾರೆ. ಮಂತ್ರಿಗಳೊಡನೆ ಹೇಳಿ ಒಂದು ಕ್ಷಣದಲ್ಲಿ ಇತ್ಯರ್ಥ ಮಾಡಿಸ ಬಹುದಾಗಿತ್ತು. ಅವರನ್ನೇನು ಗೋಗರೆಯುವುದು. ಕೇಸು ಹೈಕೋರ್ಟಿನ ವರೆಗೆ ನಡಸಿಯೇ ಬಿಡಬೇಕು. ನಮ್ಮಂತವರಿಗೆ ಈ ಗತಿಯಾದರೆ ಬಡ ವ್ಯಾಪಾರಿಗಳ ಗತಿ ಏನು? ಅದಕ್ಕಾಗಿ ಹಠತೊಟ್ಟಿದ್ದೇನೆ. ನೀವು ಸಾಧಿಸಿ ಕೊಡಬೇಕು" ಎಂದನು.

"ಸಾಹುಕಾರರೇ! ಅದೆಲ್ಲಾ ಸರಿ! ನಿಮ್ಮ ಮಂಡಿಯಲ್ಲಿ ಅಕ್ಕಿ ಮೂಟೆ ಗಳಿರುವುದು ನಿಜವೋ?"

"ಅಕ್ಕಿ ಮೂಟೆಗಳೇನೋ ಇವೆಯೆಂದು ನಮ್ಮ ಮ್ಯಾನೇಜರು ಹೇಳು ತ್ತಾರೆ. ಆದರೆ ನಾವೆಂದೂ 'ಬ್ಲಾಕ್‌ಮಾರ್ಕೆಟ್' ಮಾಡಿದವರಲ್ಲ. ಅಕ್ಕಿ ವ್ಯಾಪಾರವೇ ನಮ್ಮಲ್ಲಿಲ್ಲ. ಇದೆಲ್ಲಾ ನನ್ನ ಗೌರವಕ್ಕೆ ಹಾನಿ ತರಬೇಕೆಂದು

ಅಧಿಕಾರಿಗಳು ಮಾಡಿರುವ ಪಿತೂರಿ ! ಇದೆಯಲ್ಲ. ಬ್ರಾಹ್ಮಣ–ಬ್ರಾಹ್ಮಣೇತರ ! ಅದರಿಂದಲೇ ಇಷ್ಟು ಅನರ್ಥ ! ”

“ ನಿಮ್ಮ ಕಾಂಗ್ರೆಸ್ ಮುಖಂಡರು, ಮಂತ್ರಿಗಳು ಅವರಿಂದ ಏನೂ ಮಾಡಿಸಲು ಸಾಧ್ಯವಿಲ್ಲವೋ ? ”

“ ನಾನು ಅವರನ್ನೆಲ್ಲಾ ಬೇಡುವವನಲ್ಲ ! ಈ ಕಾಂಗ್ರೆಸ್ ಸರ್ಕಾರವೆಲ್ಲಾ ಕೋಮುವಾರು ಸರ್ಕಾರ. ಕೋರ್ಟಿನಲ್ಲಿ ಗೆದ್ದರೆ ಗೆಲ್ಲಲಿ ! ಇಲ್ಲದಿದ್ದರೆ ನನ್ನ ಹಣೆಯಬರಹ. ಏನು ಶಿಕ್ಷೆಯಾಗುತ್ತೋ ನೋಡಿಬಿಡುತ್ತೇನೆ. ಆಮೇಲೆ ನೋಡಿ ! ಈ ಮಂತ್ರಿಮಂಡಲಕ್ಕೆ ‘ ಇತಿಶ್ರೀ ’ ಮಾಡಿಸುತ್ತೇನೆ. ”

“ ಅದೆಲ್ಲಾ ಸರಿ ! ನಾನು ಈಗ ಏನು ಮಾಡಬೇಕು ? ”

“ ನೀವು ಈ ಮೊಕದ್ದಮೆಯಲ್ಲಿ ವಕಾಲತ್ತು ವಹಿಸಬೇಕು. ಐದು ಸಾವಿರ ರೂಪಾಯಿಗಳ ಫೀಜಾದರೂ ಸರಿ ! ಈ ಸರ್ಕಾರಕ್ಕೆ ಬುದ್ಧಿ ಕಲಿಸಿಬಿಡಬೇಕು. ”

“ ಫೀಜು ಕೊಡುತ್ತೀರಿ. ನಾನು ವಕೀಲ ! ವಕಾಲತ್ತು ನಡಸುತ್ತೇನೆ. ಆದರೆ ನಿಮಗೇ ಜಯವಾಗುವುದೆಂದು ನಾನು ಹೇಗೆ ಭರವಸೆ ಕೊಡಲಿ ! ”

“ ಜಯಾಪಜಯಗಳ ಮಾತು ಕೊನೆಗೆ ತಾನೆ ! ನೀವು ಈ ಕಾಂಗ್ರೆಸ್ ಸರ್ಕಾರದ ಕೊಳಕನ್ನೆಲ್ಲಾ ಕೋರ್ಟಿನಲ್ಲಿ ಹೊರಗೆ ಎಳೆದುಬಿಡಿ ! ಇದರಲ್ಲಿ ಮಂತ್ರಿಗಳ ಪಿತೂರಿಯೂ ಸೇರಿದೆ. ಕೋರ್ಟಿನಲ್ಲಿ ಅವರನ್ನೂ ಕರಸಿ ಪಾಟೀ ಸವಾಲ್ ಮಾಡಿ ಕೆಡವಿಬಿಡಿ ! ಅವರೇ ರಾಜಿಗೆ ಬರುತ್ತಾರೆ. ಈ ಜಗಳವೇನು ಸಾಮಾನ್ಯಕ್ಕೆ ಕೊನೆ ಮುಟ್ಟುತ್ತದೆಂದು ತಿಳಿಯಬೇಡಿ ! ಇದರಿಂದ ಕಾಂಗ್ರೆಸ್ ಒಡೆದು ಎರಡು ಪಾರ್ಟಿಯಾಗಿ ಹೋಗುತ್ತದೆ. ನನ್ನ ಕಡೆಗೂ ಬಹಳ ಜನರಿದ್ದಾರೆ. ನಿಮ್ಮಂಥಾ ಲಾಯರು ಕೇಸಿಗೆ ಬಂದು ನಿಂತರೆ ಸಾಕು ! ”

ವಾಸುವು ವಕಾಲತ್ತು ವಹಿಸಿಕೊಂಡನು. ಮೊಕದ್ದಮೆ ಆರು ತಿಂಗಳು ನಡೆಯಿತು. ವಾಸುವು ಚಾತುರ್ಯದಿಂದ ದಾಖಲೆಗಳನ್ನು ಹೊರಳಿಸಿದನು. ಕೇಸು ಬಿದ್ದುಹೋಯಿತು. ಎಲ್ಲೆಲ್ಲೂ ರಂಗರಾಯನ ಜಯಭೇರಿ. ಅವನ ಪ್ರತಾಪಕ್ಕೆ ಎಣೆಯೇ ಇಲ್ಲ ! ರಂಗರಾಯನು ವಾಸುದೇವರಾಯನಿಗೆ ಹೇರಳ

ವಾದ ಫೀಜು ಕೊಟ್ಟನು. ಅನೇಕ ಉಡುಗರೆಗಳನ್ನು ಕೊಟ್ಟು ಗೌರವಿಸಿದನು. ಅಂದಿನಿಂದ ರಂಗರಾಯನು ಕಾಂಗ್ರೆಸ್ಸಿನ ಪ್ರಬಲ ವಿರೋಧಿಯೆಂದು ತಾನೇ ಎಲ್ಲೆಲ್ಲಿಯೂ ಹೇಳಿಕೊಂಡನು. ಆದರೆ ಗಾಂಧೀ ಟೋಪಿಯನ್ನು ಮಾತ್ರ ವಿಸರ್ಜಿಸಲಿಲ್ಲ. ತಾನೇ ನಿಜವಾದ ಗಾಂಧೀ ಭಕ್ತನೆಂದು ಹೇಳಿಕೊಳ್ಳುತ್ತಿದ್ದನು. ಯಥಾಪ್ರಕಾರ ಅವನ ವ್ಯಾಪಾರ–ಸಾಪಾರ, ದಾನ–ಧರ್ಮ ಸ್ತೋತ್ರ ಪ್ರಶಂಸೆಗಳು ನಡೆಯುತ್ತಲೇ ಇದ್ದುವು.

## ೨೨

ವಾಸುದೇವನು ಕೆಲವು ದಿನಗಳಿಂದ ಶ್ಯಾಮಲೆಯನ್ನು ನೋಡಿರಲಿಲ್ಲ. ಶ್ಯಾಮಲೆಯು, "ನಿಮ್ಮಣ್ಣನೇಕೆ ಇತ್ತ ಕಡೆ ಬರಲೇ ಇಲ್ಲ?" ಎಂದು ತಾರೆಯನ್ನು ಕೇಳಿದಳು.

ತಾರೆಯು "ಯಾವುದೋ ದೊಡ್ಡ ಮೊಕದ್ದಮೆಯಂತೆ! ಹೆಚ್ಚು ಫೀಜು ಬರುತ್ತದಂತೆ. ವಾಸುವು ಸರ್ವದಾ ಅದರಲ್ಲಿಯೇ ಮುಳುಗಿದ್ದಾನೆ" ಎಂದು ಹೇಳಿದಳು.

ಶ್ಯಾಮಲೆ "ಗಂಡಸರ ಸ್ವಭಾವವೇ ಹೀಗೆ! ಸ್ವಲ್ಪ ದುಡ್ಡು ಬಂದರೆ ಬಂಧುಮಿತ್ರರನ್ನೂ ಮರೆಯುತ್ತಾರೆ. ಹೆಚ್ಚು ದುಡ್ಡು ಸಿಕ್ಕಿದರೆ ಸರ್ವಸ್ವವನ್ನೂ ಮರೆಯುತ್ತಾರೆ. ಅವರಿಗೆ ದುಡ್ಡೇ ದೇವರು!"

ಹೀಗೆ ಮಾತು ನಡೆಯುತ್ತಿರುವಾಗಲೇ ವಾಸುವು ಬಂದನು. ತಾರೆಯು "ಅಣ್ಣ! ನಿನ್ನ ಮಾತನ್ನೇ ಆಡುತ್ತಿದ್ದೆವು. ನೀನೇ ಪ್ರತ್ಯಕ್ಷವಾಗಿ ಬಂದುಬಿಟ್ಟೆ! ನೆನೆದಾಗ ಬಂದರೆ ನೂರು ವರ್ಷ ಆಯಸ್ಸೆಂದು ಕೇಳಿಲ್ಲವೇ ನೀನು?" ಎಂದಳು.

ವಾಸುವು ನಗುತ್ತಾ "ನನಗೂ ನೂರು ವರ್ಷ ಆಯುಸ್ಸೆನ್ನುತ್ತೀಯಾ? ನನ್ನನ್ನೇಕೆ ನೆನೆಯುತ್ತಿದ್ದೀರಿ?" ಎಂದು ಕೇಳಿದನು.

ತಾರೆಯು "ಈ ಶ್ಯಾಮಲೆಯು ನಿನ್ನನ್ನು ನೆನೆದುಕೊಂಡಳು. ಅವಳನ್ನೇ ಕೇಳು!" ಎಂದು ನಕ್ಕಳು.

ವಾಸು "ಶ್ಯಾಮಲೆ! ನನ್ನನ್ನೇಕೆ ಜ್ಞಾಪಿಸಿಕೊಂಡೆ?" ಎಂದನು.

ಶ್ಯಾಮಲೆ "ಅಂತಹ ಕೆಲಸವೇನೂ ಇಲ್ಲ. ನೀನು ಕೆಲವು ದಿನಗಳಿಂದ

ಇತ್ತ ಸುಳಿಯಲೇ ಇಲ್ಲ. ಈ ತಾರೆಯು ಹೇಳುತ್ತಿದ್ದಳು, ನಿನಗೆಲ್ಲೋ ದೊಡ್ಡ ಫೀಜು ಸಿಕ್ಕಿದೆಯೆಂದು! ನಮಗೇನಾದರೂ ಕೊಡುತ್ತೀಯೇನು?" ಎಂದು ತಮಾಷೆ ಮಾಡಿದಳು.

"ಹೌದು ದೊಡ್ಡ ಕೇಸು! ದೊಡ್ಡ ಫೀಜು. ಐದು ಸಾವಿರ ರೂಪಾಯಿಗಳು! ಅದನ್ನೆಲ್ಲಾ ಪೂರ್ತಿಯಾಗಿ ನಿಮ್ಮ ವಿದ್ಯಾಲಯಕ್ಕೆ ಕೊಡಬೇಕೆಂದು ಸಂಕಲ್ಪಿಸಿದ್ದೇನೆ."

ಶ್ಯಾಮಲೆ ನಗುತ್ತಾ "ಅದೇನು ಅಷ್ಟು ಔದಾರ್ಯ!," ಎಂದಳು.

"ಅದು ನಿಮ್ಮ ಯಜಮಾನರು ರಂಗರಾಯರ ಕೇಸು! ಐದು ಸಾವಿರ ರೂಪಾಯಿಗಳ ಫೀಜು ಕೊಟ್ಟಿದ್ದಾರೆ."

ಶ್ಯಾಮಲೆಯ ಮುಖ ಬೆಳ್ಳಗಾಯಿತು. ಅವಳು "ವಾಸು! ರಂಗರಾಯರಿಗೂ ನನಗೂ ಯಾವ ಸಂಬಂಧವೂ ಇಲ್ಲ. ಅವರದೊಂದು ಕುರುಡು ಕಾಸನ್ನೂ ನಾನು ತೆಗೆದುಕೊಳ್ಳುವುದಿಲ್ಲ. ನನ್ನ ಪಾಠಶಾಲೆ-ಆಶ್ರಮಗಳೆರಡೂ ಮುಚ್ಚಿ ಹೋದರೂ ಸರಿ!"

"ಈಗ ಅದು ನನ್ನ ಹಣ! ನನ್ನ ಕಷ್ಟಾರ್ಜಿತ."

"ಹಾಗಾದರೆ ನೀನೇಕೆ ರಂಗರಾಯರ ದುಡ್ಡು! ನಿಮ್ಮ ಯಜಮಾನರ ದುಡ್ಡು ಎಂದು ಹೇಳಿದೆ?"

"ರಂಗರಾಯರ ಸುಪ್ರಸಿದ್ಧವಾದ ಮೊಕದ್ದಮೆಯನ್ನು ಹೇಳುವುದಕ್ಕೆ ಅದು ಪೀಠಿಕೆ!"

"ನನಗೆ ರಂಗರಾಯರ ಮೊಕದ್ದಮೆಯೂ ಬೇಡ! ಅವರ ಹಣವೂ ಬೇಡ! ರಂಗರಾಯರ ಮೊಕದ್ದಮೆ ಎಂದರೇನು? ಅವರು ಯಾರನ್ನಾದರೂ ಕೊಲೆ ಮಾಡಿದರೇನು? ಅಂತಹ ಗಂಡಾಂತರದಿಂದ ನೀನು ಅವರನ್ನು ಪಾರು ಮಾಡಿದೆ ಏನು?"

"ಖೂನಿಯಲ್ಲ; ಬ್ಲಾಕ್ ಮಾರ್ಕೆಟ್!"

"ಅಷ್ಟು ದೊಡ್ಡ ಕಾಂಗ್ರೆಸ್ ಭಕ್ತರು ನಿನ್ನ ಹತ್ತಿರ ಏಕೆ ಬಂದರು?"

"ಕಾಂಗ್ರೆಸ್ಸಿನವರೆಲ್ಲಾ ಅವರನ್ನು ನಡು ನೀರಿನಲ್ಲಿ ಕೈಬಿಟ್ಟರು. ಅವರೂ

ಕಾಂಗ್ರೆಸ್ಸನ್ನು ಬಿಟ್ಟರು!"

"ಬಹಳ ಕ್ಷೇಮವಾಯಿತು! ಕಾಂಗ್ರೆಸ್ಸಿಗೂ ಕ್ಷೇಮ!"

ವಾಸುವು ಬಹಳ ಹೊತ್ತು ಶ್ಯಾಮಲೆಯೊಡನೆ ಲೋಕಾಭಿರಾಮವಾಗಿ ಮಾತನಾಡುತ್ತಿದ್ದು ಮನೆಗೆ ಹೋದನು. ಮೌನವಾಗಿ ಊಟವನ್ನು ಮುಗಿಸಿ ತನ್ನ ಕೋಣೆಗೆ ಹೋಗಿ ಮಂಚದ ಮೇಲೆ ಮಲಗಿದನು. ತನ್ನಲ್ಲಿ ತಾನೇ ಆಲೋಚಿಸಲು ತೊಡಗಿದನು.

"ನನ್ನದು ಎಂತಹ ಜೀವನ! ಸಂಸಾರಿಯೂ ಅಲ್ಲ, ಸನ್ಯಾಸಿಯೂ ಆಗಿಲ್ಲ! ನಾನೇಕೆ ಸಂಪಾದನೆ ಮಾಡಬೇಕು?" ಎಂದುಕೊಂಡನು.

ಶ್ಯಾಮಲೆಯ ನೆನಪು ಬಂದಿತು. "ಶ್ಯಾಮಲೆಯು ರಂಗರಾಯನನ್ನು ಸಂಪೂರ್ಣವಾಗಿ ತ್ಯಜಿಸಿದ್ದಾಳೆ. ಆದರೆ....ನನ್ನ ಇಷ್ಟಾರ್ಥವನ್ನು ಒಪ್ಪುವಳೆಂಬ ಭರವಸೆ ಎಲ್ಲಿದೆ?" ಹೀಗೆ ಆಲೋಚಿಸುತ್ತಾ ನಿರಾಶಾ ಮನಸ್ಸಿನಿಂದ ನಿಟ್ಟುಸಿರು ಬಿಟ್ಟು ನಿದ್ರಿಸಿದನು.

ಇಂತಹ ಹಗಲು ರಾತ್ರಿಗಳೆಷ್ಟೋ ಕಳೆದುವು. ವಾಸುವಿನ ನಿಶ್ಚಯವು ಮಾತ್ರ ಮಾರ್ಪಡಲಿಲ್ಲ. "ಹೇಗಾದರೂ ಶ್ಯಾಮಲೆಯನ್ನು ಒಪ್ಪಿಸಿ ಒಲಿಸಿಕೊಂಡು ಮದುವೆಯಾಗಬೇಕು! ಆಮೇಲೆ ಜೀವನರಥವು ಹೇಗೆ ಹೋದರೆ ಹಾಗೆ ಸಾಗಲಿ" ಎಂದುಕೊಳ್ಳುತ್ತಿದ್ದನು.

ವಾಸುವು ಶ್ಯಾಮಲೆಯ ಏಕಾಂತ ಸಮಯವನ್ನು ಕಾಯುತ್ತಿದ್ದನು. 'ತನ್ನ ಮನದಲ್ಲಿ ನಿಗೂಢವಾಗಿರುವ ಆಶೆಯನ್ನು ಶ್ಯಾಮಲೆಯೊಡನೆ ಹೇಳಿಬಿಡಬೇಕು. ಅವಳು ತನ್ನ ಪ್ರಾರ್ಥನೆಯನ್ನು ನಿರಾಕರಿಸಿದರೂ ಅಪರಾಧವನ್ನು ಕ್ಷಮಿಸುತ್ತಾಳೆ' ಎಂದು ನಿರ್ಧಾರ ಮಾಡಿಕೊಂಡನು. ಅದಕ್ಕೆ ತಕ್ಕ ಸಮಯವು ಮಾತ್ರ ದೊರಕಿರಲಿಲ್ಲ.

ನಾರಾಯಣನಿಗೆ ಸಿನಿಮಾ ನೋಡುವ ಹುಚ್ಚು! ಯಾವ ಹೊಸ ಚಿತ್ರ ಬರಲಿ, ತಾರೆಯನ್ನೂ ಶ್ಯಾಮಲೆಯನ್ನೂ ಪ್ರೇರೇಪಿಸುತ್ತಿದ್ದನು. ಶ್ಯಾಮಲೆಯು ಸಿನಿಮಾಕ್ಕೆ ಬರುವುದಿಲ್ಲವೆಂದು ಅನೇಕ ವೇಳೆ ನಿರಾಕರಿಸಿಬಿಡುತ್ತಿದ್ದಳು. ಹೊಸ ಚಿತ್ರ ಪಟಗಳು ಬಂದರೆ, ನಾರಾಯಣ ಮತ್ತು ತಾರೆ ಇಬ್ಬರೇ ಹೋಗಿ

ನೋಡಿಕೊಂಡು ಬರುತ್ತಿದ್ದರು.

ಶ್ಯಾಮಲೆಯು ಮನೆಗೆಲಸಗಳನ್ನು ಮಾಡಿಕೊಂಡು ಯಾವುದಾದರೂ ಗ್ರಂಥವನ್ನು ಓದುತ್ತಾ ಮನೆಯಲ್ಲಿಯೇ ಇರುತ್ತಿದ್ದಳು. ಇಂಥದೊಂದು ಏಕಾಂತ ಸಮಯವು ವಾಸುನಿಗೆ ದೊರಕಿತು.

ವಾಸುವು ನಾಣಿಯ ಮನೆಯಲ್ಲಿ ಏಕಾಂತವಾಗಿ ಕುಳಿತಿದ್ದ ಶ್ಯಾಮಲೆಯನ್ನು ಕಂಡನು. ಶ್ಯಾಮಲೆಯೇ ಮೊದಲು ಮಾತಿಗೆ ಪ್ರಾರಂಭಿಸಿದಳು.

"ವಾಸು! ನೀನೇಕೆ ಯಾವಾಗಲೂ ನಿರುತ್ಸಾಹಿಯಾಗಿರುತ್ತಿ? ನಿನ್ನಂತಹ ವಿದ್ಯಾವಂತರೂ ಬುದ್ಧಿವಂತರೂ ಯಾವುದಾದರೂ ದೇಶಸೇವಾ ಕಾರ್ಯವನ್ನು ಕೈಗೊಳ್ಳಬೇಕು. ಆಗಲೇ ಜೀವನದಲ್ಲಿ ಉತ್ಸಾಹವು ಬರುತ್ತದೆ."

"ಹೌದು ಶ್ಯಾಮಲಾ! ನೀನು ಹೇಳುವ ಸಿದ್ಧಾಂತಗಳೇನೋ ಚೆನ್ನಾಗಿಯೇ ಇರುತ್ತವೆ. ದೊಡ್ಡ ದೊಡ್ಡ ಮಹಾನುಭಾವರುಗಳು ಹೀಗೆಲ್ಲಾ ಹೇಳುವುದನ್ನು ಎಷ್ಟೋ ಕೇಳಿದ್ದೇನೆ. ಆದರೆ ಮಾನವರ ಜೀವನ ರಹಸ್ಯಗಳೇ ಬೇರೆ! ಈ ಸಿದ್ಧಾಂತಗಳೇ ಬೇರೆ!"

"ವಾಸು! ನೀನು ಈ ಸಿದ್ಧಾಂತಗಳನ್ನೊಪ್ಪದಿದ್ದರೆ ನಿನ್ನ ಜೀವನ ರಹಸ್ಯವನ್ನಾದರೂ ಅರಿತಿರುವಿಯಾ?"

"ಶ್ಯಾಮಲೆ ನನ್ನ ಜೀವನ ರಹಸ್ಯವು ತೊಡಕಾಗಿದೆ. ಹಾಗೆಯೇ ನಿನ್ನ ಜೀವನ ರಹಸ್ಯವೂ ತೊಡಕಾಗಿವೆ. ಅವನ್ನು ನೀನು ಅರಿತಿರುವಿಯೇನು?"

"ನನ್ನ ಜೀವನದಲ್ಲಿ ರಹಸ್ಯವೇ ಇಲ್ಲ. ಎಲ್ಲವೂ ವ್ಯಕ್ತವಾಗಿಯೇ ಇದೆ."

"ನೀನೇಕೆ ಸಂಸಾರ ಪರಿತ್ಯಾಗ ಮಾಡಿದೆ? ಸಂಸಾರಿಯಾಗಿಯೇ ದೇಶಸೇವೆ ಮಾಡಲು ಸಾಧ್ಯವಿಲ್ಲವೇನು? ನೀನು ಸನ್ಯಾಸಿನಿಯೇನು?"

"ನಾನು ಸನ್ಯಾಸಿನಿಯಂತೂ ಅಲ್ಲವೇ ಅಲ್ಲ. ಸಂಸಾರಿಯುಹುದೋ ಅಲ್ಲವೋ ಅದನ್ನು ನಾನರಿಯೆ! ರಂಗರಾಯನು ಶುದ್ಧ ಚಾರಿತ್ರನಲ್ಲ. ಅವನದು ಕಶ್ಮಲ ಮನಸ್ಸು! ಕಶ್ಮಲ ಜೀವನ! ಅವನ ಸಹಧರ್ಮಿಣಿಯಾಗಿರುವುದು ಮಹಾಪಾಪಕರ! ಆದುದರಿಂದ ಆ ಸಂಸಾರವನ್ನು ಪರಿತ್ಯಜಿಸಿದೆ!"

“ ಶ್ಯಾಮಲೆ ನೀನು ಮತ್ತೊಂದು ವಿವಾಹವನ್ನು ಮಾಡಿಕೊಳ್ಳ ಬಾರದೆ? ”

“ ಬೇರೊಂದು ವಿವಾಹ ! ಅದು ನನ್ನ ಜೀವನಕ್ಕೆ ಸರಿ ಬೀಳುವುದಿಲ್ಲ.”

“ ಅದನ್ನು ಆಲೋಚನೆ ಮಾಡಿದ್ದೀಯೇನು ? ”

ಉತ್ತರವಿಲ್ಲ. ಅವಳ ಮುಖಭಾವ ಮಾತ್ರ ಅವಳು ಆ ಆಲೋಚನೆಯ ಲ್ಲಿಯೇ ತೊಡಗಿರುವಂತಿದ್ದಿತು.

## ೨೩

ವಾಸುದೇವರಾಯನ ಜೀವನದಲ್ಲಿ ವಿಶೇಷ ಬದಲಾವಣೆಯಾಗುತ್ತ ಬಂದಿದ್ದಿತು. ಅವನಿಗೆ ವಕೀಲಿ ವೃತ್ತಿಯಲ್ಲಿ ಬೇಸರ! ಧನಾರ್ಜನೆಯಲ್ಲಿ ಆಸಕ್ತಿ ಇಲ್ಲ. ಯಾರೊಡನೆಯೂ ವಿಶೇಷ ಮಾತನಾಡುತ್ತಿರಲಿಲ್ಲ. ಅವಕಾಶ ದೊರೆತರೆ ಶ್ಯಾಮಲೆಯೊಡನೆ ಮಾತುಕಥೆಗಳನ್ನಾಡುತ್ತಿದ್ದನು. ಅಷ್ಟು ಕಾಲ ಮಾತ್ರ ಅವನು ಹರ್ಷಚಿತ್ತನಾಗಿರುತ್ತಿದ್ದನು.

ತಾರಾದೇವಿ ನಾಣಿ ಇಬ್ಬರೇ ಒಂದು ದಿನ ಸಿನಿಮಾಕ್ಕೆ ಹೋರಟಿದ್ದರು. ಎದುರಿಗೆ ವಾಸುವು ಹೋಗುತ್ತಿದ್ದನು.

ನಾಣಿಯು "ತಾರಾ, ನಿಮ್ಮಣ್ಣನು ಅಲ್ಲಿ ಹೋಗುತ್ತಿದ್ದಾನೆ. ಕರೆಯಲೇ?" ಎಂದ.

ತಾರಾ "ಕರೆಯಿರಿ. ನೋಡೋಣ. ಅವನೂ ಸಿನಿಮಾಕ್ಕೆ ಬಂದರೆ ಬರಲಿ." ಎಂದಳು.

ನಾರಾಯಣ "ವಾಸು, ವಾಸು!" ಎಂದು ಕೂಗಿ ಕರೆದನು.

ವಾಸುವು ತಲೆ ಎತ್ತಿ ನೋಡಿದನು. ಕಾರಿನಿಂದಿಳಿದು ನಾಣಿ ಮತ್ತು ತಾರಾ ಸಮೀಪಕ್ಕೆ ಬಂದರು.

"ಏನಯ್ಯಾ ನಾಣಿ! ಸಿನಿಮಾಕ್ಕೆ ಹೊರಟೆಯೋ? ಸುಖಪುರುಷ! ಹೋಗಿ ಬನ್ನಿ!" ಎಂದು ವಾಸು ಕೇಳಿದನು.

"ನೀನೂ ಬರಬಾರದೇ?"

"ಇಲ್ಲ, ನಾನು ಸಿನಿಮಾಕ್ಕೆ ಬರುವುದಿಲ್ಲ."

"ಏಕಣ್ಣಾ! ಬಾ ಸ್ವಲ್ಪ ಹೊತ್ತು ಸಂತೋಷವಾಗಿರಬಹುದು."

" ಇಲ್ಲ ತಾರಾ ! ನನಗೆ ಸಿನಿಮಾ ರುಚಿಸುವುದಿಲ್ಲ."

ನಾಣಿಯೂ ತಾರಾದೇವಿಯೂ ಕಾರಿನಲ್ಲಿ ಕುಳಿತು ಮುಂದಕ್ಕೆ ಹೊರಟರು. ಟಿಕೀಟುಕೊಂಡು ಒಳಗೆ ಹೋಗಿ ಸಿನಿಮಾ ನೋಡುತ್ತ ಕುಳಿತರು. ತಾರಾದೇವಿಗೆ ಆ ಚಿತ್ರವು ರುಚಿಸಲಿಲ್ಲ! ಅವಳು ನಾಣಿಯನ್ನು ಕುರಿತು,

" ನೋಡಿದಿರಾ ! ವಾಸು ಹೇಗಿದಾನೆ. ದಿನ ದಿನಕ್ಕೆ ಹುಚ್ಚನ ಹಾಗೆ ಆಗುತ್ತಿದಾನೆ."

" ಹೌದು ! ಅವನ ಮರ್ಜಿಯೇ ಬದಲಾಗುತ್ತಿದೆ. ಅದೇ ನನಗೆ ಯೋಚನೆ."

" ಅವನೇಕೆ ಹಾಗಾಗಿದಾನೆಂಬುದನ್ನು ಊಹಿಸಿದ್ದೀರೇನು ? "

" ಊಹಿಸುವುದೇನಿದೆ ? ತಾರಾ, ನಾನೆಲ್ಲವನ್ನೂ ತಿಳಿದುಕೊಂಡಿದ್ದೇನೆ. ಅದೊಂದು ದೊಡ್ಡ ಸಮಸ್ಯೆಯಾಗಿದೆ."

" ನೀವು ಆ ಸಮಸ್ಯೆಯನ್ನು ಸುಲಭವಾಗಿ ಬಿಡಿಸಬಲ್ಲಿರೆಂದು ನನ್ನ ಮನಸ್ಸಿಗೆ ತೋರುತ್ತದೆ."

" ಅದಕ್ಕೆ ನೀನೇ ಸಮರ್ಥಳು. ಹೆಂಗಸರ ಸಮಸ್ಯೆಯನ್ನು ಹೆಂಗಸರೇ ಸುಲಭವಾಗಿ ಬಿಡಿಸಬಲ್ಲರು."

" ನಾನು ಕೊಂಚ ಕೊಂಚ ಪ್ರಯತ್ನಪಟ್ಟಿದ್ದೇನೆ. ನಿಮ್ಮ ತಂಗಿಯನ್ನು ಒಪ್ಪಿಸುವುದು ಬಲು ಕಷ್ಟ."

" ಶ್ಯಾಮಲೆಯು ರಂಗರಾಯನನ್ನು ಪೂರ್ಣವಾಗಿ ಪರಿತ್ಯಜಿಸಿದ್ದಾಳೆ. ವಾಸುವಿಗೂ ಅವಳಿಗೂ ಸ್ನೇಹವಿದೆ. ಅವರಿಬ್ಬರೂ ಎಷ್ಟೋ ಬಾರಿ ಏಕಾಂತದಲ್ಲಿ ಮಾತನಾಡುತ್ತಾ ಕಾಲ ಕಳೆಯುತಾರೆ. ಆದರೆ ಸಮಸ್ಯೆಯು ಸಮಸ್ಯೆಯಾಗಿಯೇ ಉಳಿದಿದೆ."

" ಶ್ಯಾಮಲೆಯು ಹಠವಾದಿಯೆಂಬುದೇನೋ ನಿಜ. ಆದರೆ ಅವಳದು ಹೆಣ್ಣು ಹೃದಯ ! ಅವಳು ಜನಕ್ಕೆ ಹೆದರುತ್ತಾಳೆ. ಸಮಾಜಕ್ಕೆ ಹೆದರುತ್ತಾಳೆ. ಇಂದು ಈ ನಗರದ ಜನರಿಗೆಲ್ಲಾ ಗೊತ್ತಿದೆ ರಂಗರಾಯನದೇ ತಪ್ಪೆಂದು ! ಈ ಪಾಠಶಾಲೆ, ವನಿತಾಶ್ರಮಗಳಿಂದ ಅವಳು ಬಹಳ ಗೌರವ ಸಂಪಾದಿಸಿದಾಳೆ.

ವಾಸುವನ್ನು ಮದುವೆಯಾದರೆ ಇದೆಲ್ಲಾ ಹೋಗಿಬಿಡುತ್ತದೆ. ಸಮಾಜವ
ಅವಳನ್ನು ಜರಿಯುತ್ತದೆ. ಇದೇ ಶ್ಯಾಮಲೆಯ ಮನಸ್ಸಿನ ಚಿಂತೆ!"

"ಹೌದು ಹೌದು, ನೀನು ಹೇಳುವುದೆಲ್ಲಾ ನಿಜ. ಅವರವರೇ ಇತ್ಯರ್ಥ
ಮಾಡಿಕೊಳ್ಳಲಿ! ನಾವೇನು ಮಾಡಲಾದೀತು."

ಚಿತ್ರಪಟವು ಮುಗಿಯಿತು. ನಾಣಿ ತಾರಾ ಇಬ್ಬರೂ ಮನೆಗೆ ಬಂದರು
ಶ್ಯಾಮಲೆಯೊಬ್ಬಳೇ ಹಿಂದೀ ಪುಸ್ತಕವೊಂದನ್ನು ಓದುತ್ತ ಕುಳಿತಿದ್ದಳು.

ತಾರಾ ನಗುತ್ತಾ ಬಂದು "ಏನು ಶ್ಯಾಮಲಾ! ಯಾವ ಪುರಾಣವನ್ನು
ಓದುತ್ತಿದ್ದಿ?" ಎಂದು ಕೇಳಿದಳು.

"ಇದು ಹಿಂದಿಯಲ್ಲಿ ಒಂದು ದೊಡ್ಡ ಗ್ರಂಥ 'ಓಲ್ಗಾ ಸೇ ಗಂಗಾ'
ಎಂದು ಈ ಪುಸ್ತಕದ ಹೆಸರು."

"ಅದರಲ್ಲಿ ಏನು ಬರೆದಿದ್ದಾರೆ? ಚೆನ್ನಾಗಿದೆಯೇನು?"

"ಚೆನ್ನಾಗಿದೆಯೋ ಇಲ್ಲವೋ ನಾನು ಹೇಳಲಾರೆ. ಬರೆದವರು ಬಲು
ದೊಡ್ಡ ವಿದ್ವಾಂಸರಂತೆ! ಅದರಲ್ಲಿರುವ ವಿಷಯಗಳನ್ನು ನಂಬುವುದೇ ಕಷ್ಟ!"

ಆಗ ನಾಣಿಯು ಪ್ರವೇಶಿಸಿ, "ತಾರಾ ಎಷ್ಟು ಹೊತ್ತಾಗಿದೆ ಬಲ್ಲೆಯಾ?
ನೀನೂ ನಿನ್ನ ನಾದಿನಿಯೂ ಪುರಾಣ ಮಾಡುತ್ತ ಕುಳಿತರೆ ಅರ್ಧರಾತ್ರಿಯಾ
ಗುತ್ತದೆ. ಏಳಿ ಊಟ ಮಾಡೋಣ," ಎಂದು ಹೇಳಿ ಅವರಿಬ್ಬರನ್ನೂ ಎಬ್ಬಿ
ಸಿದನು.

ಮೂವರೂ ಊಟಕ್ಕೆ ಕುಳಿತರು. ಅಡಿಗೆಯಾಕೆಯು ಬಡಿಸುತ್ತಿದ್ದಳು.

ನಾಣಿ, "ಶ್ಯಾಮಲಾ ವಾಸುವು ಬಂದಿದ್ದನೇನು?" ಎಂದು ಕೇಳಿದನು.

"ಅವನೆಲ್ಲಿ ಬರುತ್ತಾನೆ. ಸುಮಾರು ಎರಡು ವಾರಗಳಾಗಿರಬಹುದು.
ನಾಳೆ ಬೆಳಗ್ಗೆ ನಮ್ಮ ಪಾಠಶಾಲೆಗೆ ರಜವಿದೆ. ನಾನೂ ತಾರೆಯೂ ವಾಸುವಿನ
ಮನೆಗೇ ಹೋಗಿ ಬರುತ್ತೇವೆ. ಕಮಲಮ್ಮನವರನ್ನೂ ನಾನು ನೋಡಿ ಹೆಚ್ಚು
ದಿನಗಳಾದುವು ಅವರೇನು ತಿಳಿದುಕೊಳ್ಳುತ್ತಾರೆಯೋ?" ಎಂದಳು ಶ್ಯಾಮಲೆ.

"ನಾವು ವಾಸುವನ್ನು ಕಂಡಿದ್ದೆವು. ಸಿನಿಮಾಕ್ಕೆ ಬಾ ಎಂದು ಕರೆದೆವು.
ಅವನು ಬರುವುದಿಲ್ಲವೆಂದು ಹೇಳಿ ಹೊರಟುಹೋದ."

" ಅವನು ಹಾಗೆಯೇ ! ಸ್ವಲ್ಪ ವಕ್ರ ! "

" ಶ್ಯಾಮಲಾ, ನೀನೂ ಹಾಗೆಯೇ ಹೇಳುವಿಯಾ ? " ಎಂದು ತಾರಾ ನಕ್ಕಳು. ಶ್ಯಾಮಲೆಯೂ ನಕ್ಕಳು.

ಭೋಜನವಾದ ಮೇಲೆ ಶ್ಯಾಮಲೆಯು ಹಜಾರದಲ್ಲಿ ಕುರ್ಚಿಯ ಮೇಲೆ ಕುಳಿತು ಪುನಃ ಆ ಪುಸ್ತಕವನ್ನು ಓದತೊಡಗಿದಳು.

ಅಣ್ಣ ಅತ್ತಿಗೆಯವರು ಸೋಫಾದ ಮೇಲೆ ಕುಳಿತು ತಾಂಬೂಲಚರ್ವಣ ಮಾಡುತ್ತಿದ್ದರು.

" ಶ್ಯಾಮಲಾ ಪುನಃ ಅದೇ ಪುಸ್ತಕ. ಅದರಲ್ಲೇನು ಅಷ್ಟು ಸ್ವಾರಸ್ಯವಿದೆ. ನಮಗೂ ಸ್ವಲ್ಪ ಹೇಳಬಾರದೇ ? " ಎಂದು ತಾರಾ ಕೇಳಿದಳು.

" ಹೇಳದೇ ಏನು ? ಬೇಕಾದರೆ ನೀನೂ ಓದಬಹುದು. ಇದು ಒಂದು ಆಶ್ಚರ್ಯಕರವಾದ ಗ್ರಂಥ ! ನಾವು ಆರ್ಯ ಸಂತಾನದವರೆಂದು ಹೇಳಿಕೊಳ್ಳುತ್ತೇವೆ. ಇದರಲ್ಲಿ ಪೂರ್ವದ ಅತಿ ಪೂರ್ವದ ಆರ್ಯರ ಕಥೆ ಚಿತ್ರಿಸಿದ್ದಾರೆ " ಎಂದು ಶ್ಯಾಮಲಾ ಉತ್ತರ ಕೊಟ್ಟಳು.

" ಏನು ? ನಮ್ಮ ಪೂರ್ವದ ಆರ್ಯರು ಶ್ರೀರಾಮಚಂದ್ರ–ಸೀತಾದೇವಿಯ ರಂತಿದ್ದರು. ಧರ್ಮರಾಯನಂತಿದ್ದರು. ನಳ–ದಮಯಂತಿಯರಂತಿದ್ದರು. ಅಷ್ಟೇ ತಾನೆ ? "

ಶ್ಯಾಮಲೆಯು ನಕ್ಕಳು. " ಅದಲ್ಲ ! ಅದಲ್ಲ ! ಈ ಕಥೆಯೇ ಬೇರೆ ತಾರಾ. ಈ ಕಥೆಯಲ್ಲಿ ಆ ಜನರಿಗೆ ದೇವರಿಲ್ಲ. ಧರ್ಮವಿಲ್ಲ. ಈ ಪುಸ್ತಕದ ಲ್ಲಿರುವುದು ನಿಜವೆಂದರೆ, ನಮ್ಮ ಸಮಾಜ, ನಮ್ಮ ಆಚಾರ, ವ್ಯವಹಾರ ಎಲ್ಲವೂ ಸುಳ್ಳು ! ಅವರೆಲ್ಲರೂ ಮಾಂಸವನ್ನು ತಿನ್ನುತ್ತಿದ್ದರು. ಮದ್ಯಸೇವನೆ ಮಾಡುತ್ತಿದ್ದರು. ಸೋದರ ಸೋದರಿಯರು ಮದುವೆಯಾಗುತ್ತಿದ್ದರು. ಬೇಡವೆಂದರೆ ಗಂಡ ಹೆಂಡತಿಯರು ಬಿಟ್ಟುಬಿಡುತ್ತಿದ್ದರು. ಮತ್ತೊಬ್ಬನೊಡನೆ ನಿಸ್ಸಂಕೋಚವಾಗಿ ವಿಹರಿಸುತ್ತಿದ್ದರು."

" ಸಾಕು. ಸಾಕು. ಆ ಪುಸ್ತಕವನ್ನೇಕೆ ಓದುತ್ತಿ? " ಎಂದು ತಾರಾ ಆ ಪುಸ್ತಕವನ್ನು ಕಿತ್ತು ಮೇಜಿನ ಮೇಲೆ ಇಟ್ಟಳು.

ರಾತ್ರಿ ಬಹಳ ಹೊತ್ತಾಗಿತ್ತು. ಎಲ್ಲರೂ ಮಲಗಿದರು. ಶ್ಯಾಮಲೆಗೆ ನಿದ್ದೆ ಹತ್ತಲಿಲ್ಲ! 'ಪ್ರಾಚೀನ ಸಮಾಜವು ನಿಜವೇ? ಇಂದಿನ ಸಮಾಜವು ನಿಜವೇ?' ಎಂದು ಚಿಂತಿಸತೊಡಗಿದಳು. 'ಅದೆಲ್ಲಾ ಹೇಗೇ ಇರಲಿ! ಇಂದಿನ ಸಮಾಜ ಸುಳ್ಳು! ಅಭದ್ರ ಸಮಾಜ!' ಎಂದುಕೊಂಡಳು.

ಅವಳಿಗೆ ಯಾವಾಗ ನಿದ್ದೆ ಬಂತೋ ತಿಳಿಯಲಿಲ್ಲ.

## ೨೫

ಬೇಸಿಗೆಯ ಕಾಲ! ಶ್ಯಾಮಲೆಯ ಶಿಶುವಿಹಾರಕ್ಕೆ ರಜಾ. ವನಿತಾ ಶ್ರಮಕ್ಕೂ ರಜಾ. ವನಿತಾಶ್ರಮದ ಹುಡುಗಿಯರೆಲ್ಲರೂ ದೂರದಲ್ಲಿರುವ ತಮ್ಮ ಬಂಧುಗಳ ಮನೆಗೆ ಹೋಗಿದ್ದಾರೆ. ನಾಲ್ಕಾರು ಅನಾಥ ಹುಡುಗಿಯರು ಅಲ್ಲಿಯೇ ಇದಾರೆ. ಶ್ಯಾಮಲೆಯು ಪ್ರತಿದಿನವೂ ಪ್ರಾತಃಕಾಲ ಆಶ್ರಮಕ್ಕೆ ಹೋಗಿ ಬರುತ್ತಾಳೆ. ಅವಳು ರಜಾ ದಿನಗಳಲ್ಲಿ ನಾರಾಯಣರಾಯನ ಮನೆ ಯಲ್ಲಿಯೇ ಇದಾಳೆ. ಅವಳಿಗೆ ಬೇಸರ! ಅಲ್ಪಸ್ವಲ್ಪ ಮನೆಗೆಲಸ ಮಾಡುತ್ತಾಳೆ. ಪುಸ್ತಕಗಳನ್ನು ಓದುತ್ತಾಳೆ. ನಾಣಿ-ತಾರಾದೇವಿಯರೊಡನೆ ಮಾತನಾಡು ತ್ತಾಳೆ. ಒಂದೊಂದು ದಿನ ವಾಸುದೇವನೂ ಬಂದು ಮಾತಿನ ಕಛೇರಿಗೆ ಸೇರುತ್ತಾನೆ. ಅವನಿಗೆ ಸಮಾಜವು ಸರಿಯಿಲ್ಲವೆಂಬ ಭಾವನೆ. ಕಾಂಗ್ರೆಸ್ಸು ಒಪ್ಪಿಗೆಯಿಲ್ಲ. ಯಾವಾಗಲೂ ಧನಿಕ-ದರಿದ್ರರ ಮಾತುಗಳನ್ನಾಡುತ್ತಾನೆ. ಶ್ಯಾಮಲೆಯ ದೇಶಸೇವೆಯೆಲ್ಲಾ ವ್ಯರ್ಥವೆಂದು ವಾದಿಸುತ್ತಾನೆ. ನಾರಾಯಣ ರಾಯನ ಕಾಂಗ್ರೆಸ್ ಸೇವೆಯಂತೂ, ವಿಡಂಬನವೆಂದು ಹೇಳುತ್ತಾನೆ.

ಸಂಧ್ಯಾಕಾಲ ಒಂದೊಂದು ದಿನ ತಾರೆಯು ಸಂಗೀತ ಹಾಡುತ್ತಾಳೆ. ಶ್ಯಾಮಲೆಗೆ ಅದೆಷ್ಟೋ ಪ್ರಿಯವಾಗಿರುತ್ತದೆ. ಆದರೂ ಅವಳಿಗೆ ಬೇಸರ! ಅವಳು ಎಲ್ಲಿಗಾದರೂ ಪರಸ್ಥಳಕ್ಕೆ ಹೋಗಿ ಬರಬೇಕೆಂದು ಯೋಚಿಸುತ್ತಾಳೆ. ಅಣ್ಣನೊಡನೆ ಹೇಳಿದರೆ ಸಾಕು, ಅದು ಸಿದ್ಧಿಸುತ್ತದೆ. ಆದರೆ ಬಾಯಿ ಬಿಟ್ಟು ಹೇಳುವುದಿಲ್ಲ. ಅದು ಅವಳ ಸ್ವಭಾವ!

ಶ್ಯಾಮಲೆಯು ಏಕಾಂತಪ್ರಿಯೆ! ಅವಳು ಏಕಾಂತದಲ್ಲಿರುವಾಗ ತನ್ನ ತಾಯಿಯ ನೆನಪು ಬರುತ್ತದೆ. ತಂದೆಯ ಮರಣ, ನಾಣಿಯ ಕಾರಾಗೃಹ

ವಾಸ, ತಾಯಿಯ ರೋದನೆ, ತನ್ನ ವಿವಾಹ—ಎಲ್ಲವೂ ಚಿತ್ರಪಟದ ಮೇಲಿನ ಚಿತ್ರಗಳಂತೆ ಮನಸ್ಸಿನ ಮೇಲೆ ಬರುತ್ತವೆ. ರಂಗರಾಯನ ಮೂರ್ತಿಯೂ ಬಂದು ಮುಂದೆ ನಿಲ್ಲುತ್ತದೆ. ಅವನ ಡಂಭಾಚಾರ, ಕುಡುಕತನ, ತನ್ನ ಗೃಹತ್ಯಾಗ ಇದೆಲ್ಲವೂ ಕಣ್ಣಿಗೆ ಕಟ್ಟುತ್ತವೆ. ಹೃದಯವು ನಡುಗುತ್ತದೆ. ವಾಸುವಿನ ದೀನವದನವು ಜ್ಞಾಪಕಕ್ಕೆ ಬರುತ್ತದೆ. ಹೃದಯಲ್ಲಿ ಅಂಧಕಾರವು ಕವಿಯುತ್ತದೆ. ತಾನೇಕೆ ಬದುಕಿರಬೇಕು ಎನ್ನಿಸುತ್ತದೆ.

ರಾತ್ರಿ ಮನೆಯ ಕಾಂಪೌಂಡಿನಲ್ಲಿ ಬೆಳುದಿಂಗಳಿನಲ್ಲಿ ಹೋಗಿ ಆಕಾಶವನ್ನು ನೋಡುತ್ತಾ ನಿಂತುಕೊಳ್ಳುತ್ತಾಳೆ. ಇಹಲೋಕವನ್ನು ಬಿಟ್ಟುಹೋದ ಪುಣ್ಯಾತ್ಮರೆಲ್ಲಾ ನಕ್ಷತ್ರಗಳಾಗುತ್ತಾರೆಂದು ಅವಳಿಗೆ ದೃಢನಂಬಿಕೆ. ತನ್ನ ತಾಯಿ ನಕ್ಷತ್ರವಾಗಿದ್ದಾಳೆಂದುಕೊಳ್ಳುತ್ತಾಳೆ. ನಕ್ಷತ್ರಮಂಡಲವನ್ನು ದಿಟ್ಟಿಸಿ ನೋಡುತ್ತಾಳೆ. ಥಳಥಳಿಸುವ ನಕ್ಷತ್ರವನ್ನು ತನ್ನ ತಾಯಿಯೆಂದುಕೊಳ್ಳುತ್ತಾಳೆ. ಆ ನಕ್ಷತ್ರವು ತನ್ನಮೇಲೆ ಪ್ರೇಮವರ್ಷವನ್ನು ಕರೆಯುತ್ತಿದೆಯೆಂದು ಅವಳಿಗೆ ಬೋಧೆಯಾಗುತ್ತದೆ. ಆ ಆನಂದದಲ್ಲಿ ಪುಳಕಿತಳಾಗುತ್ತಾಳೆ. ನಾನೂ ಆ ನಕ್ಷತ್ರಲೋಕಕ್ಕೆ ಹೋಗಬಾರದೇ! ಎಂದುಕೊಳ್ಳುತ್ತಾಳೆ!

ರಂಗರಾಯನ ಸ್ಥಿತಿಯು ಬೇರೊಂದು ವಿಧ. ಈಗ ರಂಗರಾಯನಿಗೆ ವ್ಯಾಪಾರ-ಸಾಪಾರಗಳೇನೂ ಇಲ್ಲ. ಆದರೂ ಆಫೀಸಿದೆ. ಲೆಖ್ಖ ಪತ್ರಗಳನ್ನು ನೋಡಿಕೊಳ್ಳುವ ಒಬ್ಬಿಬ್ಬರು ಗುಮಾಸ್ತರಿದ್ದಾರೆ. ಆಳುಕಾಳುಗಳಿದ್ದಾರೆ. ಪ್ರಾತಃಕಾಲ ಆಫೀಸಿಗೆ ಹೋಗಿ ಬರುತ್ತಾನೆ. ಯಾರೊಡನೆಯೂ ಹೆಚ್ಚು ಸಂಭಾಷಣೆಯಿಲ್ಲ. ಮನೆಯಲ್ಲಿ ಎತ್ತ ನೋಡಿದರೂ ಅವನಿಗೆ ಬೇಸರ! ಬಹಳವಾಗಿ ಕುಡಿಯುತ್ತಾನೆ. ಮೈಮರೆತು ಬಿದ್ದಿರುತ್ತಾನೆ.

ಆಗಾಗ ರಾಮಾಶಾಸ್ತ್ರಿಯು ಬರುತ್ತಾನೆ. ಇವನೊಬ್ಬ ಆಪ್ತ! ಇವನು ರಾಯರಿಗೆ ಹೆಣ್ಣುಗಳನ್ನು ಹುಡುಕುತ್ತಾನೆ. ಆಗಾಗ ಬಂದು ರಾಯರಿಗೆ ಹೇಳುತ್ತಾನೆ. ಹೇಗಾದರೂ ಶ್ಯಾಮಲೆಯ ಮಾತನ್ನೆತ್ತುತ್ತಾನೆ. ಅವಳು ಧರ್ಮಚ್ಯುತಳೆಂದು ಹೇಳುತ್ತಾನೆ. ಕಾಂಗ್ರೆಸ್ಸಿಗೆ ಸೇರಿದವರೆಲ್ಲಾ ಹೀಗೆಯೇ ಎಂದು ಅವನ ಸಿದ್ಧಾಂತ! ಅವನಿಗೆ ಆಗಾಗ ಸ್ವಲ್ಪ ಹಣ ಸಿಕ್ಕುತ್ತದೆ. ಅದಕ್ಕಾಗಿ

ರಾಯರನ್ನು ಹೊಗಳುತ್ತಾನೆ. ಆದರೆ ಈಗ ರಾಯರು ಕಾಂಗ್ರೆಸ್ಸಿನವರೇ!

ಡಾಕ್ಟರೂ ಒಬ್ಬ ಮಿತ್ರ. ಅವರು ಪುರಸತ್ತಾದಾಗ ಬರುತ್ತಾರೆ. ಆಗ ಇಬ್ಬರೂ ಕುಡಿಯುತ್ತಾರೆ. ರಂಗರಾಯನು ಹುಚ್ಚುಹುಚ್ಚಾಗಿ ಮಾತನ್ನಾಡು ತ್ತಾನೆ. ಶ್ಯಾಮಲೆಯನ್ನು ಬಾಯಿ ತುಂಬಾ ದೂಷಿಸುತ್ತಾನೆ. ಮನಸ್ಸು ರೇಗಿ ವೀರಾವೇಶವು ಬಂದಾಗ "ಶ್ಯಾಮಲೆಯನ್ನು ಕೊಂದು ಹಾಕಿಬಿಡುತ್ತೇನೆ. ನನ್ನ ಅಪಮಾನವೆಲ್ಲವನ್ನು ಶ್ಯಾಮಲೆಯ ರಕ್ತದಿಂದ ತೊಳೆದುಬಿಡುತ್ತೇನೆ" ಎಂದು ಆರ್ಭಟಿಸುತ್ತಾನೆ.

ಡಾಕ್ಟರು ಒಂದೊಂದು ಬಾರಿ ಈ ಪ್ರಾಣಿಯನ್ನು ನೋಡಿ ಕನಿಕರ ಪಡುತ್ತಾರೆ. ಒಂದೊಂದು ಬಾರಿ ಅವರಿಗೂ ರೇಗುತ್ತದೆ. ಒಂದು ದಿನ ಡಾಕ್ಟ ರಿಗೆ ಬಹಳ ಕೋಪ ಬಂದಿತು.

"ರಂಗರಾವ್—ನೀನು ಯಾವಾಗಲೂ ಶ್ಯಾಮಲೆಯ ಮಾತನ್ನೇ ಆಡುತ್ತೀ! ಅವಳನ್ನು ಕೊಂದು ಹಾಕುತ್ತೇನೆಂದು ಹೇಳುತ್ತಿ! ನಿನಗೇನು ಅಧಿಕಾರವಿದೆ?" ಎಂದು ಕೇಳಿದರು.

"ಅಧಿಕಾರ! ಅಧಿಕಾರ! ಆ ಶ್ಯಾಮಲೆ ನನ್ನ ಹೆಂಡತಿಯಲ್ಲವೇನು? ಅವಳಿಂದ ನನ್ನ ಸರ್ವಸ್ವವೂ ಹಾಳಾಯಿತು. ಮಾನ ಹೋಯಿತು! ಇನ್ನೇ ನಾಗಬೇಕು. ಅವಳನ್ನು ಕೊಂದರೆ ಪಾಪವಿಲ್ಲ!"

"ಪಾಪ! ಪುಣ್ಯ! ಯಾರಿಗೆ ಗೊತ್ತು. ನೀನು ಅವಳನ್ನು ಕೊಂದರೆ ನಿನ್ನನ್ನು ಗಲ್ಲಿಗೆ ಹಾಕುತ್ತಾರೆ, ಬಲ್ಲೆಯಾ?"

"ನನ್ನನ್ನು ಗಲ್ಲಿಗೆ ಹಾಕುತ್ತಾರೆ. ಶ್ಯಾಮಲೆ ವ್ಯಭಿಚಾರಿಣಿಯಾದರೆ ಅವಳನ್ನೇನೂ ಶಿಕ್ಷಿಸುವುದಿಲ್ಲ. ಆ ವಾಸುದೇವರಾಯನಿಗೇನೂ ಶಿಕ್ಷೆಯಿಲ್ಲ! ನಿನಗೇನೂ ಶಿಕ್ಷೆಯಿಲ್ಲ!"

"ರಂಗರಾವ್! ನನಗೇಕೆ ಶಿಕ್ಷೆ!"

"ನಿನಗೇಕೆ ಶಿಕ್ಷೆಯೇ! ನಾನೇನು ಅರಿಯೆನೆಂದುಕೊಂಡಿರುವೆಯಾ? ನೀನೂ ಆ ಶ್ಯಾಮಲೆಯ ಮೋಹಕ್ಕೆ ಹಲ್ಲುಗಿಂಜುವ ಗಿಡುಗ!"

"ಹುಚ್ಚ! ಬಾಯಿ ಮುಚ್ಚು! ನಿನಗೆ ಆ ಶ್ಯಾಮಲೆಯ ಮೇಲೆ ಏನೂ

ಅಧಿಕಾರವಿಲ್ಲ" ಎಂದು ಡಾಕ್ಟರು ರಂಗರಾಯನನ್ನು ಧಿಕ್ಕರಿಸಿ ಹೊರಟು ಹೋದರು.

ರಂಗರಾಯನು ಮಹಡಿಯ ಮೇಲಿಂದ ಕೆಳಗಿಳಿದು ಬೀದಿಗೆ ಬಂದನು. ಡಾಕ್ಟರು ಹೊರಟು ಹೋಗಿದ್ದರು; ರಸ್ತೆಯಲ್ಲಿ ನೋಡಿದನು. ಯಾರೂ ಇರಲಿಲ್ಲ. ಹುಚ್ಚನಂತೆ ನಡೆದು ಹೋದನು. ಎಲ್ಲಿಗೆ ಹೋಗುತ್ತಿದ್ದಾನೋ ಅವನಿಗೇ ಅರಿವಿಲ್ಲ! ಹಾಗೆಯೇ ಎಲ್ಲಿ ಎಲ್ಲಿಯೋ ನಡೆದುಕೊಂಡು ಹೋಗಿ ಒಂದು ಮನೆಯ ಬಾಗಿಲಿನಲ್ಲಿ ನಿಂತನು! ಅದು ನಾರಾಯಣರಾಯನ ಮನೆ. ಶ್ಯಾಮಲೆಯು ಆ ಮನೆಯಲ್ಲಿದಾಳೆಂದು ಅವನಿಗೆ ಭಾಸವಾಯಿತು. ಮನೆಯೊಳಗೆ ಹೋಗಿ ಶ್ಯಾಮಲೆಯನ್ನು ಮಾತನಾಡಿಸಿ ಬರಲೇ ಎನ್ನಿಸಿತು. ಏನೋ ಅಧೈರ್ಯ! 'ಬೇಡ! ಬೇಡ! ಶ್ಯಾಮಲೆಗೂ ನನಗೂ ಏನು ಸಂಬಂಧ!' ಎಂದು ಹೊರಟುಹೋದನು. ಹೇಗೇ ಆಗಲಿ ಈ ಭೂಮಿಯ ಮೇಲೆ ಈ ಶ್ಯಾಮಲೆ ಬದುಕಿರಕೂಡದು. ಅವಳು ಬದುಕಿರುವಷ್ಟು ದಿನಗಳೂ ನನ್ನ ಅಪಮಾನವು ತಪ್ಪುವುದಿಲ್ಲ. ಇರಲಿ ಎಂದಾದರೊಂದು ದಿನ ಇವಳನ್ನು ಮುಗಿಸಿಬಿಡುತ್ತೇನೆ; ಎಂದು ಬಾಯಲ್ಲಿ ಗೊಣಗುಟ್ಟುತ್ತಾ ಹೊರಟುಹೋದನು.

## ೨೫

ರಂಗರಾಯನು ವ್ಯಾಪಾರವನ್ನೆಲ್ಲಾ ನಿಲ್ಲಿಸಿದ್ದನು. ಆಫೀಸಿಗೆ ದಿನವೂ ಹೋಗಿ ಬರುತ್ತಿದ್ದನು. ಶಂಕರಯ್ಯನು ರಂಗರಾಯನ ಬಾಲ್ಯಸ್ನೇಹಿತ. ವ್ಯಾಪಾರವು ಭರಾಟೆಯಿಂದ ನಡೆಯುವಾಗ ಅವನು ಚೆನ್ನಾಗಿ ದುಡ್ಡು ಮಾಡಿಟ್ಟುಕೊಂಡಿದ್ದನು. ರಂಗರಾಯನ ಅಂತರಂಗವೆಲ್ಲವೂ ಅವನಿಗೆ ಚನ್ನಾಗಿ ಗೊತ್ತಿತ್ತು. ರಂಗರಾಯನು ಪ್ರಾತಃಕಾಲ ಆಫೀಸಿಗೆ ಬಂದಾಗ ವ್ಯಾಪಾರದ ವಿಚಾರವಾಗಿ ರಂಗರಾಯನಿಗೂ ಶಂಕರಯ್ಯನಿಗೂ ಮಾತುಕಥೆ ನಡೆಯಿತು.

"ರಾಯರೇ! ನಮ್ಮ ಆಫೀಸಿನಲ್ಲಿ ಏನೂ ಕೆಲಸವಿಲ್ಲ. ಇಷ್ಟು ಸಿಬ್ಬಂದಿ ಯೇಕೆ? ಪೇಟೆಯಲ್ಲಿ ವರ್ತಕರು ಮನಸ್ಸಿಗೆ ಮಾತನಾಡಿಕೊಳ್ಳುತ್ತಾರೆ. ನಾವೇಕೆ ಹೀಗಿರಬೇಕು. ನೀವು ಏನು ಯೋಚನೆ ಮಾಡಿದ್ದೀರಿ!" ಎಂದು ಶಂಕರಯ್ಯ ಕೇಳಿದನು.

ರಂಗರಾಯನು ಒಂದು ಸಿಗರೇಟ್ ಹಚ್ಚಿದನು. "ನೋಡಿ ಶಂಕರಯ್ಯ! ಈ ಕಾಂಗ್ರೆಸ್ ಸರ್ಕಾರ ಬಲು ಕೆಟ್ಟುಹೋಗಿದೆ. ಈ ಸರ್ಕಾರದ ಹಂಗಿಲ್ಲದ ವ್ಯಾಪಾರ ಯೋಚನೆ ಮಾಡುತ್ತಿದ್ದೇನೆ. ಜಪಾನ್—ಅಮೇರಿಕಾ - ಇಂಗ್ಲೆಂಡುಗಳ ದೊಡ್ಡ ಕಂಪನಿಗಳೊಡನೆ ಪತ್ರವ್ಯವಹಾರ ಮಾಡಿ, ಒಂದು ದೊಡ್ಡ ಏಜನ್ಸಿ ಹೊಡೆದುಬಿಡಬೇಕು. ಯೋಚನೆ ಮಾಡುತ್ತಿದ್ದೇನೆ, ಶಂಕರಯ್ಯ! ನಾನು ಸುಮ್ಮನೇ ಇದೇನೆಂದುಕೊಳ್ಳಬೇಡ!"

"ನೀವು ಸುಮ್ಮನಿದ್ದರೂ ನಿಮ್ಮ ಪ್ರಚಂಡ ಬುದ್ಧಿ ಸುಮ್ಮನಿರುವುದಿಲ್ಲ ರಾಯರೇ, ನನಗೆ ಗೊತ್ತು! ಆದರೆ ನಿಮಗೇನೋ ಮನೋವ್ಯಥೆ! ಅದು ನಮ್ಮ ಗ್ರಹಚಾರ!"

“ ಶಂಕರಯ್ಯ ! ನಿನಗೆ ತಿಳಿಯದ್ದು ಏನಿದೆ, ನನ್ನ ಕುಟುಂಬದ ವಿಷಯ ಚೆನ್ನಾಗಿಲ್ಲ. ಆ ಶ್ಯಾಮಲೆ—ಲಕ್ಷ್ಮೀದೇವಿಯಂತಹ ಹೆಣ್ಣು ! ಅವಳು ಮನೆಗೆ ಬಂದಮೇಲೆ ನಮ್ಮ ಸ್ಥಿತಿಯು ಬಡಕಾಯಿಸಿತು ! ಆದರೇನು ಕುಲ ಕೆಟ್ಟದ್ದು ! ಕೆಟ್ಟ ಸಹವಾಸ! ಅವಳೂ ಹಾಳಾಗಿಹೋದಳು ; ನನ್ನ ಮನಸ್ಸೂ ಮುರಿದು ಹೋಯಿತು. ”

“ ಹೌದು ರಾಯರೆ ? ನೀವು ಹೇಳುವುದೆಲ್ಲಾ ಸರಿ ! ಆದರೆ ನಿಮ್ಮಂತಹ ದೊಡ್ಡ ಮನುಷ್ಯರು ಒಬ್ಬ ಹೆಂಗಸಿಗಾಗಿ ಇಷ್ಟು ಕುಗ್ಗಬಾರದು. ಅಂಥಾ ಹತ್ತಾರು ಹೆಂಗಸರು ಸಿಕ್ಕುತ್ತಾರೆ! ನಿಮಗೇಕೆ ಚಿಂತೆ ? ”

“ ಇಲ್ಲ. ಶಂಕರಯ್ಯ, ಹೆಂಗಸಿಗಾಗಿ ಕುಗ್ಗಿ ಹೋಗಿದ್ದೇನೆಂದು ಭಾವಿಸ ಬೇಡ ! ಇರಲಿ ! ಒಟ್ಟಿನಲ್ಲಿ ಗ್ರಹಚಾರಕಾಲ ! ವ್ಯಾಪಾರ ಸರಿಪಡಿಸೋಣ ! ”

ರಂಗರಾಯನು ಉತ್ತೇಜಿತವಾಗಿ ಮನೆಗೆ ಹೋದನು.

ಮಾರನೆಯ ದಿನ ಪ್ರಾತಃಕಾಲ ರಂಗರಾಯನು ಕಛೇರಿಗೆ ಹೋಗಲು ಬೀದಿಯ ಬಾಗಿಲಿಗೆ ಬಂದನು. ಜಗುಲಿಯ ಮೇಲೆ ಹಾಕಿದ್ದ ಕುರ್ಚಿಯ ಮೇಲೆ ಯುವತಿಯೊಬ್ಬಳು ಕುಳಿತಿದ್ದಳು. ರಂಗರಾಯನು ಬರುತ್ತಲೇ ಎದ್ದು ನಿಂತು ಅಭಿವಂದನೆ ಮಾಡಿದಳು.

ರಂಗರಾಯನು “ ನೀವಾರು ? ಏಕೆ ಬಂದಿದ್ದೀರಿ ? ” ಎಂದು ಕೇಳಿದನು.

“ ನನ್ನ ಹೆಸರು ರಮಾದೇವಿ ! ತಮ್ಮ ಆಫೀಸಿನಲ್ಲಿ ಏನಾದರೂ ಕೆಲಸ ಕೊಡಿಸಬೇಕೆಂದು ಕೇಳಲು ಬಂದಿದ್ದೇನೆ. ”

“ ಆಫೀಸು ವಿಷಯ – ಆಫೀಸಿಗೆ ಹೋಗಿರಿ. ಮನೆಗೆ ಬರಬಾರದು. ಅಲ್ಲಿ ಮ್ಯಾನೇಜರಿದ್ದಾರೆ. ಅವರೊಡನೆ ಮಾತನಾಡಿರಿ ! ಇರಲಿ. ನೀವೇನು ಕೆಲಸ ಮಾಡಬಲ್ಲಿರಿ ! ”

“ ನಾನು ಟೈಪಿಸ್ಟ್. ಷಾರ್ಟ್‌ಹ್ಯಾಂಡ್ ಬರುತ್ತದೆ. ಪತ್ರವ್ಯವಹಾರದ ಅನುಭವವಿದೆ. ”

“ ಒಳ್ಳೆಯದು. ನಮ್ಮ ಕಛೇರಿಗೆ ಹೋಗಿ ಮ್ಯಾನೇಜರನ್ನು

ಹೋಡಿರಿ!"

"ಕ್ಷಮಿಸಿರಿ! ನಾನು ಮ್ಯಾನೇಜರನ್ನು ನೋಡಿ ಮಾತನಾಡಿದ್ದೇನೆ. ಂದು ತಿಂಗಳಿಂದ ಆಫೀಸಿಗೆ ತಿರುಗಿದ್ದೇನೆ. ನಿನ್ನೆಯ ದಿನ ತಮ್ಮನ್ನೇ ಹೋಗಿ ೕಟಿ ಮಾಡುವಂತೆ ಹೇಳಿದರು."

"ನಿಮಗೆ ಮದುವೆಯಾಗಿದೆಯೋ?"

ಆಕೆ ತಲೆ ತಗ್ಗಿಸಿ "ನಾನು ವಿಧವೆ!" ಎಂದಳು.

"ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ವೈಧವ್ಯವೇ? ಅಯ್ಯೋ ಪಾಪ! ಮ್ಮ ಸಮಾಜವೇ ಹೀಗೆ!"

"ನಾನು ವಿಧವೆಯಾಗಿ ಆರು ವರ್ಷಗಳಾಯಿತು. ಆಮೇಲೆಯೇ ಓದು ಲಿತೆ. ಇಂಟರ್‌ಮೀಡಿಯಟ್ ಪ್ಯಾಸಾಗಿದೆ. ಮುಂದಕ್ಕೆ ಓದೋಣವೆಂದರೆ ೀವನಕ್ಕೇ ಇಲ್ಲ!"

ಕನಿಕರದಿಂದ ರಂಗರಾಯ "ಆಫೀಸಿಗೆ ಬನ್ನಿ! ನೋಡೋಣ! ನಮ್ಮ ಫೀಸಿನಲ್ಲಿ ಈಗ ಕೆಲಸ ಹೆಚ್ಚಾಗಿಲ್ಲ" ಎಂದ.

ರಂಗರಾಯನು ಮಾರನೆಯ ದಿನ ಆಫೀಸಿಗೆ ಹೋಗುವ ಹೊತ್ತಿಗೆ ರಮಾ ೀವಿಯು ವಿಜಿಟರ್ಸ್ ರೂಮಿನಲ್ಲಿ ಕುಳಿತಿದ್ದಳು. ರಂಗರಾಯನು ಗಂಭೀರ ಾಗಿ ಹೋಗಿ ತನ್ನ ಆಫೀಸು ಕೋಣೆಯಲ್ಲಿ ಕುಳಿತು, ಶಂಕರಯ್ಯನನ್ನು ಕರೆ ನು. ಶಂಕರಯ್ಯನು ಬಂದು ನಮ್ರಭಾವದಿಂದ ಬಂದು ನಿಂತುಕೊಂಡನು.

"ಏನು ಶಂಕರಯ್ಯ! ಅದ್ಯಾರೋ ಟೈಪಿಸ್ಟ್ ಅಂತೆ. ರಮಾದೇವಿ ಮಂತೆ! ಆಕೆ ಯಾರು? ನಮ್ಮ ಆಫೀಸಿನಲ್ಲಿ ಅವಳಿಗೇನು ಕೆಲಸವಿದೆ?"

"ಏನೂ ಕೆಲಸವೇ ಇಲ್ಲವೆಂದು ತಮಗೆ ಹೇಳಿಯೇ ಇದ್ದೇನೆ. ಆದರೂ ವಳು ಬುದ್ಧಿವಂತೆ. ಹೇಗೆಯೋ ನಮ್ಮ ಆಫೀಸಿಗೆ ಬಂದಿದ್ದಾಳೆ. ಒಂದು ಂಗಳಿಂದ ಪೀಡಿಸುತ್ತಿದ್ದಾಳೆ. ನೀವು ಹೊಸ ಬಿಜಿನೆಸ್ ಮಾಡೋಣ, ಪರ ೇಶಗಳಿಗೆ ಕರಸ್ಪಾಂಡೆನ್ಸ್ ಮಾಡೋಣ ಎಂದಿರಲ್ಲ. ಅದರಿಂದ ನಿಮ್ಮನ್ನೇ ಹೋಗಿ ಕಾಣುವಂತೆ ಹೇಳಿ ಕಳುಹಿಸಿದೆ."

"ಹೊಸ ಬಿಜಿನೆಸ್ಸೇ—ಅದು ಇನ್ನೂ ಆಲೋಚನೆಯಲ್ಲಿದೆ. ಹೇಗೋ

ಆಗಲಿ! ಒಬ್ಬ ಟೈಪಿಸ್ಟ್ ಇದ್ದರೆ ಒಳ್ಳೆಯದು. ಆದರೆ ಯುವತಿಯನ್ನು ಟೈಪಿಸ್ಟಾಗಿ ಇಟ್ಟುಕೊಳ್ಳಲು ನನಗೆ ಸಂಕೋಚ! ಹುಡುಗಿಯು ರೂಪವತಿ! ಜನರೇನೆಂದುಕೊಂಡಾರು ?"

"ಜನದ ಬಾಯಿಗೆ ಏನು ಮಾಡಲಾದೀತು! ನಮ್ಮ ನಡತೆ ನಮ್ಮ ಗುಣ ನಮ್ಮ ಕೈಲಿದ್ದರೆ ಏನೂ ಪರವಾ ಇಲ್ಲ."

"ನೋಡಿ! ಶಂಕರಯ್ಯ! ಹುಡುಗಿಯ ಕಥೆ ಕೇಳಿ ನನಗೂ ಕನಿಕರವಾಯಿತು, ಇದ್ದರೆ ಇದ್ದುಕೊಳ್ಳಲಿ! ಆ ಹುಡುಗಿಯನ್ನು ಕೆಲಸಕ್ಕೆ ತೆಗೆದುಕೊಂಡುಬಿಡಿ! ಆದರೆ ಜವಾಬ್ದಾರಿಯು ನಿಮ್ಮದು, ನನ್ನದೇನೂ ಇಲ್ಲ!"

ಹುಡುಗಿಯನ್ನು ಆಫೀಸು ರೂಮಿನೊಳಗೆ ಕರೆಸಲಾಯಿತು.

ಆಕೆ ಬಂದು ಕೈಮುಗಿದಳು.

ರಂಗರಾಯ ಆಕೆಯನ್ನು "ರಮಾದೇವಿ! ನಿನ್ನನ್ನು ಮ್ಯಾನೇಜರು ಒಪ್ಪಿದ್ದಾರೆ. ಕೆಲಸಕ್ಕೆ ತೆಗೆದುಕೊಳ್ಳುವಂತೆ ಹೇಳಿದ್ದೇನೆ. ಗಂಭೀರವಾಗಿರಬೇಕು. ನಮ್ಮ ಆಫೀಸಿಗೆ ಒಳ್ಳೇ ಹೆಸರು ಬರಬೇಕು."

ಸಂಬಳ ತಿಂಗಳಿಗೆ ಐವತ್ತು ರೂಪಾಯಿಗಳು ನಿಗದಿಯಾಯಿತು. ರಮಾದೇವಿಯು ರಂಗರಾಯನ ಟೈಪಿಸ್ಟ್ ಆದಳು.

ರಮಾದೇವಿಯು ಚಾಲಕಿನ ಹುಡುಗಿ. ಬೇಗ ರಂಗರಾಯನ ಮರ್ಜಿಯನ್ನು ಹಿಡಿದಳು. ಈಗ ರಂಗರಾಯನ ಠೀವಿಯೇ ಬೇರೆ. ಪತ್ರವ್ಯವಹಾರಗಳು ಹೆಚ್ಚುಹೆಚ್ಚಾದುವು. ರಂಗರಾಯನ ಮನೆಯಲ್ಲಿಯೇ, ರಮಾದೇವಿಗೆ ಒಂದು ಆಫೀಸು ಏರ್ಪಾಡಾಯಿತು. ಸರ್ವದಾ ರಮಾದೇವಿಯು ರಂಗರಾಯನ ಸಮೀಪದಲ್ಲಿಯೇ ಇರಬೇಕು.

ಡಾಕ್ಟರ್ ಸುಬ್ಬರಾಯರು ಈಚೆಗೆ ರಂಗರಾಯನ ಮನೆಗೆ ಬರುತ್ತಿರಲಿಲ್ಲ. ಆತ ಒಂದು ತರಹೆಯ ಮನುಷ್ಯ! ಯಾರನ್ನೂ ಹೆಚ್ಚಾಗಿ ಸ್ನೇಹ ಮಾಡುವವನೂ ಅಲ್ಲ. ಆದರೆ ಅವನಿಗೆಷ್ಟೋ ಮಂದಿ ಸ್ನೇಹಿತರು. ಆತ ರಂಗರಾಯನ ಹೊಸ ಬಿಜಿನೆಸ್, ಟೈಪಿಸ್ಟ್ ಈ ವಿಚಾರಗಳನ್ನೆಲ್ಲಾ ಕಥೆ ಕಥೆಯಾಗಿ ಕೇಳಿದ್ದನು. ತಾನೇ ಒಂದು ಬಾರಿ ಹೋಗಿ ರಂಗರಾಯನನ್ನು ನೋಡಿ

ಕೊಂಡು ಬರಬೇಕೆಂದಿದ್ದನು. ರಮಾದೇವಿಯನ್ನೊಂದು ಬಾರಿ ಮಾತನಾಡಿಸ ಬೇಕೆಂದು ಕುತೂಹಲವೂ ಇದ್ದಿತು.

ರಂಗರಾಯನು ಡಾಕ್ಟರಿಗೆ ಎರಡು ಮೂರಾವೃತ್ತಿ ಫೋನ್ ಮಾಡಿದ್ದನು. ಡಾಕ್ಟರು ಖಾಯಿಲೆಯುವರನ್ನು ನೋಡುವುದಕ್ಕೆ ಹೋಗಿದ್ದಾರೆಂದು ಜವಾನನು ಉತ್ತರ ಕೊಟ್ಟಿದ್ದನು. ಡಾಕ್ಟರು ಬಂದ ಮೇಲೆ ಅವರಿಗೆ ತಿಳಿಸಿದನು.

ಡಾಕ್ಟರು ಫೋನ್ ಮಾಡಿದರು. ರಮಾದೇವಿಯು ಮರುತ್ತರ ಕೊಟ್ಟಳು.

"ಡಾಕ್ಟರು ಸುಬ್ಬರಾವ್ ಮಾತನಾಡುತ್ತಿರುವುದು, ನೀವಾರು ?"

"ನಾನು ರಂಗರಾಯರ ಸೆಕ್ರಿಟರಿ."

"ಓಹೋ ! ಸೆಕ್ರಿಟರಿಯೋ ? ರಂಗರಾಯರಿದ್ದರೆ ಕರೆಯಿರಿ !"

ರಂಗರಾಯನು ಬಂದು ರಿಸೀವರ್ ಕೈಗೆ ತೆಗೆದುಕೊಂಡನು.

"ಏನು ಡಾಕ್ಟರೇ ! ಎರಡು ಮೂರಾವೃತ್ತಿ ಫೋನ್ ಮಾಡಿದ್ದೆ."

"ಏನು ಸಮಾಚಾರ ?"

"ಎರಡು ಮೂರು ದಿನಗಳಿಂದ ಮೈಗೆ ಸರಿಯಾಗಿಲ್ಲ. ತಾನೇ ಸರಿ ಹೋಗುತ್ತೆಂದು ಇದ್ದೆ. ನಿಮ್ಮ ದಯ ಬಾರದೇ ಸರಿಹೋಗುವಂತಿಲ್ಲ. ಸ್ವಲ್ಪ ಮನೆಗೆ ಬರುತ್ತೀರಾ ?"

"ಬರುತ್ತೇನೆ. ಇನ್ನು ಅರ್ಧ ಘಂಟೆಯಲ್ಲಿ ನಿಮ್ಮ ಮನೆಯಲ್ಲಿ ರುತ್ತೇನೆ."

"ಥ್ಯಾಂಕ್ಸ್ !"

ಡಾಕ್ಟರು ತನ್ನಷ್ಟಕ್ಕೆ ತಾನೇ ! "ಸೆಕ್ರಿಟರಿ. ರಮಾದೇವಿ !" ಎಂದು ಕೊಂಡರು. ಈ ರಂಗರಾಯನ ಅದೃಷ್ಟ ಏನೇನಿದೆಯೋ ? ಏನಾದರೂ ಕೆಲವ ರಿಗೆ ಹೆಣ್ಣಿನ ಚಪಲ ಬಿಡುವುದಿಲ್ಲ !, ಎಂದುಕೊಂಡರು. ಸ್ವಲ್ಪ ಹೊತ್ತಿನೊಳ ಗಾಗಿ ಡಾಕ್ಟರು ರಂಗರಾಯನ ಮನೆಗೆ ಬಂದೇಬಿಟ್ಟರು. ಹಜಾರದಲ್ಲಿಯೇ ರಮಾದೇವಿಯು ನಗುಮೊಗದಿಂದ ವಿನಯವಾಗಿ ಸ್ವಾಗತಿಸಿದಳು.

"ರಾಯರು ಮಹಡಿಯ ಮೇಲಿದ್ದಾರೆ. ಡಾಕ್ಟರು ಬರುತ್ತಲೇ ಮೇಲೆ

ಕರೆತಾರೆಂದು ಹೇಳಿದ್ದಾರೆ" ಎಂದಳು.

ಡಾಕ್ಟರು ತಲೆದೂಗಿದನು. "ಮೇಲೆ ಮತ್ತ್ಯಾರಾದರೂ ಇದಾರೆಯೇನು ?" ಎಂದು ಕೇಳಿದನು.

"ಯಾರೂ ಇಲ್ಲ! ಒಬ್ಬರೇ ಮಲಗಿದ್ದಾರೆ. ಮೈಚೆನ್ನಾಗಿಲ್ಲ!"

ಡಾಕ್ಟರು ಮಾತನಾಡದೇ ಮಹಡಿಯ ಮೆಟ್ಟಿಲುಗಳನ್ನು ಹತ್ತಿಹೋದನು. ರಂಗರಾಯನ ಮಲಗುವ ಕೋಣೆಯ ಬಾಗಿಲನ್ನು ತೆಗೆದನು. ರಂಗರಾಯನು ಹಾಸಿಗೆಯ ಮೇಲೆ ಮಲಗಿದ್ದನು.

ಡಾಕ್ಟರು ಕೋಣೆಯೊಳಗೆ ಹೋಗುತ್ತಲೇ ಸ್ವಾಗತಿಸಿದನು. ಅವರು ಸಮೀಪಕ್ಕೆ ಹೋಗಿ ಮಂಚದ ಮೇಲೆಯೇ ಕುಳಿತುಕೊಂಡು "ರಂಗರಾವ್! ಏನಾಗಿದೆ, ಹೇಳು."

"ಡಾಕ್ಟರ್! ನನ್ನನ್ನೇನೂ ಕೇಳಬೇಡ. ನೀನೇ ಪರೀಕ್ಷಿಸಿ ನೋಡು! ಎದೆಯು ಡವಡವನೆ ಬಡಿದುಕೊಳ್ಳುತ್ತದೆ. ಈ ಮಂಚದಿಂದ ಎದ್ದು ಆ ಕಿಟಕಿಯ ಹತ್ತಿರ ಹೋದರೆ ತಲೆ ತಿರುಗಿ ಕಣ್ಣು ಕತ್ತಲೆ ಕಟ್ಟಿದಂತಾಗುತ್ತದೆ. ಮೈ ಬಿಸಿ ಬಿಸಿಯಾದಂತೆ ಆಗುತ್ತೆ. ಸ್ವಲ್ಪಹೊತ್ತಿನಲ್ಲಿ ಪುನಃ ಸರಿಹೋದಂತಾಗುತ್ತದೆ."

ಡಾಕ್ಟರು ಹೃದಯವನ್ನು ಪರೀಕ್ಷಿಸಿದರು. ನಾಡಿಯನ್ನು ಹಿಡಿದು ನೋಡಿದನು. ನಾಲಗೆಯನ್ನು ಪರೀಕ್ಷಿಸಿದರು :

"ನಾನು ಹೇಳುತ್ತೇನೆ. ರಂಗರಾವ್! ನಿನಗೇನು ಖಾಯಿಲೆಯಿಲ್ಲ, ನನ್ನ ಮಾತು ನಂಬದಿದ್ದರೆ ಬೇರೆ ಡಾಕ್ಟರನ್ನು ಕರೆದು ತೋರಿಸು. ನಾನು ಬೇಡವೆನ್ನುವುದಿಲ್ಲ. ಸ್ವಲ್ಪ ಅಜೀರ್ಣವಾಗಿರಬಹುದು. ನಿನ್ನ ವ್ಯಾಧಿ–ಮನೋವ್ಯಾಧಿ! ಚೆನ್ನಾಗಿ ತಿಳಿದುಕೊ!"

"ನಾನು ಬೇರೆ ಡಾಕ್ಟರಿಗೆ ಎಂದಾದರೂ ತೋರಿಸಿದ್ದೇನೇನಯ್ಯ! ನೀನೇ ನನಗೆ ಧನ್ವಂತರಿ! ನನ್ನ ಖಾಯಿಲೆ ಮಾತು ಬಿಡು! ಇದ್ದರೂ ಒಂದೇ ಸತ್ತರೂ ಒಂದೇ! ನೀನೇಕೆ ನನ್ನ ವಿಷಯದಲ್ಲಿ ಇಷ್ಟು ಉದಾಸೀನನಾಗಿ ಬಿಟ್ಟೆ ? ಹೇಳು!"

" ರಂಗರಾಯ ! ನೀನು ನಿನ್ನ ದೇಹಸ್ಥಿತಿ ನೋಡುವುದಕ್ಕೆ ಕರೆದೆಯೊ ಹರಟೆ ಹೊಡೆಯುವುದಕ್ಕೆ ಕರೆದೆಯೊ ? ನನ್ನ ಆಸ್ಪತ್ರೆಯಲ್ಲಿ ಎಷ್ಟೋ ರೋಗಿಗಳು ಕಾದಿದ್ದರು. ನೀನು ಹರಟೆಗೆ ಆರಂಭ ಮಾಡಿಬಿಟ್ಟೆ ! "

" ಡಾಕ್ಟರ್ ! ಆ ನಿನ್ನ ರೋಗಿಗಳು ಇಂದೇ ಸಾಯುವುದಿಲ್ಲವಷ್ಟೆ ! ನಿನ್ನ ಆಸ್ಪತ್ರೆಗೆ ಫೋನ್ ಮಾಡಿಬಿಡು. ನನ್ನ ಹತ್ತಿರಲೇ ಇರು. ನನ್ನ ವ್ಯಾಧಿ–ಮನೋವ್ಯಾಧಿಗಳನ್ನೆಲ್ಲಾ ಹೇಳುತ್ತೇನೆ. "

" ಹಾಗೇ ಆಗಲಿ ಬಿಡು ! ನಾನು ಎಷ್ಟು ಹೊತ್ತು ಬೇಕಾದರೂ ಇಲ್ಲಿರುತ್ತೇನೆ. ಅಷ್ಟು ದೊಡ್ಡ ವಿಷಯ ಏನಿದೆಯೋ ಮಾತನಾಡು. "

ರಂಗರಾಯನು " ರಮಾ ! ರಮಾ ! " ಎಂದು ಕೂಗಿದನು.

ರಮಾದೇವಿಯು ಬಂದು ನಿಂತಳು.

" ಈ ಡಾಕ್ಟರಿಗೆ ಸ್ವಲ್ಪ ಉಪಚರಿಸಬೇಕು. ಆ ಕಪಾಟದಲ್ಲಿ ' ವಿಸ್ಕಿ ' ಇದೆ. ಈ ಮೇಜದ ಮೇಲೆ ತಂದಿಡು. "

ರಮಾ ಕಪಾಟವನ್ನು ತೆಗೆದು ಗಾಜಿನ ಲೋಟಗಳನ್ನೂ ಸೋಡಾ ಸೀಸೆಗಳನ್ನೂ ' ವಿಸ್ಕಿ ' ಬಾಟಲನ್ನೂ ತಂದಿಟ್ಟಳು.

" ಏನಯ್ಯಾ ! ಈ ಸೆಕ್ರಿಟರಿಯನ್ನು ಸರಿಯಾಗಿ ತಯಾರು ಮಾಡಿಬಿಟ್ಟಿದ್ದಿ ! "

" ಅಯ್ಯೋ ! ನಿನಗೇನು ಗೊತ್ತು ಸುಬ್ಬರಾವ್ ! ಈ ರಮಾದೇವಿಯ ಅನುಗ್ರಹವಿಲ್ಲದಿದ್ದರೆ, ಇಷ್ಟು ದಿನಕ್ಕೆ ಎಂದೋ ನನ್ನ ಅವತಾರ ಪೂರ್ತಿಯಾಗುತ್ತಿತ್ತು ; ನೀನು ಏನೂ ಖಾಯಿಲೆ ಇಲ್ಲವೆನ್ನುತ್ತಿ ! ಆ ರಮಾದೇವಿಯನ್ನು ಕೇಳು. ಒಂದೊಂದು ಬಾರಿ ಜ್ಞಾನಶೂನ್ಯಾವಸ್ಥೆ ಬಂದಂತಾಗುತ್ತೆ. ಆದರೂ ಸ್ವಲ್ಪ ಜ್ಞಾನವಿರುತ್ತೆ. "

" ನನಗೆ ಗೊತ್ತಾಗದಿದ್ದರೆ ರಮಾದೇವಿಯನ್ನು ಕೇಳಬೇಕು. ನಿನ್ನ ವ್ಯಾಧಿಯ ಲಕ್ಷಣವೇ ಹಾಗೆ! ನಿನ್ನ ಹೆಂಡತಿ ಶ್ಯಾಮಲೆಗೂ ಹೀಗೆಯೇ ಇತ್ತು!"

ರಮಾದೇವಿಯು ಮುಗುಳುನಗುವನ್ನು ನಗುತ್ತಾ ಹೊರಟು ಹೋದಳು.

ರಂಗರಾಯನು “ ಸ್ವಲ್ಪ ವಿಸ್ಕಿ ಕೊಡು. ಹೆಚ್ಚಾಗಿ ಬೇಡ! ಅದನ್ನು ಸೇವಿಸಿ ಎದ್ದು ಕುಳಿತು ಮಾತನಾಡುತ್ತೇನೆ ” ಎಂದನು.

ಡಾಕ್ಟರು ಸೋಡಾ ವಿಸ್ಕಿ ಬೆರಸಿ ಕೊಟ್ಟನು. ರಂಗರಾಯನು ಎದ್ದು ಕುಳಿತನು. ತಾನೇ ಒಂದು ಲೋಟಕ್ಕೆ ಸೋಡಾ ವಿಸ್ಕಿಗಳನ್ನು ಸೇರಿಸಿ ಡಾಕ್ಟರಿಗೆ ಕೊಟ್ಟನು.

ರಂಗರಾಯನು “ ಸುಬ್ಬರಾವ್! ಈ ಹುಡುಗಿ ಹೇಗಿದ್ದಾಳೆ ಹೇಳು. ಇವಳು ಶ್ಯಾಮಲೆಗಿಂತಲೂ ಬುದ್ಧಿವಂತೆ, ಅನುಸರಣೆಯೂ ಹೆಚ್ಚು! ” ಎಂದ.

“ ಇವಳನ್ನು ಸಂಪೂರ್ಣವಾಗಿ ಪರಿಗ್ರಹಿಸಿದ್ದಿ ಏನು ? ”

“ ಇಲ್ಲವಯ್ಯಾ! ಇಲ್ಲ! ದೇವರಾಣೆಗೂ ಇಲ್ಲ. ಇವಳೊಂದಿಗೆ ಸ್ನೇಹ ಮಾಡುತ್ತಿದ್ದೇನೆ. ಪರೀಕ್ಷೆ ಮಾಡುತ್ತಿದ್ದೇನೆ. ”

“ ಪರೀಕ್ಷೆ! ಒಳ್ಳೇ ಪರೀಕ್ಷೆ. ಈ ಹುಚ್ಚು ನಾನೆಲ್ಲಿಯೂ ಕಾಣೆ. ”

“ ಹಾಗಲ್ಲವಯ್ಯಾ! ನಾನು ಈ ಊರಿನಲ್ಲಿ ಗೌರವಸ್ಥನಾಗಿದ್ದೇನೆ. ಈ ಸಹವಾಸ ಮಾಡಿ ಮಾನ ಕಳೆದುಕೊಳ್ಳಲೇ ? ”

“ ರಂಗರಾವ್, ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿಯುವಂತೆ ಮಾತನಾಡುತ್ತಿ. ಇದೆಲ್ಲಾ ಠಕ್ಕು. ನಿನಗೆ ಸ್ತ್ರೀ ವ್ಯಾಮೋಹವು ಅತಿಯಾಗಿದೆ. ಇಲ್ಲದಿದ್ದರೆ ಆ ಶ್ಯಾಮಲೆಗೇಕೆ ಇಷ್ಟು ಅಳುತ್ತಿದ್ದೆ. ಹೋದರೆ ಹೋದಳು ಎಂದು ಇರುತ್ತಿದ್ದೆ. ”

“ ನಿನಗೂ ನನಗೂ ಈ ಮಾತಿನಲ್ಲಿ ಸರಿಬೀಳುವುದೇ ಇಲ್ಲ. ನಾನು ಶ್ಯಾಮಲೆಗಾಗಿ ಅಳುತ್ತಿಲ್ಲ. ಅವಳಿಂದ ನನಗಾಗಿರುವ ಅವಮಾನಕ್ಕಾಗಿ ಪರಿತಪಿಸುತ್ತಿದ್ದೇನೆ. ಆದರೇನು ಹಾಳು ಪ್ರಪಂಚ ನನ್ನನ್ನೇ ಜರಿಯುತ್ತದೆ. ಶ್ಯಾಮಲೆಯು ಅಂಥಾ ಧರ್ಮಭ್ರಷ್ಟೆ! ಗಂಡುಬೀರಿ! ಈ ಸಮಾಜದಲ್ಲಿ ಅವಳಿಗೆಷ್ಟು ಮರ್ಯಾದೆ! ಅವಳ ಶಿಶುವಿಹಾರ ಹಾಳಾಗಿ ಹೋಗಬೇಕು. ಅವಳ ವನಿತಾಶ್ರಮ ಮಣ್ಣು ಪಾಲಾಗಬೇಕು. ನೋಡು! ನಾನು ಎಂಥಾ ಪ್ರತಿಕ್ರಿಯೆ ಮಾಡುತ್ತೇನೆ. ”

“ ನೀನು ಏನಾದರೂ ಮಾಡಯ್ಯಾ! ಆ ಮಾತು ನನಗೇಕೆ ನಿನ್ನ ಸುಖ

ಸಂತೋಷಗಳನ್ನು ನೀನು ನೋಡಿಕೋ ಎಂದು ಹೇಳುತ್ತೇನೆ. ಈ ರಮಾ ದೇವಿಯನ್ನು ಮದುವೆಯಾಗಲು ಏರ್ಪಾಡು ಮಾಡುತ್ತಿದ್ದೀಯೇನು ? "

ರಂಗರಾಯನು ನಕ್ಕು " ಮದುವೆ! ಎಲ್ಲಿಯ ಮದುವೆ! ನಿನಗೇನೂ ತಿಳಿಯದು. ಅವಳು ವಿಧವೆ. ಈ ಊರಿನಲ್ಲಿ ಈಗ ಮದುವೆ ಮಾಡಿಕೊಂಡು ನನಗಾಗಿರುವ ಅವಮಾನವೇ ಸಾಕು. ಇನ್ನು ವಿಧವೆಯನ್ನು ಮದುವೆಯಾದರೆ ಆಯಿತು. ನಾನು ಈ ಊರಿನಲ್ಲಿ ಇರುವಂತೆಯೇ ಇಲ್ಲ " ಎಂದನು.

" ನಾನು ಈ ರಮಾದೇವಿಯನ್ನು ಮದುವೆಯಾಗೆಂದು ನಿನಗೆ ಹೇಳಿದನೇ ? ನೀನು ಕಾಮುಕ-ಹೆಣ್ಣಿಗೆ ಮರುಳಾಗುವ ಮಹಾನುಭಾವ. ಈ ಹೆಣ್ಣಿನ ಮೋಹದಲ್ಲಿ ಸಿಲುಕಿ ಇವಳನ್ನು ಮದುವೆಯಾಗಿ ಕಟ್ಟಿಹಾಕಬೇಕೆಂದು ಬಯಸುತ್ತೀಯಾ, ಎಂದು ಕೇಳಿದೆ. ಮದುವೆಯಲ್ಲದಿದ್ದರೆ ಮತ್ತೇನು. "

" ಏನೂ ಅಲ್ಲ. ಹುಡುಗಿಯು ಚಾಲಕ್ಕಾಗಿದ್ದಾಳೆ. ಸಾಚಾ ಸ್ವಭಾವದವಳಂತೆ ಕಾಣುತ್ತದೆ, ಎಂದು ಹೇಳಿದೆ ಅಷ್ಟೆ. ಇನ್ನೊಂದು ಸ್ವಲ್ಪ ಕುಡಿಯೋಣ. ಬಗ್ಗಿಸು ಇದೊಂದರಲ್ಲಿ ನನಗೂ ನಿನಗೂ ಪೂರ್ಣ ಹೊಂದಿಕೆಯಾಗುತ್ತದೆ. "

ಡಾಕ್ಟರು ಮತ್ತೊಮ್ಮೆ ಎರಡು ಲೋಟಗಳಿಗೂ ವಿಸ್ಕಿಯನ್ನು ಬಗ್ಗಿಸಿದರು. ಇಬ್ಬರೂ ಮತ್ತೊಮ್ಮೆ ಪಾನ ಮಾಡಿದರು.

" ಹೇಳು ಡಾಕ್ಟರ್ ! ನನ್ನ ವ್ಯಾಧಿಗೆ ಏನು ಚಿಕಿತ್ಸೆ ? ನಾನೇನು ಮಾಡಬೇಕು. "

" ಏನೂ ಮಾಡಬೇಡ ! ಔಷಧಿ ಕೊಡೆಂಬರೆ ಬೇಕಾದಷ್ಟು ಕೊಡುತ್ತೇನೆ. ಇಂಜಕ್ಷನ್ ಕೊಡಬೇಕೆಂದರೆ ಮೈಯೆಲ್ಲಾ ಚುಚ್ಚುತ್ತೇನೆ. ಅದರಿಂದೆಲ್ಲಾ ಏನೂ ಫಲವಿಲ್ಲ. ನೀನು ಕೆಲವು ಕಾಲ ಈ ಊರನ್ನು ಬಿಟ್ಟುಹೋಗು. ಎಲ್ಲಿಯಾದರೂ ದೇಶಸಂಚಾರ ಮಾಡಿಕೊಂಡು ಬಾ! ಮನಸ್ಸಿಗೆ ಹೇಗೆ ತೋರುತ್ತೋ ಹಾಗೆ ಮಾಡು. ಮನಸ್ಸಿನಲ್ಲಿರುವುದನ್ನು ಕಾರ್ಯತಃ ಮಾಡಲು ಅಂಜುವವರೇ ನಿನ್ನ ಹಾಗೆ ಆಗುವವರು. "

" ಅದು ಸರಿಯಾಗಿದೆ. ನಾನು ಊರು ಬಿಟ್ಟು ಹೊರಡಲು ಸಿದ್ಧ.

ನನಗೊಬ್ಬರು ಜೊತೆಗಿರಬೇಕು. ನೀನೂ ಬಂದುಬಿಡು. ಒಂದು ವರ್ಷ ಎಲ್ಲಿಯಾದರೂ ಹೋಗಿಬಿಡೋಣ. ಈ ಊರಿನ ವಾತಾವರಣವೇ ಬೇಸರವಾಗಿದೆ. "

ಡಾಕ್ಟರು ನಕ್ಕರು. "ಸರಿಯಾಗಿ ಹೇಳಿದೆ. ಅದೃಷ್ಟವಿತ್ತು ಚೆನ್ನಾಗಿ ಬ್ಲಾಕ್‌ಮಾರ್ಕೆಟ್ ಮಾಡಿ ಬೇಕಾದಷ್ಟು ಹಣ ಸಂಪಾದಿಸಿದ್ದೀಯೆ. ನೀನು ಎಲ್ಲಿಗೆ ಹೋದರೂ ರಾಜನಾಗಿರಬಹುದು. ನಾನು ದಿನದಿನವೂ ನನ್ನ ಉದ್ಯೋಗದಿಂದ ಜೀವನ ಮಾಡಬೇಕು. ನಾಲ್ಕು ಜನರಿಗೆ ಉಪಕಾರಿಯಾಗಿ ಬದುಕಬೇಕು. "

"ನೋಡಿದೆಯಾ? ನಾನು ಹೇಳುವುದೊಂದೂ ನೀನೊಪ್ಪುವುದಿಲ್ಲ. ಇರಲಿ! ಹೇಗಾಗುತ್ತೋ ಹಾಗೆ ಆಗಲಿ."

ಮತ್ತೊಮ್ಮೆ ಪಾನ ಮಾಡಿದರು.

ಡಾಕ್ಟರು "ಸುಖವಾಗಿ ಮಲಗಿಕೋ! ನಾಳೆ ನೋಡೋಣ" ಎಂದು ಹೇಳಿ ಮಹಡಿಯಿಂದ ಕೆಳಗಿಳಿದರು. ಅಲ್ಲಿ ರಮಾದೇವಿಯು ನಿಂತಿದ್ದಳು.

"ರಮಾದೇವಿ! ಪರವಾಯಿಲ್ಲ. ನೀನು ಒಳ್ಳೆಯ ಸೆಕ್ರಿಟರಿ" ಎಂದು ನಗುತ್ತಾ ಡಾಕ್ಟರ್ ಹೊರಟುಹೋದರು.

ರಂಗರಾಯನು ಹಾಗೆಯೇ ಅನೇಕ ಯೋಚನೆಗಳನ್ನು ಮಾಡುತ್ತಾ ಮಲಗಿದನು. ರಾತ್ರಿಯು ಕಳೆದುಹೋಯಿತು.

೨೬

ಮಾರನೆಯ ದಿನ ಬೆಳಗ್ಗೆ ರಂಗರಾಯನು ಏಳುವ ಹೊತ್ತಿಗೆ ತುಂಬ ಉತ್ಸಾಹದಿಂದಿದ್ದನು. ಮೊದಲು ಬೆಡ್‌ಕಾಫಿಯನ್ನು ತರಿಸಿ ಕುಡಿದನು. ಹಿಂದಿನ ರಾತ್ರಿ ತನ್ನ ಸ್ನೇಹಿತನೊಡನೆ ಮಾತನಾಡಿದುದೆಲ್ಲಾ ಆಗ ನೆನಪಿಗೆ ಬಂದುವು. ಎರಡು ಮಾತುಗಳು ಗಡಿಯಾರದ ಎರಡು ಮುಳ್ಳುಗಳಂತೆ ಅವನ ಮನಸ್ಸಿನಲ್ಲಿ ಮಿಡುಕುತ್ತಿದ್ದುವು. ಮದುವೆ! ರಮಾದೇವಿಯ ಮದುವೆ! ಏಕಾಗಬಾರದು? ದೇಶಸಂಚಾರ! ನಾನೇಕೆ ಹೊರಡಬಾರದು? ಈ ಎರಡನ್ನೂ ಆಲೋಚಿಸ ತೊಡಗಿದನು. ಹೌದು! ಡಾಕ್ಟರ್ ಹೇಳಿದ್ದು ನಿಜ. ನನಗೆ ಮನೋವ್ಯಾಧಿಯೇ ಸರಿ. ಕೆಲವು ದಿನಗಳ ಮಟ್ಟಿಗಾದರೂ ಊರು ಬಿಟ್ಟು ಹೊರಟು ಹೋಗಲೇ ಬೇಕು, ಎಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡನು.

ಬೇಗ ಬೇಗ ಮೆಟ್ಟಲುಗಳನ್ನಿಳಿದು, ಸ್ನಾನಗೃಹಕ್ಕೆ ಹೋಗಿ ಸ್ನಾನ ಮಾಡಿದನು. ತನ್ನ ಕೋಣೆಗೆ ಹೋಗಿ, ಮಡಿ ಮಾಡಿದ ಬಟ್ಟೆಗಳನ್ನು ಧರಿಸಿ ಕೊಂಡನು. ಹಜಾರಕ್ಕೆ ಬಂದು ನೋಡಿದಾಗ, ರಮಾದೇವಿಯ ಕುರ್ಚಿ ಖಾಲಿ ಯಾಗಿಯೇ ಇತ್ತು. "ಇನ್ನೂ ಇವಳೇಕೆ ಬರಲಿಲ್ಲ" ಎಂದುಕೊಂಡನು. ಗಡಿಯಾರದ ಕಡೆಗೆ ನೋಡಿದನು. ಒಂಭತ್ತು ಗಂಟೆಗೆ ಒಂದೆರಡು ನಿಮಿಷ ಇತ್ತು.

ಒಂಭತ್ತಕ್ಕೆ ಸರಿಯಾಗಿ ರಮಾದೇವಿಯು ಮೆಟ್ಟಲುಗಳನ್ನು ಹತ್ತಿ ಬಂದು ರಂಗರಾಯನಿಗೆ ವಂದಿಸಿದಳು.

"ಇದೇನು ರಮಾ! ಸರಿಯಾಗಿ ಬಂದುಬಿಟ್ಟೆದ್ದೀ" ಎಂದು ರಂಗ ರಾಯನು ಕೇಳಿದನು.

" ನಿತ್ಯವೂ ಹಾಗೆಯೇ! ನೀವು ಯಾವ ಕಾಲಕ್ಕೆ ಬರಬೇಕೆಂದು ಹೇಳಿದ್ದೀರೋ ನಾನು ಆ ಕಾಲಕ್ಕೆ ಸರಿಯಾಗಿ ಬರುತ್ತಿದ್ದೇನೆ. "

ರಂಗರಾಯನು ಒಂದು ಕ್ಷಣ ಸುಮ್ಮನಿದ್ದು ಹೇಳಿದನು. " ರಮಾ, ನಾನು ಒಂದೆರಡು ತಿಂಗಳು ಪರಸ್ಥಳ ಹೋಗಿ ಬರಬೇಕಾಗಿದೆ. ನೀನೂ ಬರುವೆಯಾ ? "

" ನೀವು ಬರಬೇಕೆಂದರೆ ಬರುತ್ತೇನೆ. ನನಗೇನು ಅಡ್ಡಿ ಇದೆ ? "

" ಅಲ್ಲಾ ಹೆಣ್ಣು ಹುಡುಗಿ ಏಕಾಕಿನಿಯಾಗಿ ಪರಸ್ಥಳಕ್ಕೆ ಬರಲು ಧೈರ್ಯ ವಿದೆಯೋ ಎಂದು ಕೇಳಿದೆ. "

ಸಣ್ಣ ನಗುವನ್ನು ನಕ್ಕು " ಇದೇನು ಏಕಾಕಿನಿ ಎಂದರೇನು ! ನೀವು ಜೊತೆಯಲ್ಲಿದ್ದರೆ ನನಗೇನು ಭಯ ? ಅಷ್ಟು ಮಾತ್ರವಲ್ಲ. ನನ್ನೊಬ್ಬಳನ್ನೇ ಕಳಿಸಿದರೂ ಸರಿ. ನೀವು ಬೊಂಬಾಯಿಗೆ ಕಳುಹಿಸಿರಿ, ಡೆಲ್ಲಿಗೆ ಬೇಕಾದರೂ ಕಳುಹಿಸಿರಿ. ನಾನೊಬ್ಬಳೇ ಹೋಗಿ ನಿಮ್ಮ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿಕೊಂಡು ಬರುತ್ತೇನೆ. ಈ ಕಾಲದಲ್ಲಿ ನಮ್ಮಂಥವರಿಗೆ ಭಯ ವೇನಿದೆ ! "

" ಸರಿ ! ನೀನು ಪ್ರಯಾಣಕ್ಕೆ ಸಿದ್ಧಳಾಗಿ ಇಲ್ಲಿಗೆ ಬಂದುಬಿಡು. ಈ ದಿನ ಮಧ್ಯಾಹ್ನವೇ ರೈಲಿನಲ್ಲಿ ಹೊರಡೋಣ ! ನಾಳೆ ಬೆಳಗ್ಗೆ ಮದರಾಸಿನಲ್ಲಿರ ಬೇಕು. "

ರಮಾದೇವಿಯು ಸಮ್ಮತಿಯನ್ನು ಸೂಚಿಸಿದಳು. ಅಲ್ಲಿಂದ ಹೊರಡಲು ಹೆಜ್ಜೆ ಹಾಕಿದಳು.

ರಂಗರಾಯನು " ರಮಾ ! ರಮಾ ! ಇಲ್ಲಿ ಬಾ ! ನಿನಗೇನಾದರೂ ಖರ್ಚಿಗೆ ಹಣ ಬೇಕೋ ? " ಎಂದು ಕೇಳಿದನು.

ರಮಾ ಹಿಂತಿರುಗಿ ಬಂದಳು. " ನನಗೇಕೆ ಹಣ. ಏನೂ ಬೇಡ....ಶಿವ ರಾಮಪೇಟೆಯ ಲಾಯದಲ್ಲಿ ಒಂದು ಕೋಣೆ ಮಾಡಿಕೊಂಡಿದ್ದೇನೆ. ಆ ಕೋಣೆಗೆ ಬೀಗ ಹಾಕಿ ಬೀಗದ ಕೈ ಆ ಕೋಣೆಯ ಯಜಮಾನಿ ವೆಂಕಮ್ಮ ನವರ ಕೈಗೆ ಕೊಟ್ಟು ಬಂದರಾಯಿತು " ಎಂದು ಹೇಳಿ ಹೊರಟುಹೋದಳು.

ರಂಗರಾಯನು ಹೊರಗೆ ಹೋಗಿ " ಡ್ರೈವರ್ " ಎಂದು ಕರೆದನು.

ಡ್ರೈವರ್ ಬಂದನು. ಮೋಟಾರನ್ನು ತರುವಂತೆ ಹೇಳಿದಾಗ ಡ್ರೈವರಿಗೆ ಪರಮಾಶ್ಚರ್ಯವಾಯಿತು. ರಂಗರಾಯನು ಇಷ್ಟು ಲವಲವಿಕೆಯಿಂದ ಇದ್ದುದನ್ನು ಆತ ನೋಡಿ ಎಷ್ಟೋ ದಿನಗಳಾಗಿದ್ದುವು.

ಕಾರು ಮನೆಯ ಮುಂದೆ ಬಂದು ನಿಂತಿತು.

ರಂಗರಾಯನು ಕಾರಿನಲ್ಲಿ ಕುಳಿತು " ಆಫೀಸಿಗೆ ಬಿಡು " ಎಂದು ಹೇಳಿದನು. ಕಾರು ಆಫೀಸಿನ ಮುಂದೆ ಹೋಗಿ ನಿಂತಿತು.

ರಂಗರಾಯನು ಒಳಗೆ ಹೋಗಿ ತನ್ನ ಕೋಣೆಯಲ್ಲಿ ಕುಳಿತು ಮ್ಯಾನೇಜರ್ ಶಂಕರಯ್ಯನಿಗೆ ಹೇಳಿ ಕಳುಹಿಸಿದನು. ಆಫೀಸಿನಲ್ಲಿದ್ದವರಿಗೆಲ್ಲಾ ಆಶ್ಚರ್ಯವಾಯಿತು. ರಂಗರಾಯನು ಹೊಸ ಮನುಷ್ಯನಂತೆ ಕಾಣುತ್ತಿದ್ದಾನೆ. ಮುಖದಲ್ಲಿ ಎಷ್ಟೋ ತೇಜಸ್ಸಿದೆ. ತಮ್ಮ ಯಜಮಾನನನ್ನು ಹೀಗೆ ನೋಡಿ ಎಷ್ಟೋ ವರ್ಷಗಳಾಗಿ ಹೋಗಿದ್ದುವು !

ಶಂಕರಯ್ಯನು ಆಫೀಸಿನೊಳಗೆ ಬಂದು ನಿಂತನು.

ರಂಗರಾಯನು " ಶಂಕರಯ್ಯಾ ! ಕುಳಿತುಕೋ. ನನಗೆ ಮದರಾಸಿನಿಂದ ಜರೂರಾಗಿ ಒಂದು ಕಾಗದ ಬಂದಿದೆ. ಇಂದು ಮಧ್ಯಾಹ್ನದ ರೈಲಿನಲ್ಲಿ ಹೊರಡುತ್ತೇನೆ. ಅಲ್ಲಿಂದ ಎಲ್ಲಿಗೆ ಹೋಗಬೇಕೋ ತಿಳಿಯದು. ಹಿಂದಕ್ಕೆ ಬರಲು ಎರಡು ಮೂರು ತಿಂಗಳುಗಳಾಗಬಹುದು. ಎಲ್ಲವನ್ನು ನೀನೇ ನೋಡಿಕೊಳ್ಳಬೇಕು. ನಮ್ಮ ಮನೆಯನ್ನೂ ನೀನೇ ನೋಡಿಕೊ. ಆಳುಗಳು ಪರಿಚಾರಕರು ಎಲ್ಲರೂ ಹಾಗೆಯೇ ಇರಲಿ. ನಾನು ಬರುವ ವರೆಗೆ ನಮ್ಮ ಮನೆಗೆ ನೀನೇ ಯಜಮಾನ. ನಾನು ಬರುತ್ತಲೇ ಹೊಸ ವ್ಯಾಪಾರವನ್ನು ಆರಂಭಿಸೋಣ " ಎಂದು ಹೇಳಿದನು.

ಶಂಕರಯ್ಯನಿಗೆ ಆ ಮಾತು ಕೇಳಿ ಆಶ್ಚರ್ಯವಾಯಿತು. ಆದರೂ ಯಜಮಾನರ ಅಪ್ಪಣೆ " ಆಗಲಿ " ಎಂದು ಒಪ್ಪಿಕೊಂಡನು.

ರಂಗರಾಯನು ಹೊರಗೆ ಬಂದು ಪ್ರಸನ್ನಮುಖದಿಂದ ಆಫೀಸಿನ ನೌಕರರೆಲ್ಲರಿಗೂ ವಂದಿಸಿ ಹೊರಟನು.

ಅಲ್ಲಿಂದ ಡಾಕ್ಟರ ಆಸ್ಪತ್ರೆಗೆ ಭೇಟಿ. ಡಾಕ್ಟರ ಛೇಂಬರಿನೊಳಗೆ ಹೋದಾಗ ಡಾಕ್ಟರು ಯಾರೋ ರೋಗಿಯನ್ನು ಪರೀಕ್ಷಿಸುತ್ತಿದ್ದರು. ತಲೆ ಯೆತ್ತಿ ರಂಗರಾಯನನ್ನು ನೋಡಿದರು. ಅವರಿಗೂ ಆಶ್ಚರ್ಯವಾಯಿತು. "ಏನು ರಂಗರಾವ್! ಎಷ್ಟೊಂದು ಆರೋಗ್ಯವಾಗಿ ಕಾಣುತ್ತೀ, ಹರ್ಷಚಿತ್ತ ನಾಗಿದ್ದೀ. ಏನು ಸಮಾಚಾರ?" ಎಂದನು.

"ಏನೂ ಇಲ್ಲ ಡಾಕ್ಟರ್! ನಿನ್ನ ಸಲಹೆಯಂತೆ ಇವತ್ತೇ ಹೊರಟಿದ್ದೇನೆ. ನಿನಗೆ ಹೇಳಿ ಹೋಗೋಣವೆಂದು ಬಂದೆ."

"ಒಳ್ಳೆಯದಯ್ಯಾ! ಹೊರಡು. ಜೊತೆಗೆ ಯಾರು? ನಿನ್ನ ಸೆಕ್ರೆಟರಿಯೋ?"

ರಂಗರಾಯನು ನಗುತ್ತಾ ಹೇಳಿದ: "ಹೌದು! ಮತ್ತಾರಿದ್ದಾರೆ?"

ಡಾಕ್ಟರ ಅಪ್ಪಣೆ ಪಡೆದು ರಂಗರಾಯನು ಮನೆಗೆ ಹೋದನು. ಮನೆಯನ್ನು ತಲಪುವ ಹೊತ್ತಿಗೆ ಮಧ್ಯಾಹ್ನ ಒಂದು ಗಂಟೆಯಾಗಿತ್ತು. ರಮಾದೇವಿಯು ಊರಿಗೆ ಹೊರಡಲು ಸಿದ್ಧವಾಗಿ ಬಂದು ಕಾದಿದ್ದಳು.

ರಂಗರಾಯನು "ರಮಾದೇವಿ! ನಿನಗೆ ಭೋಜನವಾಗಿದೆಯೇ?" ಎಂದು ಕೇಳಿದನು.

"ಹೌದು! ಊಟ ಮಾಡಿಕೊಂಡು ಬಂದಿದ್ದೇನೆ."

"ಹಾಗೋ ಸರಿ" ಎಂದು ಹೇಳಿ ರಂಗರಾಯನು ಬೇಗ ಭೋಜನವನ್ನು ಮುಗಿಸಿದನು. ಕೈತೊಳೆದುಕೊಂಡು ಬಂದು ರಮಾದೇವಿಯನ್ನು ದಿಟ್ಟಿಸಿ "ರಮಾ, ನಿನ್ನ ಸಾಮಾನುಗಳೆಲ್ಲಿ?" ಎಂದು ಕೇಳಿದನು.

ರಮಾ ತನ್ನ ಸಾಮಾನಿನ ಕಡೆ ತಿರುಗಿ "ಏನೂ ಇಲ್ಲ, ಒಂದೇ ಒಂದು ಪೆಟ್ಟಿಗೆ. ಒಂದು ಸಣ್ಣ ಹಾಸಿಗೆ. ಅಷ್ಟೆ" ಎಂದಳು.

ರಂಗರಾಯನು ಮಹಡಿಯ ಮೇಲೆ ಹೋದನು. ಎಲ್ಲ ಪೆಟ್ಟಿಗೆಗಳನ್ನೂ ನೋಡಿ ಸರಿಯಾಗಿಟ್ಟನು. ಎರಡು ಮೂರು ಪೆಟ್ಟಿಗೆಗಳಲ್ಲಿ ತನಗೆ ಬೇಕಾದ ಬಟ್ಟೆ ಬರೆಗಳನ್ನು ತೆಗೆದಿಟ್ಟನು. ರಮಾದೇವಿಯು ಆ ಕೆಲಸದಲ್ಲಿ ಸಹಾಯ ಮಾಡಿದಳು. ಎಲ್ಲಕ್ಕೂ ಬೀಗ ಹಾಕಿ ಬೀಗದ ಕೈ ಗೊಂಚಲನ್ನು ರಮಾದೇವಿಯ ಕೈಗೇ

ಕೊಟ್ಟನು ! ಮನೆಯ ಜವಾನನ್ನು ಕರೆದು ಒಂದು ಜಟಕಾದಲ್ಲಿ ಆ ಸಾಮಾನು ಗಳನ್ನೆಲ್ಲಾ ರೈಲ್ವೆ ಸ್ಟೇಷನ್ನಿಗೆ ತೆಗೆದುಕೊಂಡು ಹೋಗುವಂತೆ ಅಪ್ಪಣೆ ಮಾಡಿದನು.

ಆ ಸಮಯಕ್ಕೆ ಮ್ಯಾನೇಜರ್ ಶಂಕರಯ್ಯನು ಬಂದನು. ಅವನಿಗೆ ಪೆಟ್ಟಿಗೆಗಳನ್ನೆಲ್ಲಾ ತೋರಿಸಿ " ಎಲ್ಲಕ್ಕೂ ಬೀಗ ಹಾಕಿದೆ. ಕೋಣೆಯ ಬೀಗದ ಕೈಗಳನ್ನು ನೀನೇ ಇಟ್ಟುಕೋ, ಮನೆಯನ್ನು ಸರಿಯಾಗಿ ನೋಡಿಕೋ" ಎಂದು ಹೇಳಿ ಕೆಳಗಿಳಿದು ಬಂದರು.

ಕಾರಿನಲ್ಲಿ ಕುಳಿತು ರೈಲ್ವೆ ಸ್ಟೇಷನ್ನಿಗೆ ಹೊರಟರು. ಮುಂದಿನ ಸೀಟಿನಲ್ಲಿ ರಮಾದೇವಿಯು ಕುಳಿತಿದ್ದಳು. ಶಂಕರಯ್ಯನು ಅವನ ಪಕ್ಕದಲ್ಲಿ ಕುಳಿತಿದ್ದನು. ಸ್ಟೇಷನ್ನಿನಲ್ಲಿ ಶಂಕರಯ್ಯನು ಮೊದಲೇ ಎಲ್ಲವನ್ನೂ ಸಿದ್ಧಮಾಡಿದ್ದನು. ರಂಗ ರಾಯನು ಗಾಡಿಯಲ್ಲಿ ಹತ್ತಿ ಕುಳಿತುಕೊಂಡನು. ರಮಾದೇವಿಯೂ ಅದೇ ಗಾಡಿ ಯಲ್ಲಿ ಕುಳಿತಳು. ಮೂರು ಗಂಟೆಗೆ ಸರಿಯಾಗಿ ರೈಲು ಗಾಡಿಯು ಹೊರಟಿತು. ಅವರಿಬ್ಬರೂ ಮೊದಲನೆಯ ತರಗತಿಯ ಕಂಪಾರ್ಟ್‌ಮೆಂಟಿನಲ್ಲಿ ಕುಳಿತಿದ್ದರು.

ರಂಗರಾಯನು " ರಮಾ ! ನೀನು ನನ್ನ ಜೊತೆಗೆ ಬಂದಿದ್ದು ಎಷ್ಟೋ ಒಳ್ಳೆಯದಾಯಿತು " ಎಂದು ಹೇಳಿದನು.

ರಮಾ ನಗುತ್ತಾ " ಎಲ್ಲವೂ ನಿಮ್ಮ ಇಷ್ಟದಂತೆ. ನಾನೇನು ಹೇಳ ಬೇಕು " ಎಂದಳು.

ಸ್ವಲ್ಪ ಹೊತ್ತು ಅವರಿಬ್ಬರೂ ಮೌನವಾಗಿ ಕುಳಿತಿದ್ದರು. ರಂಗರಾಯ ನಿಗೆ ಬಹಳ ಹೊತ್ತು, ಹಾಗಿರಲಾಗಲಿಲ್ಲ. ರಮಾದೇವಿಯನ್ನು ಮಾತನಾಡಿಸ ತೊಡಗಿದನು.

" ರಮಾದೇವಿ ! ನೀನು ಮೈಸೂರಿಗೆ ಬಂದು ಎಷ್ಟು ವರ್ಷ ಗಳಾದುವು ? "

" ಸುಮಾರು ಐದಾರು ವರ್ಷಗಳಾಗಿರಬಹುದು. "

" ಯಾರ ಮನೆಯಲ್ಲಿದ್ದೆ ? "

" ಅದು ದೊಡ್ಡ ಕಥೆ. ಅದನ್ನೇಕೆ ಕೇಳುತ್ತೀರಿ ? ನನ್ನ ತಂದೆಯ

ಊರು ಅರಕಲಗೂಡು. ತಂದೆ ತಾಯಿಗಳು ಚಿಕ್ಕಂದಿನಲ್ಲಿಯೇ ಸತ್ತುಹೋದರು. ಚಿಕ್ಕಪ್ಪನು ಸಾಕಿದ. ಅವನು ಕೊಣನೂರಿನಲ್ಲಿ ಒಬ್ಬರಿಗೆ ಕೊಟ್ಟು ಮದುವೆ ಮಾಡಿದ. ಅವರು ಸ್ವಲ್ಪ ಅನುಕೂಲಸ್ಥರೆಂದೇ ನೆನಪಿದೆ. ಮದುವೆಯಾದಾಗ ನನಗೆ ಹನ್ನೆರಡು ವರ್ಷ. ಮದುವೆಯಾಗಿ ಒಂದು ವರ್ಷ ಕೂಡಾ ಕಳೆದಿರಲಿಲ್ಲ. ನನ್ನ ಗಂಡನು ಪ್ಲೇಗಿನಿಂದ ಸತ್ತನೆಂದು ನಮ್ಮ ಮನೆಯವರೆಲ್ಲಾ ಗೋಳಾಡಿದರು. ನನಗೂ ಭಯವಾಯಿತು. ನಮ್ಮ ಚಿಕ್ಕಪ್ಪನು ಬಹಳ ಪ್ರೀತಿಯಿಂದ ನೋಡುತ್ತಿದ್ದ. ಆಗ ನನಗೆ ಹದಿನಾಲ್ಕು ವರ್ಷಗಳು ತುಂಬಿತ್ತು. ನಮ್ಮ ಚಿಕ್ಕಪ್ಪನೂ ಎರಡು ಮೂರುತಿಂಗಳುಗಳು ಖಾಯಿಲೆಯಲ್ಲಿ ನರಳಿ ಕಾಲವಾದ. ಅವರು ಬಹಳ ಬಡವರು. ನಮ್ಮ ಚಿಕ್ಕಮ್ಮ ನೀನು ಓದಬೇಕು. ವಿದ್ಯೆ ಕಲಿತು ಉಪಾಧ್ಯಾಯಿನಿಯಾಗಿ ಬದುಕಬೇಕು, ಎಂದು ಹೇಳಿ ನನ್ನನ್ನು ಯಾರ ಜೊತೆಯಲ್ಲಿಯೋ ಮೈಸೂರಿನ ವಿಧವಾಶ್ರಮಕ್ಕೆ ಕಳುಹಿಸಿದಳು. ಅಷ್ಟು ಹೊತ್ತಿಗೆ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ನನಗೆ ತೇರ್ಗಡೆಯಾಗಿತ್ತು. ಹೈಸ್ಕೂಲಿಗೆ ಸೇರಿದೆ. ಅಲ್ಲಿ ನನಗೇನೂ ಕಷ್ಟವಿರಲಿಲ್ಲ. ಒಂದು ದಿನ ಮುದುಕಿಯೊಬ್ಬಳು ಬಂದು 'ನಾನು ನಿನ್ನ ಸೋದರತ್ತೆ, ನೀನಿಲ್ಲಿರುವುದು ನನಗೆ ಸರಿಯಾಗಿಲ್ಲ, ನನಗಾರೂ ದಿಕ್ಕಿಲ್ಲ, ನನ್ನ ಜೊತೆಯಲ್ಲಿ ಬಂದಿರು' ಎಂದು ಬಲವಂತ ಮಾಡಿದಳು. ಎಲ್ಲಿಯೋ ಸಣ್ಣ ವಯಸ್ಸಿನ ನೆನಪು, ನಿಜ! ಅವಳು ನನ್ನ ಸೋದರತ್ತೆಯೇ ಹೌದು. ನಾನು ಅವಳ ಮನೆಗೆ ಹೋಗಿ ಸೇರಿದೆ. ಅವಳು ನನ್ನನ್ನು ಪ್ರೀತಿಯಿಂದಲೇ ನೋಡುತ್ತಿದ್ದಳು ಹಳೆಯ ಪದ್ಧತಿಯವಳಾದರೂ ನನ್ನ ಓದಿಗೆ ಪ್ರೋತ್ಸಾಹಿಸುತ್ತಿದ್ದಳು. ಅವಳಲ್ಲಿ ಕೊಂಚ ದುಡ್ಡಿತ್ತು. ಹರಕು ಮುರುಕಲು ಮನೆ. ರಮಾವಿಲಾಸ ಅಗ್ರಹಾರದಲ್ಲಿ ಒಂದು ಸಂದಿಯಲ್ಲಿದೆ. ಅಲ್ಲೇ ನಾಲ್ಕಾರು ವರ್ಷಗಳನ್ನು ಕಳೆದೆ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಹೋಗಿದ್ದೆ. ಕಾಲೇಜಿನಲ್ಲಿ ಓದುತ್ತಿರುವಾಗಲೇ ರಜಾಕಾಲದಲ್ಲಿ ಟೈಪ್‌ರೈಟಿಂಗ್, ಷಾರ್ಟ್‌ಹ್ಯಾಂಡ್ ಕಲಿತೆ. ನಮ್ಮ ಪರೀಕ್ಷೆಯ ಫಲಿತಾಂಶವಿನ್ನೂ ಹೊರಬಿದ್ದಿರಲಿಲ್ಲ. ನಮ್ಮ ಅತ್ತೆಗೆ ಎರಡೇ ದಿವಸ ಜ್ವರ ಬಂತು. ಸರಿ! ಅವಳೂ ಪರಲೋಕ ಯಾತ್ರೆ ಮಾಡಿಬಿಟ್ಟಳು. ಸಾಯುವಾಗ ನನ್ನ ಕೈಗೆ ಸ್ವಲ್ಪ ಚಿನ್ನವನ್ನೂ ಸ್ವಲ್ಪ

ಹಣವನ್ನೂ ಕೊಟ್ಟಿದ್ದಳು. ಅದನ್ನು ಬಚ್ಚಿಟ್ಟುಕೊಂಡಿದ್ದೆ. ಯಾರೋ ಬಂದು ಅವಳ ಸಂಸ್ಕಾರವನ್ನು ಮಾಡಿದರು. ಆ ಮನೆ ತಮ್ಮದೆಂದು ಹೇಳಿ ಆ ದಾಯಾದಿಗಳು ಆಕ್ರಮಿಸಿಕೊಂಡರು. ನನ್ನನ್ನು ಹೊರಗಟ್ಟಿದರು. ನಾನೆಲ್ಲಿ ಹೋಗಬೇಕು. ಪುನಃ ವಿಧವಾಶ್ರಮಕ್ಕೆ ಬಂದೆ. ಅಲ್ಲಿದ್ದು ಬಿ. ಎ ಪರೀಕ್ಷೆಗೆ ಓದಬೇಕೆಂದುಕೊಂಡೆ. ಒಂದೆರಡು ವಾರಗಳಲ್ಲಿ ಅದೆಲ್ಲಾ ಅಸಾಧ್ಯವೆಂದು ತೋರಿತು. ಕೆಲಸವನ್ನು ಹುಡುಕಿಕೊಂಡು ಹೊರಟೆ. ಎಷ್ಟೋ ಕಡೆ ಅಲೆದೆ. ಕೊನೆಗೆ ನಿಮ್ಮ ಆಫೀಸಿನಲ್ಲಿ ಕೆಲಸ ಸಿಕ್ಕಿತು. "

ರಂಗರಾಯನು ಎಲ್ಲವನ್ನೂ ಕೇಳಿದನು. "ಈ ನಮ್ಮ ಮ್ಯಾನೇಜರ್ ಶಂಕರಯ್ಯನನ್ನು ನೀನು ಮೊದಲೇ ಬಲ್ಲೆಯಾ ? " ಎಂದು ಕೇಳಿದನು.

" ಹೌದು ಬಲ್ಲೆ. ನಮ್ಮತ್ತೆಗೆ ಅವರು ದೂರದ ಬಂಧುಗಳಂತೆ. ಅವರೇ ನನ್ನನ್ನು ಈ ಕೆಲಸಕ್ಕೆ ಪ್ರೇರೇಪಿಸಿದರೆಂದು ಹೇಳಿದರೂ ಹೇಳಬಹುದು. "

" ಒಳ್ಳೆಯದಾಯಿತು. "

ಇಷ್ಟು ಕಥೆಯನ್ನು ವಿವರವಾಗಿ ಹೇಳುವ ಹೊತ್ತಿಗೆ ಎಷ್ಟೋ ಕಾಲವು ಕಳೆದುಹೋಗಿತ್ತು. ರಂಗರಾಯನು ಮಧ್ಯೆ ಮಧ್ಯೆ ಪ್ರಶ್ನೆಗಳನ್ನು ಹಾಕಿ ಎಷ್ಟೋ ವಿಷಯಗಳನ್ನು ತಿಳಿದುಕೊಂಡಿದ್ದನು. ರೈಲು ಗಾಡಿಯು ಬೆಂಗಳೂರು ತಲುಪಿತು.

ಆ ರಾತ್ರಿಯೇ ಮದರಾಸ್ ಗಾಡಿಯಲ್ಲಿ ಮುಂದಕ್ಕೆ ಪ್ರಯಾಣ ಬೆಳಸಿದರು. ಆ ಗಾಡಿಯು ಬೆಂಗಳೂರು ಬಿಟ್ಟು ಹೊರಡುತ್ತಲೇ ರಮಾದೇವಿಯು ಮೃದುನುಡಿಯಿಂದ " ನಿಮ್ಮ ಪ್ರಯಾಣವು ಬಹಳ ತರಾತುರಿಯಾಗಿದೆ " ಎಂದಳು.

" ಮತ್ತೇನೂ ವಿಶೇಷವಿಲ್ಲ. ನಾನು ಈ ಪರಿಚಯವುಳ್ಳ ಪ್ರದೇಶವನ್ನು ಬಹಳ ಬೇಗ ಬಿಟ್ಟು ದೂರ ದೂರ ಹೋಗಬೇಕೆಂದು ಮೊದಲೇ ಸಂಕಲ್ಪ ಮಾಡಿದ್ದೆ " ರಂಗರಾಯ ಹೇಳಿದನು.

ರಮಾದೇವಿಯು ತಲೆ ಅಲ್ಲಾಡಿಸಿದಳು. ರಂಗರಾಯನು ರಾತ್ರಿ ಬಹಳ ಹೊತ್ತು ರಮಾದೇವಿಯನ್ನು ಮಾತನಾಡಿಸುತ್ತಲೇ ಪ್ರಯಾಣ ಮಾಡಿದನು.

ಬೆಳಕು ಹರಿಯುವ ಹೊತ್ತಿಗೆ ಮದರಾಸು ಬಂತು.

ಮದರಾಸಿನಲ್ಲಿ "ಉಡ್‌ಲ್ಯಾಂಡ್" ಹೋಟಲಿನಲ್ಲಿ ಇಳಿದುಕೊಂಡರು. ಅಲ್ಲಿ ಎರಡು ಮೂರು ದಿನಗಳು ಮಾತ್ರ ಇದ್ದರು. ರಮಾದೇವಿಗೆ ತನ್ನ ಸ್ಥಾನವು ಚೆನ್ನಾಗಿ ಅರಿವಾಗಿತ್ತು. ಅವಳು ಸೆಕ್ರಿಟರಿ ಅಲ್ಲ; ರಾಯರ ಸ್ನೇಹಿತಳು, ಆಪ್ತಳು, ಸಹಚಾರಿಣಿ, ಪ್ರೀತಿಪಾತ್ರಳು. ಆದರೂ ನಟನೆಯಲ್ಲಿ ಸೆಕ್ರಿಟರಿಯಂತೆಯೇ ಇರುತ್ತಿದ್ದಳು.

ರಂಗರಾಯನಿಗೆ ಮದರಾಸಿನಲ್ಲಿ ಹೆಚ್ಚು ದಿನಗಳು ಇರುವುದು ಇಷ್ಟವಿರಲಿಲ್ಲ. ಏಕೆಂದರೆ—ಕುಡಿಯುವುದಕ್ಕೆ ಬ್ರಾಂದಿ-ವಿಸ್ಕಿ ಒಂದೂ ಸಿಕ್ಕುವುದಿಲ್ಲ. ಅದು ನಿಷೇಧ. ಆದರೂ ಎರಡು ಬಾಟಲ್ ವಿಸ್ಕಿ ಅವನ ಪೆಟ್ಟಿಗೆಯಲ್ಲಿತ್ತು. ಹಗಲೆಲ್ಲಾ ಮನಸ್ಸು ಗಟ್ಟಿಯಾಗಿಟ್ಟುಕೊಂಡಿದ್ದು ರಾತ್ರಿ ಕುಡಿಯುತ್ತಿದ್ದನು. ಆದರೂ ಮನಸ್ಸಿನಲ್ಲಿ ಭಯವಿದ್ದೇ ಇತ್ತು.

ಎರಡನೆಯ ದಿನ ಸಂಧ್ಯಾಕಾಲ ಟ್ಯಾಕ್ಸಿಯಲ್ಲಿ ಕುಳಿತು ಬೀಚಿಗೆ ಹೋಗಿದ್ದರು. ರಮಾದೇವಿಯು ಪಕ್ಕದಲ್ಲಿಯೇ ಕುಳಿತಿದ್ದಳು.

"ರಮಾ! ಈ ಮದರಾಸಿಗೆ ಯಾವಾಗಲಾದರೂ ಬಂದಿದ್ದೆಯೇನು?"

ರಮಾ ತಲೆ ಅಲ್ಲಾಡಿಸಿದಳು. "ನನ್ನ ಕಥೆಯನ್ನೆಲ್ಲಾ ಚಾಚು ತಪ್ಪದೇ ನಿಮಗೆ ಹೇಳಿದೆನಲ್ಲಾ! ನಾನು ಬೆಂಗಳೂರನ್ನು ಕೂಡ ನೋಡಿಲ್ಲ."

"ಈ ಮದರಾಸು ಬೀಚು ಬಹಳ ಚೆನ್ನಾಗಿದೆ. ನೋಡು ಇಲ್ಲೆಷ್ಟು ಕಾರುಗಳು ಬಂದಿವೆ. ಆ ಸ್ತ್ರೀ ಪುರುಷರು ಎಷ್ಟು ಖುಷಿಯಾಗಿದ್ದಾರೆ."

ರಮಾ ಹೂಂಗುಟ್ಟಿ ಸಮ್ಮತಿಯನ್ನು ಸೂಚಿಸಿದಳು. ಧೈರ್ಯ ಮಾಡಿ "ನೀವೇಕೆ ಯಾವಾಗಲೂ ಹರ್ಷಚಿತ್ತರಾಗಿಯೇ ಇರುವುದಿಲ್ಲ" ಎಂದಳು.

ರಂಗರಾಯನು ಉತ್ತರ ಹೇಳಲಿಲ್ಲ. ನಿಟ್ಟುಸುರು ಬಿಟ್ಟು ಕಾರಿನಿಂದ ಇಳಿದು ಸಮುದ್ರದ ಕಡೆ ಹೋದನು. ರಮಾದೇವಿಯೂ ರಾಯರ ಜೊತೆಯಲ್ಲೇ ಹೋದಳು.

ರಂಗರಾಯನು ಗಂಭೀರ ಸಮುದ್ರವನ್ನು ನೋಡುತ್ತ ಬಹು ಹೊತ್ತು ಮೌನವಾಗಿ ನಿಂತಿದ್ದನು.

ಬಹು ದೂರದಲ್ಲಿ ಒಂದು ಸಣ್ಣ ಜಹಜು ಹೋಗುತ್ತಿದ್ದಿತು. ಅಕ್ಕಪಕ್ಕ ದಲ್ಲಿದ್ದ ಜನರು "ಅಗೋ ಅಲ್ಲಿ ಹಡಗು ಹೋಗುತ್ತಿದೆ" ಎಂದು ಮಾತನಾಡಿ ಕೊಂಡರು.

ರಂಗರಾಯನು "ರಮಾ! ಅಲ್ಲಿ ದೂರದಲ್ಲಿ ಹಡಗು ಹೋಗುತ್ತಿದೆ ನೋಡು! ನಾವೂ ಈ ಸಮುದ್ರವನ್ನು ದಾಟಿ ಯಾವುದಾದರೂ ದೇಶಕ್ಕೆ ಹೊರಟು ಹೋಗಬಾರದೇಕೆ!" ಎಂದನು.

"ರಮಾದೇವಿ ಮಾತನಾಡಲಿಲ್ಲ. ಅವಳ ಮನಸ್ಸಿಗೆ ಸ್ವಲ್ಪ ಗಾಬರಿ ಯಾಯಿತು. 'ಮತ್ತೇನು ಇಲ್ಲ! ಈ ರಂಗರಾಯನು ಅತ್ಯಂತ ವಿಹ್ವಲನಾಗಿ ದಾನೆ' ಎಂದು ಅವಳ ಮನಸ್ಸಿಗೆ ಹೊಳೆಯಿತು.

ಇಬ್ಬರೂ ಒಂದು ಕಾರಿನಲ್ಲಿ ಕುಳಿತರು. ರಮಾದೇವಿಯೇ ಮಾತಿಗೆ ಆರಂಭ ಮಾಡಿದಳು.

"ರಾಯರೇ! ನೀವು ಇಷ್ಟು ದೊಡ್ಡ ಮನುಷ್ಯರು. ಇಷ್ಟೊಂದು ಭಾರೀ ವ್ಯಾಪಾರದ ಸಾಹುಕಾರರು. ನಿಮ್ಮ ಮನಸ್ಸಿಗೆ ಏಕೆ ಇಷ್ಟು ಬೇಸರ ವಾಗಿದೆ?"

"ರಮಾ! ನನ್ನ ಕಥೆ ಬಲು ದೊಡ್ಡದು. ನಿನಗೆ ಸ್ವಲ್ಪವೂ ತಿಳಿದಿಲ್ಲ ವೇನು? ನನಗೆ ಈ ಜನ, ಸಮಾಜ, ಈ ಕಾಂಗ್ರೆಸ್ ಸರ್ಕಾರ ಇದೆಲ್ಲಾ ಬೇಸರವಾಗಿದೆ. ಯಾವ ದೇಶಕ್ಕೆ ಹೋದರೂ ನನ್ನ ಬಿಜಿನೆಸ್ ನಡೆಯುತ್ತದೆ. ಈಗ ಶಂಕರಯ್ಯನಂಥ ಮ್ಯಾನೇಜರಿದ್ದರೆ ಏನು ಕಡಮೆ."

"ಹೌದು! ಅವರು ಬಲು ಗಟ್ಟಿಗರು. ದೊಡ್ಡ ಮನುಷ್ಯರು."

ಕಾರನ್ನು ಹೋಟಲಿನ ಕಡೆ ಬಿಡುವಂತೆ ಹೇಳಿದನು. ಕಾರು ಹೊರಟಿತು. ಆಗ ಆಗಲೇ ಕತ್ತಲಾಗಿತ್ತು.

"ರಮಾ! ನೀನು ವಿದ್ಯಾವತಿ. ಈ ಕಾಲದವಳು. ನೀನೇಕೆ ಪುನಃ ಮದುವೆಯಾಗಲಿಲ್ಲ?"

ರಮಾ ನಾಚುತ್ತಾ "ನನ್ನನ್ನು ಯಾರೂ ಮದುವೆಯಾಗುತ್ತೇನೆಂದು ಬರಲಿಲ್ಲ" ಎಂದಳು.

" ಯಾರಾದರೂ ಬಂದು ವರಿಸಿದ್ದರೆ ಮದುವೆಯಾಗುತ್ತಿದ್ದೆಯೋ ? "

" ಆಗುತ್ತಿದ್ದೆನೋ ಏನೋ! ನನಗೆ ಚಿಕ್ಕ ವಯಸ್ಸಿನಲ್ಲಿ ಮದುವೆಯಾಗಿತ್ತೆಂದು ಹೇಳಿದೆನಲ್ಲಾ! ಆ ಗಂಡನ ಜ್ಞಾಪಕವೇ ನನಗಿಲ್ಲ. "

" ಸಮಾಜವು ಒಪ್ಪಬೇಕಲ್ಲ ? "

" ಈ ಸಮಾಜ ನಮಗೇನು ಮಾಡುತ್ತದೆ? ನನಗೆ ಬಿ. ಎ. ಓದಬೇಕೆಂದು ಆಸೆ! ಓದುವುದಕ್ಕೆ ಈ ಸಮಾಜವೇನು ಮಾಡೀತು ? ಒಂದು ದಿನ ಊಟಕ್ಕಿಲ್ಲದಿದ್ದರೆ ಈ ಸಮಾಜವು ಮರ್ಯಾದೆಯಾಗಿ ಭಿಕ್ಷವನ್ನು ಕೂಡ ಕೊಡುವುದಿಲ್ಲ. ಯಾರಲ್ಲಾದರೂ ಹೋಗಿ ಸಹಾಯ ಕೇಳಿದರೆ ಕೆಲಸ ಮಾಡಿ ಜೀವನ ಮಾಡಬಾರದೇ? ಎನ್ನುತ್ತಾರೆ. ಆ ಕೆಲಸವನ್ನಾದರೂ ಕೊಡುವವರಾರು ? "

" ರಮಾ ಅದನ್ನೆಲ್ಲಾ ನನಗೆ ಬಿಡಿಸಿ ಹೇಳಬೇಡ. ನನ್ನ ಮನಸ್ಸು ಮತ್ತಷ್ಟು ನೋಯುತ್ತದೆ. ಕೆಲಸ ನನ್ನಲ್ಲಿ ಸಿಕ್ಕಿದೆಯಲ್ಲ! ನಿನಗೆಷ್ಟು ಬೇಕಾದರೂ ಹಣ ಕೊಡುತ್ತೇನೆ. ನೀನು ಸಾಯುವವರೆಗೂ ಸುಖವಾಗಿ ಜೀವಿಸುವಷ್ಟು ಹಣ ಕೊಡಬಲ್ಲೆ. ನನಗೆ ಹಣದ ಮೇಲೆ ಆಸೆಯೇ ಇಲ್ಲವಾಗಿದೆ. ನೀನೇಕೆ ನನ್ನ ಜೊತೆ ಸೇರಿದೆಯೋ ನಾನರಿಯೆ! ನಿನ್ನ ಸಾನ್ನಿಧ್ಯ. ನಿನ್ನ ಆದರ ವಿಶ್ವಾಸಗಳು ನನಗೆಷ್ಟೋ ಆಪ್ಯಾಯಮಾನವಾಗಿವೆ. "

ರಮಾದೇವಿಯು ನಸುನಗುತ್ತಾ ಕೃತಜ್ಞತೆಯನ್ನು ಸೂಚಿಸಿದಳು. ಇಬ್ಬರೂ ಹೋಟಲು ಸೇರಿದರು.

ರಂಗರಾಯನು ಮಹಡಿಯ ಮೇಲೆ ಸುಸಜ್ಜಿತವಾದ ಕೋಣೆಯೊಳಗೆ ಹೋಗಿ ಸೋಫಾದ ಮೇಲೆ ಕುಳಿತುಕೊಂಡನು. ಅಂಗಿಯ ಬಟ್ಟೆಗಳನ್ನೆಲ್ಲಾ ತೆಗೆದುಕೊಟ್ಟನು. ರಮಾದೇವಿಯು ಅವುಗಳನ್ನು ಸ್ಟ್ಯಾಂಡಿನ ಮೇಲೆ ಇಟ್ಟಳು. ಕೈಗಡಿಯಾರವನ್ನು ಬಿಚ್ಚಿಕೊಟ್ಟನು ಅದನ್ನು ಮೇಜಿನ ಮೇಲಿಟ್ಟಳು. " ರಮಾ! ಪೆಟ್ಟಿಗೆಯನ್ನು ತೆಗೆದು ಸ್ವಲ್ಪ ವಿಸ್ಕಿ ಕೊಡುವೆಯಾ ? " ಎಂದು ಕೇಳಿದನು.

ರಮಾದೇವಿಗೆ ಈ ಉಪಚಾರಗಳೆಲ್ಲಾ ಅಭ್ಯಾಸವಾಗಿ ಹೋಗಿತ್ತು. ಪೆಟ್ಟಿಗೆಯನ್ನು ತೆಗೆದು ಪಾನವನ್ನು ಸಿದ್ಧಮಾಡಿ ತಂದುಕೊಟ್ಟಳು. ರಂಗ

ರಾಯನು ಕೊಂಚ ಕೊಂಚವಾಗಿ ಆಸ್ವಾದನ ಮಾಡಿ ಪಾನವನ್ನು ಮುಗಿಸಿ ಪಾತ್ರೆಯನ್ನು ಮೇಜಿನ ಮೇಲಿಟ್ಟನು. ರಮಾ ಸಿಗರೇಟು ಕೇಸಿನಿಂದ ಸಿಗರೇಟ್ ತೆಗೆದುಕೊಟ್ಟಳು. ಲೈಟರಿನಿಂದ ಹತ್ತಿಸಿದಳು. ರಂಗರಾಯನು ಧೂಮವನ್ನು ಬಿಡುತ್ತಾ ಕಣ್ಣುಗಳನ್ನು ತೇಲಿಸುತ್ತಾ ಸಮೀಪದಲ್ಲಿ ನಿಂತಿದ್ದ ರಮಾದೇವಿಯ ಕೈಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಂಡನು.

" ರಮಾ! ನೀನು ನನ್ನ ಆತ್ಮೀಯಳು. ನನ್ನ ವಿಚಾರಗಳನ್ನೆಲ್ಲಾ ನಿನಗೆ ಹೇಳಿರುವುದು ಒಳ್ಳೆಯದು. ನನಗೊಬ್ಬ ಹೆಂಡತಿ ಇದಾಳೆ. ರೂಪಲಾವಣ್ಯಗಳಲ್ಲಿ ಅವಳೇನು ಕಡಮೆ ಇಲ್ಲ ನಿನಗಿಂತ ಐದಾರು ವರ್ಷ ದೊಡ್ಡವಳಿರಬಹುದು. ಅವಳನ್ನು ನಾನು ಬಿಟ್ಟುಬಿಟ್ಟೆ! ಅದೇ ನನ್ನ ಕೊರತೆ! ಸಂಧ್ಯಾಕಾಲ ಸಮುದ್ರದ ದಡದಲ್ಲಿ ನೀನು ಕೇಳಿದೆ. ನಿಮಗೇಕೆ ಇಷ್ಟು ಬೇಸರ? ಎಂದು. ಇದೇ ಬೇಸರಕ್ಕೆ ಕಾರಣ! "

ರಮಾದೇವಿಯು ತಡವರಿಸುತ್ತಾ "ಅವರೆಲ್ಲಿದ್ದಾರೆ?" ಎಂದು ಕೇಳಿದಳು.

" ಮೈಸೂರಿನಲ್ಲಿಯೇ ಇದಾಳೆ! "

" ಅವರನ್ನೇಕೆ ಬಿಟ್ಟಿರಿ? "

" ಕೆಟ್ಟ ಸಹವಾಸ! ಈ ಕಾಂಗ್ರೆಸ್ಸಿನವರ ಸಹವಾಸ! "

" ಕಾಂಗ್ರೆಸ್ಸಿಗೆ ಸೇರಿ ಅವರು ಜೈಲಿಗೆ ಹೋಗಿದ್ದರೇನು? "

ಹಲ್ಲು ಕಡಿದು " ಅವಳು ಜೈಲಿಗೆ ಹೋಗಲಿಲ್ಲ. ಕಾಂಗ್ರೆಸ್ ಸಹವಾಸ ಸೇರಿ ಮನೆ ಬಿಟ್ಟು ಹೋದಳು. " ಎಂದನು.

ಸ್ವಲ್ಪ ಹೊತ್ತು ಮಾತನಾಡದೆ ಸುಮ್ಮನಿದ್ದ. ಆಮೇಲೆ " ರಮಾ! ಇನ್ನೊಂದು ' ಪೆಗ್ ' ಕೊಡು " ಎಂದು ಕೇಳಿದನು.

ರಮಾ ಸಂದೇಹದಿಂದ ನೋಡಿದಳು.

" ರಮಾ! ಭಯ ಪಡಬೇಡ! ನಾನು ಹೆಚ್ಚಾಗಿ ಕುಡಿದು ಜ್ಞಾನಶೂನ್ಯನಾಗಿ ಕೂಗುತ್ತೇನೆಂದುಕೊಳ್ಳಬೇಡ! ಈ ಊರಿನಲ್ಲಿ ಇದು ಕಾನೂನು ವಿರೋಧವೆಂದು ಬಲ್ಲೆ. ಮನಸ್ಸನ್ನು ದಮನ ಮಾಡಿಕೊಳ್ಳುವ ಶಕ್ತಿ ನನಗೆ ಇದೆ. ಕೊಡು! "

ರಮಾ ಮತ್ತೊಮ್ಮೆ ಪಾನ ಪಾತ್ರವನ್ನು ತುಂಬಿಕೊಟ್ಟಳು.

ರಂಗರಾಯನು ಪೂರ್ತಿಯಾಗಿ ಒಂದೇ ಬಾರಿಗೆ ಕುಡಿದು "ರಮಾ! ಇಲ್ಲಿ ಬಾ! ಇನ್ನೂ ಹತ್ತಿರ ಕುಳಿತುಕೋ! ನಾನು ಕಾಮುಕನಲ್ಲ" ಎನ್ನುತ್ತಾ ರಮಾದೇವಿಯನ್ನು ಹತ್ತಿರಕ್ಕೆ ಎಳೆದು ಕೂಡಿಸಿಕೊಂಡನು.

"ರಮಾ! ಅವಳಾರೆಂಬುದನ್ನು ಬಲ್ಲೆಯಾ?"

"ಇಲ್ಲ! ನಿಜವಾಗಿಯೂ ಅವರನ್ನು ಅರಿಯೆ!"

"ರಮಾ! ಅವಳನ್ನು ಅರಿಯದವರು ಮೈಸೂರಿನಲ್ಲಿ ಯಾರಿದ್ದಾರೆ! ಆ 'ಚಿತ್ರಕೂಟ'ವನ್ನು ಅರಿಯೆಯಾ? ಆ ಶಿಶುವಿಹಾರ! ಆ ವನಿತಾಶ್ರಮಗಳ ಹೆಸರು ಕೇಳದವರಾರು?"

ರಮಾ ಮೃದುನುಡಿಯಿಂದ "ಬಲ್ಲೆ. ಆ ಶ್ಯಾಮಲಾದೇವಿಯವರು! ಅವರು ನಿಮ್ಮ ಧರ್ಮಪತ್ನಿಯವರೇ? ಅವರು ವಿಧವೆಯೆಂದುಕೊಂಡಿದ್ದೆ" ಎಂದಳು.

"ಆ ಶ್ಯಾಮಲಾ! ಧರ್ಮಪತ್ನಿ! ಅವಳೇ ನನ್ನ ಹೆಂಡತಿಯಾಗಿದ್ದವಳು ಈಗ ಅವಳು ವಿಧವೆಯಂತೆಯೆ! ನೀನೂ 'ವಿಧವೆ' ಎನ್ನುತ್ತಿ! ಆದರೂ ಪವಿತ್ರಳಾದ ದೇವತೆ. ಅವಳು ಸೌಭಾಗ್ಯವತಿಯಾದರೂ ಪಿಶಾಚಿ. ಪಾಪಿ ಕುಲಪಾತಕಿ!"

ರಮಾದೇವಿಯ ಮೈನಡುಗಿತು. ತುಟಿಗಳು ಅದುರುತ್ತಿದ್ದುವು.

"ರಮಾ! ನಿನಗೇಕೆ ಇಷ್ಟು ಭಯ ನೀನೇಕೆ ನಡುಗುತ್ತಿ?" ಎಂದು ಸಂತೈಸುತ್ತಾ ಗಾಢಾಲಿಂಗನ ಮಾಡಿ ಚುಂಬಿಸಿದನು. ರಮಾದೇವಿಯು ಹಾಗೆಯೇ ರಂಗರಾಯನ ತೊಡೆಯ ಮೇಲೆ ಒರಗಿದಳು. ರಂಗರಾಯನು ರಮೆಯ ಮೈಸವರುತ್ತಿದ್ದನು. ರಮೆಯ ಮೈ ಪುಳಕಿತವಾಗುತ್ತಿತ್ತು.

ರಂಗರಾಯನು ಆ ರಾತ್ರಿ ಹೊಸ ಸ್ವಪ್ನಗಳನ್ನು ಕಾಣುತ್ತಿದ್ದನು. ಅವನ ಭಾಗ್ಯವು ಪರಿಪೂರ್ಣವಾದಂತೆ ಅವನಿಗೆ ಭಾಸವಾಗುತ್ತಿದ್ದಿತು.

ಆ ರಾತ್ರಿಯು ಕಳೆದು ಬೆಳಕು ಹರಿಯಿತು. ಹಾಸಿಗೆಯಿಂದ ಎದ್ದು ಕಿಟಕಿಯಲ್ಲಿ ಇಣುಕಿ ನೋಡಿದನು. ದಿನಮಣಿಯ ಎಳೆ ಕಿರಗಳು ತೇಲುತ್ತಿದ್ದುವು. ಕೋಣೆಯಲ್ಲಿ ದೀಪವು ಜ್ವಲಿಸುತ್ತಲೇ ಇದ್ದಿತು. ತನ್ನ ಹಾಸಿಗೆಯ

ಮೇಲೆ ರಮಾದೇವಿಯು ನಿದ್ರಿಸುತ್ತಿದ್ದಳು. ಅವಳ ಪ್ರಸನ್ನವದನಾದವಿಂದ ವನ್ನು ಚುಂಬಿಸಿದನು. ರಮೆಗೆ ಎಚ್ಚರವಾಯಿತು. ಅವಳು ಅರೆಕಣ್ಣು ತೆರೆದು ನೋಡಿದಳು. ರಂಗರಾಯನು ಚುಂಬಿಸುತ್ತಿದ್ದನು. ನಾಚಿಕೆಯಿಂದ ಕಣ್ಣು ಮುಚ್ಚಿದಳು. ಸ್ವಲ್ಪ ಹೊತ್ತಿನ ಮೇಲೆ ಇಬ್ಬರೂ ಎದ್ದು ಸ್ನಾನ ಮಾಡಿ, ಕಾಫಿ ಯನ್ನು ತೆಗೆದುಕೊಂಡರು.

ರಂಗರಾಯನು ಪ್ರೇಮದಿಂದ "ರಮಾ ಇಂದು ನೀನು ನನ್ನವಳು" ಎಂದನು.

ರಮಾ ನಾಚಿಕೆಯಿಂದ ತಲೆಬಾಗಿ "ನಾನು ಯಾವಾಗಲೂ ನಿಮ್ಮ ವಳೇ!" ಎಂದಳು.

"ರಮಾದೇವಿ. ನನಗೆ ನಲವತ್ತೈದು ವರ್ಷ ವಯಸ್ಸಾಗಿದೆ, ನೀನಿನ್ನೂ ಇಪ್ಪತ್ತು ವರ್ಷದ ಯುವತಿ!"

"ಅದೊಂದೂ ನನಗೆ ತೋಚುವುದಿಲ್ಲ. ನನಗೆ ಈ ಪ್ರಪಂಚದಲ್ಲಿರುವರು ನೀವೊಬ್ಬರೇ!"

ರಂಗರಾಯನು ಅವಳನ್ನು ಬಾಚಿ ತಬ್ಬಿಕೊಂಡನು.

ಅನಂತರ, ಅವರಿಬ್ಬರೂ ಡ್ರೆಸ್ ಹಾಕಿಕೊಂಡು ಕೆಳಗಿಳಿದು ಬಂದರು. ಕಾರು ಸಿದ್ಧವಾಗಿತ್ತು. ರಮಾದೇವಿಯನ್ನು ಕರೆದುಕೊಂಡು ಬಜಾರಿಗೆ ಹೋದನು. ರಮಾದೇವಿಗೆ ಆಭರಣಗಳನ್ನೂ ಸೀರೆಗಳನ್ನೂ ಕೊಂಡುಕೊಂಡನು. ಇನ್ನೂ ಎಷ್ಟೋ ಅಲಂಕಾರ ಸಾಮಗ್ರಿಗಳನ್ನು ಕೊಂಡುಕೊಂಡನು.

ಮಧ್ಯಾಹ್ನ ಒಂದು ಗಂಟೆಗೆ ವಾಪಸು ಇಬ್ಬರೂ ಬಂದರು. ರಮಾ ದೇವಿಯು ಅದನ್ನೆಲ್ಲಾ ನೋಡಿ ಬಹಳ ಸಂತೋಷಪಟ್ಟಳು.

ಮಾರನೆಯ ದಿನವೇ ರಂಗರಾಯ ಮತ್ತು ರಮಾದೇವಿಯರ ವಿವಾಹವು ರಿಜಿಸ್ಟರ್ ಮಾಡಿಸಲ್ಪಟ್ಟಿತು. ಅಂದಿನಿಂದ ರಂಗರಾಯನ ಹೊಸ ಸಂಸಾರವು ಆರಂಭವಾಯಿತು.

## ೨೭

ರಂಗರಾಯನು ರಮಾದೇವಿಯೊಡನೆ ಅನೇಕ ನಗರಗಳನ್ನೂ ಕ್ಷೇತ್ರಗಳನ್ನೂ ಸಂಚಾರ ಮಾಡಿದನು. ಡೆಲ್ಲಿಯಿಂದ ಡಾಕ್ಟರು ಸುಬ್ಬರಾಯನಿಗೂ ತನ್ನ ಮ್ಯಾನೇಜರ್ ಶ್ರೀಕಂಠಯ್ಯನಿಗೂ ಕಾಗದಗಳನ್ನು ಬರೆದನು. ಆ ಕಾಗದದಲ್ಲಿ ರಮಾದೇವಿಯ ರೂಪ ಲಾವಣ್ಯಗಳನ್ನೂ ಸದ್ಗುಣಗಳನ್ನೂ ವರ್ಣಿಸಿ ಬರೆದಿದ್ದನು. ರಮಾದೇವಿಯನ್ನು ತಾನು ಮದುವೆಯಾಗಿರುವುದಾಗಿ ಬರೆದನು. ಮದರಾಸಿನಲ್ಲಿ ರಮಾದೇವಿಯೊಡನೆ ತೆಗಸಿಕೊಂಡಿದ್ದ ಫೋಟೋಗಳನ್ನು ಕಳಿಸಿದ್ದನು. ರಂಗರಾಯನ ದೇಶಯಾತ್ರೆಯು ಬಹು ದೂರದ ವರೆಗೆ ಹೋಯಿತು. ಈ ನವ ದಂಪತಿಗಳು ಅಲ್ಲಿಂದ ಕಾಶ್ಮೀರಕ್ಕೆ ಹೋಗಿದ್ದರು. ಕಾಶ್ಮೀರದಲ್ಲಿ ಅನವೃಶವಾದ ಪ್ರಕೃತಿಸೌಂದರ್ಯವಿದೆ. ದೋಣಿಗಳ ಮೇಲೆಯೇ ವಾಸಮಾಡುವ ಮನೆಗಳಿವೆ—ಇತ್ಯಾದಿ ಎಷ್ಟೋ ಕಥೆಗಳನ್ನೆಲ್ಲಾ ಅವನು ಕೇಳಿದ್ದನು. ರಮಾದೇವಿಯೊಡನೆ ಕಾಶ್ಮೀರಕ್ಕೆ ಹೋಗುವುದು ಅವನಿಗೆ ಉತ್ತೇಜಕವಾಗಿದ್ದಿತು. ಕಾಶ್ಮೀರಕ್ಕೆ ಹೋಗಿ ಹತ್ತು ದಿನಗಳನ್ನು ಕಳೆದನು. ಕಾಶ್ಮೀರದ ರಾಜಕೀಯವು ಉಲ್ಬಣಾವಸ್ಥೆಯಲ್ಲಿತ್ತು. ಎಲ್ಲಿಗೆ ಹೋಗುವುದಕ್ಕೂ ಭಯ, ಸಂದೇಹ! ಯಾರೊಡನೆ ಮಾತನಾಡುವುದಕ್ಕೂ ನಿರುತ್ಸಾಹ. ಅವರಿಬ್ಬರೇ ತಮ್ಮತಮ್ಮೊಳಗೆ " ಕಾಶ್ಮೀರ ಚೆನ್ನಾಗಿದೆ. ಕಾಶ್ಮೀರ ಚೆನ್ನಾಗಿದೆ" ಎಂದುಕೊಂಡು, ಕಾಶ್ಮೀರದಿಂದ ಹಿಂತಿರುಗಿದರು.

ಡೆಲ್ಲಿಯಿಂದ ಬೊಂಬಾಯಿಗೆ ಬಂದಿಳಿದರು. ತಾಜ್‌ಮಹಲ್ ಹೋಟೆಲಿನಲ್ಲಿ ತಂಗಿದರು. ರಂಗರಾಯನ ಸಂಕಲ್ಪಗಳಲ್ಲಿ ಇದೂ ಒಂದು ಆಶೆ ಇತ್ತು. ಬೊಂಬಾಯಿನಲ್ಲಿ ಒಂದು ವಾರ ಕಳೆದರು. ರಂಗರಾಯನಿಗೆ ಮೈಸೂರಿಗೆ

ಹೋಗುವ ಮನಸ್ಸಾಯಿತು. ಊರು ಬಿಟ್ಟು ನಾಲ್ಕು ತಿಂಗಳು ಕಳೆದು ಹೋಗಿತ್ತು. ರಂಗರಾಯನು ರಮಾದೇವಿಯೊಡನೆ ಆಲೋಚಿಸ ತೊಡಗಿದನು.

" ರಮಾ, ನಾವು ಮೈಸೂರಿಗೆ ಹಿಂತಿರುಗಿ ಹೋಗೋಣವೇ? "

" ಹೋಗೋಣ. ಎಂದಾದರೂ ನಮ್ಮ ಊರಿಗೆ ನಾವು ಹೋಗಲೇ ಬೇಕು. ನನಗೂ ಈ ಪ್ರವಾಸವು ಬೇಜಾರಾಗುತ್ತಿದೆ. ನಿಮಗೂ ಅದೇ ತೋರಿದೆ. ಇಬ್ಬರ ಮನಸ್ಸೂ ಒಂದೇ! "

" ಏಕೋ ನೋಡು ರಮಾ! ನನಗೆ ಮೈಸೂರಿಗೆ ಹೋಗುವುದೆಂದರೆ ಮನಸ್ಸು ಅಳುಕುತ್ತದೆ."

" ಏಕೆ? ನಿಮಗೇನು ಆತಂಕವಿದೆ. ಸೊಗಸಾದ ಮನೆ ಇದೆ. ಬೇಕಾದಷ್ಟು ಐಶ್ವರ್ಯವಿದೆ. ಊರಿನಲ್ಲಿ ಗೌರವವಿದೆ. ದೊಡ್ಡ ವ್ಯಾಪಾರ! ಮತ್ತೇನು ಬೇಕು? "

" ಎಲ್ಲಾ ಇದೆ. ಅದೆಲ್ಲದಕ್ಕಿಂತ ಹೆಚ್ಚಾಗಿ ನೀನೇ ಇದ್ದೀ! ಆದರೂ ನೋಡು ರಮಾ! ಆ ಶ್ಯಾಮಲಾ! ನನ್ನ ಎದುರಿಗೆ ಮಹಾ ದೇಶಭಕ್ತಳಂತೆ ಸೋಗು ಹಾಕಿಕೊಂಡು ಸ್ವೇಚ್ಛಾಚಾರಿಣಿಯಾಗಿರುವುದನ್ನು ಸಹಿಸಲಾರೆ! ನನ್ನ ಹೆಂಡತಿ ಎನ್ನುವಳು ಹಾಗಿದ್ದು ನಾನು ಗೌರವಸ್ಥನೆಂದುಕೊಳ್ಳುವುದು ಹಾಸ್ಯಾಸ್ಪದವಲ್ಲವೇ? "

" ನೀವು ಶ್ಯಾಮಲಾದೇವಿಯನ್ನು ಬಿಟ್ಟು ಬಿಟ್ಟಿದ್ದೀರಿ. ಅವಳ ಹವ್ಯಾಸ ನಿಮಗೆಲ್ಲಿದೆ? "

" ಹಾಗಲ್ಲ ರಮಾ. ನೀನು ಇನ್ನೂ ಹುಡುಗಿ! ನನ್ನ ಕೀರ್ತಿ ಗೌರವ ಗಳಿಗೆ ಅದೊಂದು ಕಳಂಕವೇ ಸರಿ! "

ರಮಾ ಮೌನವಾಗಿದ್ದಳು.

" ನಿನ್ನ ವಿಚಾರವೇನು? ನೀನು ನನ್ನನ್ನು ವಿವಾಹ ಮಾಡಿಕೊಂಡಿರುವುದರಿಂದ ಜನರು ಆಡಿಕೊಳ್ಳುವುದಿಲ್ಲವೆ. ಇಂಥಾ ವಿವಾಹಗಳು ನಮ್ಮೂರಿನಲ್ಲಿ ಹೊಸದು! "

" ನನಗೆ ಹಾಗೆನ್ನಿಸುವುದಿಲ್ಲ. ದೊಡ್ಡ ದೊಡ್ಡ ದೇಶಭಕ್ತರೆಲ್ಲಾ ಈ

ಸಮಾಜ ಸಂಸ್ಕರಣವನ್ನು ಕೊಂಡಾಡುತ್ತಾರೆ."

"ಅದೆಲ್ಲಾ ಭಾಷಣಗಳಲ್ಲಿ, ಪತ್ರಿಕೆಗಳಲ್ಲಿ. ಸಮಾಜದ ನಿತ್ಯ ಜೀವನದಲ್ಲಿ ಜನರು ನಮ್ಮನ್ನು ಕುಹಕ ಮಾಡುತ್ತಾರೆ."

"ನನಗೆ ಅದರಿಂದೇನೂ ಅಂಜಿಕೆ ಇಲ್ಲ. ನಾನು ಸಮಾಜ ಜೀವಿಯೇ ಅಲ್ಲ. ಬಂಧುಗಳಿಲ್ಲ, ಯಾರೂ ಇಲ್ಲ. ನೀವು ನನ್ನಲ್ಲಿ ಪೂರ್ಣ ಪ್ರೇಮವಿಟ್ಟಿದ್ದೀರಿ. ನನಗೆ ಅದೇ ಸರ್ವಸ್ವ!"

ಮೈಸೂರಿಗೆ ಹೊರಡುವ ನಿಶ್ಚಯವಾಯಿತು. ಶಂಕರಯ್ಯನಿಗೆ ತಂತಿ ಕಳುಹಿಸಿದನು. ಎರಡು ದಿನಗಳಲ್ಲಿ ರಂಗರಾಯನು ಹೊಸ ಹೆಂಡತಿಯೊಡನೆ ಮೈಸೂರಿಗೆ ಬಂದು ತನ್ನ ಮನೆಗೆ ಸೇರಿದನು.

ಒಂದೆರಡು ದಿನಗಳು ಅಂಜಿ ಅಂಜಿ ನಡೆಯುತ್ತಿದ್ದನು. ಯಾರಲ್ಲಿಯೂ ಏನೂ ವ್ಯತ್ಯಾಸವು ಕಾಣಲಿಲ್ಲ. ಡಾಕ್ಟರನ್ನು ಹೋಗಿ ನೋಡಿಕೊಂಡು ಬಂದನು. ಡಾಕ್ಟರು ಯಾತ್ರೆ, ಹೊಸ ವಿವಾಹಗಳಿಗಾಗಿ ಅಭಿನಂದಿಸಿದರು. ರಂಗರಾಯನು ಆಫೀಸಿಗೆ ಹೋಗುವುದು ಬರುವುದು ಪರಿಚಿತರನ್ನು ಕಂಡು ಮಾತನಾಡುವುದು ಎಲ್ಲಾ ಆರಂಭವಾಯಿತು. ಎಲ್ಲಿಯೂ ವ್ಯತ್ಯಾಸ ಕಾಣಲಿಲ್ಲ ಅವನ ಮನಸ್ಸಿನಲ್ಲಿ ಮಾತ್ರ ಅಳುಕಿತ್ತು.

ಊರಿಗೆ ಬಂದು ಒಂದೆರಡು ವಾರಗಳು ಕಳೆದುವು. ಈ ಹೊಸ ವಿವಾಹವು ಶ್ಯಾಮಲಾದೇವಿ, ನಾರಾಯಣರಾಯರ ಮೇಲೆ ಏನು ಪರಿಣಾಮವನ್ನುಂಟು ಮಾಡಿದೆ ಎಂಬ ಕೋಲಾಹಲ ರಂಗರಾಯನಿಗೆ ಬಹಳವಾಗಿತ್ತು.

ರಂಗರಾಯನು ಸಂಧ್ಯಾಕಾಲ ಕಾರಿನಲ್ಲಿ ಕುಳಿತು ರಮಾದೇವಿಯೊಡನೆ ಗಾಳಿ ಸವಾರಿ ಹೋದರು. "ರೇಸ್ ಕೋರ್ಸ್ ಕಡೆ ಬಿಡು" ಎಂದು ಡ್ರೈವರಿಗೆ ಹೇಳಿದನು. ಗಾಡಿಯು ಆಕಸ್ಮಾತ್ ಚಿತ್ರಕೂಟದ ಕಡೆ ಹೋಯಿತು. ಸಂಧ್ಯಾಕಾಲ ಕತ್ತಲು ಕವಿಯುತ್ತಿರುವ ಸಮಯ; ಜನ ಸಂಚಾರವಿರಲಿಲ್ಲ. ಗಾಡಿಯು 'ಚಿತ್ರಕೂಟ'ದ ಸಮೀಪದಲ್ಲಿ ಹೋಗುತ್ತಿರುವಾಗ ರಂಗರಾಯನು ಗಾಡಿಯನ್ನು ನಿಲ್ಲಿಸುವಂತೆ ಹೇಳಿದನು. ಗಾಡಿಯು ನಿಂತಿತು.

"ನೋಡು ರಮಾ. ಇದೇ 'ಚಿತ್ರಕೂಟ.' ಶ್ಯಾಮಲಾ. ಶಿಶುವಿಹಾರ,

ವನಿತಾಶ್ರಮಗಳಿರುವುದು ಇಲ್ಲಿಯೇ! ಇದೊಂದು ಹಾಳು ದೇಗುಲ! ದೆವ್ವದ ಮನೆಯೆಂದು ಹೆಸರಾಗಿತ್ತು. ಕೊನೆಗೆ ಶ್ಯಾಮಲೆಯ ಕೈಗೆ ಸಿಕ್ಕಿತು. ಅವಳೇ ಈಗ ಈ ಹೆಣ್ಣು ಪಿಶಾಚಿ!" ಎಂದನು.

ರಮಾದೇವಿಯು ಆ ಮನೆಯನ್ನು ನೋಡಿ, "ಮನೆ ಹಳೆಯದು. ಅಷ್ಟೆ. ದೊಡ್ಡ ಕಾಂಪೌಂಡಿದೆ. ಒಳ್ಳೆಯ ಜಾಗದಲ್ಲಿದೆ" ಎಂದಳು.

ಗಾಡಿಯು ಮುಂದಕ್ಕೆ ಹೊರಟಿತು.

"ರಮಾದೇವಿ, ನೀನು ಅವಳನ್ನು ನೋಡಿರುವಿಯೇನು?"

"ಯಾರು, ಶ್ಯಾಮಲಾದೇವಿಯವರನ್ನೇ! ಇಲ್ಲ! ನಾನು ನೋಡಿಲ್ಲ. ಹೆಸರು ಕೇಳಿದ್ದೇನೆ."

"ನಿನಗೆ ಅವಳನ್ನು ನೋಡಬೇಕೆಂಬ ಆಸೆ ಇದೆಯೇನು?"

ರಮಾ ನಗುತ್ತಾ "ನಾನು ನಿಮ್ಮ ಪತ್ನಿಯಾದ ಮೇಲೆ ಅವರನ್ನು ನೋಡಬೇಕೆಂಬ ಆಸೆ ಇದೆ. ನಿಮ್ಮ ಅಪ್ಪಣೆಯಿಲ್ಲದೇ ಹೇಗೆ ಹೋಗುವುದು? ನಿಮ್ಮ ಅಪ್ಪಣೆ ಕೇಳುವುದಕ್ಕೂ ಸಂಕೋಚ!" ಎಂದಳು.

"ನೀನು ಹೋಗಿ ಅವಳನ್ನು ನೋಡುವುದಕ್ಕೆ ನನ್ನ ಅಡ್ಡಿಯೇನಿದೆ. ಆ ಹೆಣ್ಣು ಪಿಶಾಚಿ ನಿನ್ನನ್ನು ಹಿಡಿದರೆ ಕಷ್ಟ!"

ಮತ್ತೆ ರಮಾ ನಗುತ್ತಾ "ಆ ಭಯವೇನೂ ಇಲ್ಲ." ಎಂದುಳು.

ಗಾಳಿ ಸವಾರಿಯನ್ನು ಮುಗಿಸಿಕೊಂಡು ಮನೆಗೆ ಬರುವ ಹೊತ್ತಿಗೆ ಮನೆಯ ಮುಂದೆ ಒಂದು ಕಾರು ನಿಂತಿತ್ತು. ರಂಗರಾಯನು ತನ್ನ ಕಾರಿನಿಂದ ಇಳಿದು ಆ ಕಾರಿನ ಹತ್ತಿರ ಹೋದನು. ಅದು ಡಾಕ್ಟರ ಕಾರು.

"ಬಾರಯ್ಯಾ ಸುಬ್ಬರಾವ್. ಬಂದು ಬಹಳ ಹೊತ್ತಾಯಿತೇನು?"

"ಇಲ್ಲ. ನಿನ್ನ ಕಾರು ಅತ್ತಲಿಂದ ಬಂತು. ನನ್ನ ಕಾರು ಇತ್ತ ಬಂತು. ಅಷ್ಟೆ! ಏನಯ್ಯಾ ಹೊಸ ಹೆಂಡತಿಯೊಡನೆ ಮಜಾ ಮಾಡಲು ಹೋಗಿ ದ್ದೆಯೋ?"

ರಂಗರಾಯ ನಗುತ್ತಾ "ಅದೆಲ್ಲಾ ಇಲ್ಲವಯ್ಯಾ. ಬೇಸರವಾಗಿತ್ತು. ರೇಸ್ ಕೋರ್ಸ್ ಕಡೆ ಹೋಗಿದ್ದೆ. ಬಾ ಮನೆಯೊಳಗೆ ಹೋಗೋಣ"

ಎಂದು ಡಾಕ್ಟರನ್ನು ಕರೆದುಕೊಂಡು ಬಂದನು.

ಅಷ್ಟರಲ್ಲಿ ರಮಾದೇವಿಯು ಮಿಂಚಿನಂತೆ ಕಾರಿನಿಂದ ಹಾರಿ ಮನೆಯೊಳಗೆ ಸೇರಿಕೊಂಡಳು. ಏಕೋ ಡಾಕ್ಟರಿಗೆ ಮುಖ ತೋರಿಸಲು ಅವಳಿಗೆ ನಾಚಿಕೆ ಯಾಯಿತು.

ಡಾಕ್ಟರು ಚಾಣಾಕ್ಷ! ಅವರು ಇದನ್ನು ಗಮನಿಸದೇ ಇರಲಿಲ್ಲ! ಅವರಿಗೂ ಒಂದು ಬಾರಿ ಈ ರಮಾದೇವಿಯನ್ನು ನೋಡಬೇಕೆಂಬ ಆಸೆ ಇತ್ತು. ಇರಲಿ! ಎಲ್ಲಿ ಹೋಗುತ್ತಾಳೆ. ಇಂದಲ್ಲ ನಾಳೆ! ಸ್ವಲ್ಪ ನೆಗಡಿ ಕೆಮ್ಮು ಆದರೆ ನನ್ನಲ್ಲಿಗೆ ಬರದೇ ಎಲ್ಲಿ ಹೋಗುತ್ತಾಳೆ, ಎಂದುಕೊಂಡನು.

ರಂಗರಾಯನೂ, ಡಾಕ್ಟರೂ ಮಹಡಿಯ ಮೇಲೆ ಹೋಗಿ ಕುಳಿತರು. ರಂಗರಾಯನು ಕಪಾಟದಿಂದ ವಿಸ್ಕೀ ಬಾಟಲನ್ನೂ ಸೋಡಾ ಬಾಟಲುಗಳನ್ನೂ ತಂದಿಟ್ಟನು. ಎರಡು ಗ್ಲಾಸುಗಳಲ್ಲಿ ಪಾನೀಯವನ್ನು ಸಿದ್ಧಗೊಳಿಸಿದನು.

ಡಾಕ್ಟರು ಗ್ಲಾಸನ್ನು ಕೈಗೆ ತೆಗೆದುಕೊಂಡು " ಏನಯ್ಯಾ ಮಿತ್ರ. ಈಗ ನಿನ್ನ ಸೆಕ್ರೆಟರಿಯನ್ನು ಈ ಕೆಲಸಗಳಿಗೆ ಬಳಸುವುದಿಲ್ಲವೋ ? " ಎಂದು ಹಾಸ್ಯ ಮಾಡಿದರು.

" ಹೊಸ ಹುಡುಗಿ! ನಾಚುತ್ತಾಳೆ."

" ಸಹಜವಾಗಿಯೇ ಇದೆ. ಈಗ ಅವಳು ಗೃಹಿಣಿ."

ಇಬ್ಬರೂ ಪಾನ ಮಾಡಿದರು.

ರಂಗರಾಯನು " ಡಾಕ್ಟರ್, ಈ ನನ್ನ ಹೊಸ ವಿವಾಹದಲ್ಲಿ ನಿನ್ನ ನಿಜವಾದ ಅಭಿಪ್ರಾಯವೇನು.? " ಎಂದು ಕೇಳಿದನು.

" ನಿಜವಾಗಿಯೂ ನನಗೆ ಬಹಳ ಸಂತೋಷ! ನೀನು ಈಗ ಆನಂದವಾಗಿದ್ದಿ. ಸುಖವಾಗಿದ್ದಿ! "

" ಜನ ಏನು ಹೇಳುತ್ತಾರೆ ? "

" ಅದು ನಮಗೇಕಯ್ಯಾ! ಈ ಜನವನ್ನು ಮೆಚ್ಚಿಸಬಲ್ಲವರಾರು ? ಯಾರು ಏನಾದರೂ ಹೇಳಿಕೊಳ್ಳಲಿ! ಅದರಿಂದ ನಮಗೇನು ? ನಮ್ಮಿಂದ ಅವರಿಗೇನು ? "

“ಅದೇನೋ ಸರಿ. ನೀನು ಈ ಹಿಂದೆ ನಾರಾಯಣರಾಯನನ್ನೂ ಅವನ ತಂಗಿಯನ್ನೂ ಭೇಟಿಯಾಗಿದ್ದೆಯಾ ?”

“ಭೇಟಿಗೇನು ? ಭೇಟಿಯಾಗುತ್ತಲೇ ಇರುತ್ತಾರೆ. ಈ ನಿನ್ನ ಹೊಸ ದಾಂಪತ್ಯದ ವಿಚಾರ ಅವರೇನೆಂದುಕೊಳ್ಳುತ್ತಾರೆಯೋ ತಿಳಿಯಬೇಕೆಂದು ನಿನಗೆ ಕುತೂಹಲ! ಅವರು ನಿನ್ನ ಸಂಬಂಧವನ್ನೇ ಮರೆತು ಬಿಟ್ಟಿದ್ದಾರೆ. ನೀನು ಯಾರನ್ನು ಕಟ್ಟಿಕೊಂಡು ಸಂಸಾರ ಮಾಡಿದರೆ ಅವರಿಗೇನು ?”

“ಅಲ್ಲ. ನೀನೇನಾದರೂ ನನ್ನ ಈ ಮದುವೆಯ ವಿಚಾರ ಪ್ರಸ್ತಾಪವೆತ್ತಿದೆಯೋ ಅಂತ ಕೇಳಿದೆ.”

“ನಾನೇನು ನಾರದ ಮಹರ್ಷಿಯೋ ?”

“ನೀನು ನನಗೆ ಆಪ್ತ ಸ್ನೇಹಿತ. ಅವರ ಮನೆಗೆ ನೀನು ವೈದ್ಯ !”

“ಅವರು ನಾಗರಿಕರು. ನಿನ್ನ ಮಾತನ್ನು ಒಂದು ದಿನವಾದರೂ ಎತ್ತುವುದಿಲ್ಲ !”

“ನಾನೇನು ಹಳ್ಳಿ ಗಮಾರನೋ ! ನೀನು ನನ್ನ ಆಪ್ತ ಮಿತ್ರ. ನಮ್ಮ ಹಳೆಯ ಕಥೆಯೆಲ್ಲಾ ನಿನಗೆ ಗೊತ್ತು. ಅವರನ್ನೂ ಆಗಾಗ ನೋಡುತ್ತಾ ಇರುತ್ತಿ. ಅದರಿಂದ ಕೇಳಿದೆ.”

“ರಂಗರಾವ್, ಎಲ್ಲಾ ನಿಜ. ಆ ಮಾತು ಮರೆತು ಬಿಡು. ಅವರು ನಿನ್ನ ಸ್ಮರಣೆಯನ್ನು ಕೂಡ ಮಾಡುವುದಿಲ್ಲ”

“ಸುಬ್ಬರಾವ್, ನಾನು ಇತರರೊಡನೆ ಈ ಮಾತು ಉಸಿರೆತ್ತುವಂತಿಲ್ಲ. ಮಾತನಾಡಿದರೆ ನನಗೇ ಅಗೌರವ. ನಿನ್ನೊಡನೆ ಧಾರಾಳವಾಗಿ ಮಾತನಾಡ ಬಹುದು. ನೀನು ಬುದ್ಧಿವಂತ ಅವರ ಮನೆ ಗುಟ್ಟನ್ನೆಲ್ಲಾ ನೀನು ಬಲ್ಲೆ. ಒಂದೇ ಒಂದು ಮಾತು ಕೇಳಿ ಬಿಡುತ್ತೇನೆ. ಹೇಳುವಿಯೋ ?”

ಡಾಕ್ಟರು ಮತ್ತೊಂದು ‘ಪೆಗ್’ ಕುಡಿದು ಗಂಟಲು ಸರಿಮಾಡಿಕೊಳ್ಳುತ್ತಾ “ಕೇಳಪ್ಪಾ ಕೇಳು !” ಎಂದರು.

“ಆ ವಾಸುದೇವರಾಯನೂ ಆ ಶ್ಯಾಮಲೆಯೂ ಇನ್ನೂ ಏಕೆ ಮದುವೆ ಮಾಡಿಕೊಂಡಿಲ್ಲ ?”

" ಅಯ್ಯೋ ! ಫೂಲ್ ! ನನಗೇಕಯ್ಯ ಆ ಮಾತು ! ನಾನೇನು ಮದುವೆ ಮಾಡಿಸುವವನೇ ! ಮದುವೆ ಮಾಡಿಕೊಳ್ಳುವವನೇ ? "

ರಂಗರಾಯನು ಮತ್ತೊಮ್ಮೆ ಪಾನ ಮಾಡಿ "ನಾನು ಹೇಳುತ್ತೇನೆ ಕೇಳು. ಆ ಶ್ಯಾಮಲಾ, ಆ ಪಿಶಾಚಿ ನನ್ನ ಹೆಂಡತಿಯೆಂದು ಹೇಳಿಕೊಂಡೇ ನನ್ನ ಆಸ್ತಿಯನ್ನು ಹೊತ್ತುಹಾಕಬೇಕೆಂದು ಮಸಲತ್ತು ಮಾಡುತ್ತಿದ್ದಾಳೆ. ಅದಕ್ಕೆಲ್ಲಾ ತಕ್ಕ ಬಂದೋಬಸ್ತು ಮಾಡಿದ್ದೇನೆ." ಎಂದನು.

ಡಾಕ್ಟರ್ ನಕ್ಕರು. " ನಿನಗೆ ದುಡ್ಡು ! ಹೆಣ್ಣು! ಇವೆರಡು ಬಿಟ್ಟು ಬೇರೆ ಯೋಚನೆಯೇ ಇಲ್ಲ. ನಿನ್ನ ದುಡ್ಡು, ನಿನ್ನ ಹೆಣ್ಣುಗಳ ಮೇಲೆ ಎಲ್ಲರಿಗೂ ಕಣ್ಣಿದೆಯೆಂದು ನಿನ್ನ ಭಾವನೆ ! ನೀನು ಹುಚ್ಚ."

" ಇರಲಿ. ನಿನಗೇನು ಗೊತ್ತು! ನನ್ನ ಹಾಗೆ ಕೈ ಸುಟ್ಟು ಬವಣೆಪಟ್ಟಿದ್ದರೆ ನಿನಗೆ ತಿಳಿಯುತ್ತಿತ್ತು. ನಿನ್ನ ದೃಷ್ಟಿಯಲ್ಲಿ ಅವರೆಲ್ಲರೂ ಪುಣ್ಯಚರಿತ್ರರು. ನಾನೊಬ್ಬ ಪಾಪಿ ! ಅಲ್ಲವೇನಯ್ಯಾ ! "

" ರಂಗರಾವ್, ನೀನು ಪುಣ್ಯಾತ್ಮ ಸುಚ್ಚರಿತ್ರ ಪರದ್ರವ್ಯಕ್ಕೆ ಆಶೆ ಪಡುವವನಲ್ಲ. ಪರನಾರೀ ಸಹೋದರ. ಗಾಂಧೀ ಮಹಾತ್ಮನಿಗಿಂತಲೂ ಒಂದು ಕೈ ಮೇಲು, ಎಂದು ಒಪ್ಪಿಕೊಳ್ಳುತ್ತೇನೆ. ನನಗೇಕಯ್ಯಾ ! ಆ ಗ್ರಹಚಾರ ! "

" ಆಗಲಿ. ನಿನಗೊಂದು ಮದುವೆ ಮಾಡಿಸಿದರೆ ಆಗ ಬುದ್ಧಿ ಬರುತ್ತೆ. ಹೀಗೆಯೇ ಇದ್ದರೆ ಯಾರೆತ್ತ ಹೋದರೆ ಅದೇ ದಾರಿ ಎನ್ನುತ್ತೆ! ಸಮಾಜ, ದೇವರು, ಶಾಸ್ತ್ರ ಇದೆಲ್ಲಾ ಇರುವುದೇತಕ್ಕಯ್ಯಾ ? "

ಡಾಕ್ಟರ್ ನಕ್ಕು " ನೀನು ಆಸ್ತಿಕ ! ನಾನು ನಾಸ್ತಿಕ. ಸರಿಯೇನಯ್ಯಾ" ಎಂದರು.

* * * * *

ರಮಾದೇವಿಗೆ ಬೇಸರವಾಗುತ್ತಿತ್ತು. ಅವಳು ಎಲ್ಲಿಗೂ ಹೋಗುತ್ತಿರಲಿಲ್ಲ. ರಂಗರಾಯನು ಹೊರಗೆ ಹೋಗಿದ್ದಾಗ ರಮಾ ಏಕಾಕಿನಿ. ಅವಳಿಗೇನೂ ಕೆಲಸವಿಲ್ಲ. ಮಲಗಿ ನಿದ್ರಿಸಬೇಕು. ರೇಡಿಯೋ ಕೇಳಬೇಕು. ರಂಗರಾಯನು ವಿಶೇಷವಾಗಿ ಕುಡಿಯುತ್ತಿದ್ದನು. ಅವನ ಹುಚ್ಚು ಹುಚ್ಚು ಮಾತುಗಳು. ಎಲ್ಲದಕ್ಕೂ ಅವಳು ' ಹ್ಞೂ ' ಗುಟ್ಟಬೇಕು.

ರಂಗರಾಯನ ಆ ಮೋಹಾವೇಶವು ಇಳಿದು ಹೋಗಿ ನಿತ್ಯ ಜೀವನಕ್ಕೆ ಆರಂಭವಾಗಿದೆ. ಒಂದೊಂದು ಬಾರಿ "ತನಗೆ ವಯಸ್ಸಾಗಿದೆ. ರಮಾ ಚಿಕ್ಕವಳು" ಎಂದುಕೊಳ್ಳುತ್ತಾನೆ. ಒಂದು ದಿನ ಯಾವುದೋ ಜ್ಞಾನದಲ್ಲಿ ಅಮಲೇರಿ, ರಮಾದೇವಿಯನ್ನು ಹೊಡೆದುಬಿಟ್ಟನು. ಆಳುಕಾಳುಗಳಿಗೂ ಪರಿಚಾರಕರಿಗೂ ಗೊತ್ತಾಯಿತು. ರಮಾ ಊಟ ಉಪಚಾರಗಳಿಲ್ಲದೇ ಎರಡು ದಿನ ತನ್ನ ಕೋಣೆಯಲ್ಲಿಯೇ ಮಲಗಿ ಬಿಟ್ಟಳು. ರಂಗರಾಯನು ಎಷ್ಟೋ ನೊಂದುಕೊಂಡನು. ರಮಾದೇವಿಯನ್ನು ಸಂತೈಸಿದನು. ಇನ್ನು ಮೇಲೆ ಕುಡಿಯುವುದೇ ಇಲ್ಲವೆಂದು ನೂರು ಬಾರಿ ಶಪಥ ಮಾಡಿದನು.

ಪುನಃ ಅದೇ ನಿತ್ಯ ಜೀವನ! ರಮಾದೇವಿಯು 'ನಾನೇಕೆ ಮದುವೆಯಾದೆ?' ಎಂದು ಅನೇಕ ಬಾರಿ ಯೋಚಿಸುವಳು. ಕೊನೆಗೆ ವಿಧಿವಿಲಾಸವೆಂದುಕೊಂಡು ತಾನೇ ಸಮಾಧಾನ ಮಾಡಿಕೊಳ್ಳುವಳು.

ಹೀಗೆಯೇ ಕಾಲವು ಕಳೆಯುತ್ತಿತ್ತು. ಆದರೆ ರಮಾದೇವಿಗೆ ಕೆಲವು ವಿಚಾರಗಳಲ್ಲಿ ಸ್ವಾತಂತ್ರ್ಯ ಬಂದಿತ್ತು. ಮಾರ್ಕೆಟ್ಟಿಗೆ ತಾನೇ ಹೋಗಿ ಹಣ್ಣು ಹಂಪಲುಗಳನ್ನು ತರಬಹುದು. ಸಂಧ್ಯಾಕಾಲದಲ್ಲಿ ರಂಗರಾಯನಿಲ್ಲದಿದ್ದರೂ ತಾನೊಬ್ಬಳೇ ಮೋಟಾರಿನಲ್ಲಿ ಹೋಗಿ ಎಲ್ಲಿಯಾದರೂ ಸುತ್ತಿಕೊಂಡು ಬರಬಹುದು. ಪ್ರತಿ ಶುಕ್ರವಾರವೂ ಚಾಮುಂಡಿಬೆಟ್ಟಕ್ಕೆ ಹೋಗಿ ಬರುತ್ತಿದ್ದಳು. ಪ್ರತಿ ದಿನವೂ ಕೋಟೆ ಆಂಜನೇಯನ ದೇವಾಲಯಕ್ಕೆ ಹೋಗಿ ಬರುತ್ತಿದ್ದಳು. ರಮಾದೇವಿಯು ಈಗ ಗೃಹಿಣಿ. ಆದರೂ ಆ ಜೀವನದಲ್ಲಿ ಅವಳು ಅತೃಪ್ತಳು.

ಸಂಧ್ಯಾಕಾಲ ಕಾಲುನಡಗೆಯಲ್ಲೇ ವಾಕಿಂಗ್ ಹೊರಟಳು. 'ಚಿತ್ರಕೂಟ'ದ ಸಮೀಪಕ್ಕೆ ಹೋಗುತ್ತಲೇ ಮನಸ್ಸು ಅತ್ತ ಎಳೆಯಿತು. ಆ ಶ್ಯಾಮಲಾದೇವಿಯನ್ನೊಮ್ಮೆ ನೋಡಿ ಬರೋಣವೆನ್ನಿಸಿತು. ರಂಗರಾಯನು ಏನೆಂದುಕೊಂಡಾನೋ, ಎಂದೊಮ್ಮೆ ಯೋಚಿಸಿದಳು. 'ಚಿತ್ರಕೂಟ'ದ ಬಾಗಿಲಿಗೆ ಹೋದಳು. ಕಾಂಪೌಂಡಿನಲ್ಲಿ ಹುಡುಗರು ಆಟವಾಡುತ್ತಿದ್ದರು. ಇಬ್ಬರು ಯುವತಿಯರು ಅಲ್ಲಿ ಮಾತನಾಡುತ್ತಾ ನಿಂತಿದ್ದರು. ಇವರಿಬ್ಬರಲ್ಲೊಬ್ಬರು ಶ್ಯಾಮಲಾದೇವಿ ಇರಬೇಕು ಎಂದುಕೊಂಡಳು. ಸಮೀಪಕ್ಕೆ ಹೋಗಿ ವಂದಿಸಿ

ದಳು ಅವರೂ ಪ್ರತಿವಂದನೆ ಮಾಡಿದರು. ರಮಾದೇವಿಯೇ ಮೊದಲು ಮಾತನಾಡಿದಳು.

"ಇದು 'ಚಿತ್ರಕೂಟ'ದ ಶಿಶುವಿಹಾರವೇ?"

"ಹೌದು. ಇದು ಶಿಶುವಿಹಾರ. ಅದು ವನಿತಾಶ್ರಮ! ಆ ಹುಡುಗರೆಲ್ಲಾ ಬಡ ಹುಡುಗರು."

ಹತ್ತಾರು ಹುಡುಗರನ್ನು ಪ್ರೀತಿಯಿಂದ ಮಾತನಾಡಿಸಿದಳು. ಆ ಯುವತಿಯರು ರಮಾದೇವಿಯನ್ನು ಕರೆದು, ಆ ಶಿಶುವಿಹಾರವನ್ನೆಲ್ಲಾ ತೋರಿಸಿದರು.

ವನಿತಾಶ್ರಮಕ್ಕೆ ಕರದೊಯ್ದರು. ಅಲ್ಲಿ ಸುಮಾರು ಹತ್ತು ಹದಿನೈದು ಸ್ತ್ರೀಯರಿದ್ದರು. ರಮಾದೇವಿಯು ಅವರನ್ನು ಯಥೋಚಿತವಾಗಿ ಮಾತನಾಡಿಸಿದಳು.

ರಮಾದೇವಿಯು "ದೇವಿ! ಈ ಶಿಶುವಿಹಾರ, ವನಿತಾಶ್ರಮಗಳು ಬಹಳ ಚೆನ್ನಾಗಿವೆ. ಇಂಥಾ ಸೇವೆ ಮಾಡುವುದಕ್ಕೆ ಭಾಗ್ಯವಿರಬೇಕು. ಈ ಸಂಸ್ಥೆಯ ಖರ್ಚಿಗೆ ಏನು ಮಾಡುತ್ತೀರಮ್ಮ?" ಎಂದು ಕೇಳಿದಳು.

"ಅದಕ್ಕೇನೂ ಕಷ್ಟವಾಗುತ್ತಿಲ್ಲ. ದಿನ ದಿನವೂ ಹೋಗಿ ಯಾರನ್ನೂ ತೊಂದರೆಪಡಿಸುವುದಿಲ್ಲ. ಇದಕ್ಕೆ ಕೆಲವರು ಸಂರಕ್ಷಕರಿದ್ದಾರೆ. ಅವರುಗಳು ವರ್ಷಕ್ಕೊಂದು ಬಾರಿ ಚಂದಾ ಹಾಕಿ ಖರ್ಚಿಗೆ ಬೇಕಾದಷ್ಟು ಹಣ ಒದಗಿಸಿ ಬಿಡುತ್ತಾರೆ."

"ಬಹಳ ಸಂತೋಷ! ಈ ಸಂಸ್ಥೆಯ ಸ್ಥಾಪಕರು ಶ್ಯಾಮಲಾದೇವಿಯವರು ನೀವೇನೋ?"

ತಾರಾ ಹೇಳಿದಳು: "ಹೌದು! ಅವರೇ ಶ್ಯಾಮಲಾದೇವಿ! ನೀವಾರಮ್ಮ? ಯಾರ ಮನೆಯವರು. ಪರಿಚಯ ಕೊಡಲೇ ಇಲ್ಲ."

ರಮಾ ಸ್ವಲ್ಪ ತಬ್ಬಿಬ್ಬಾದಳು. ಕ್ಷಣದಲ್ಲಿ ಸರಿ ಹೋಗಿ "ನಾನು ಲಕ್ಷ್ಮೀಪುರದಲ್ಲೇ ಇದೇನೆ. ಇಂಡಿಯಾ ಟ್ರೇಡ್ಸ್ ಕಂಪನಿಯವರ ಮನೆಯವರು" ಎಂದಳು.

"ರಂಗರಾಯರ ಹೆಂಡತಿ! ಬಹಳ ಸಂತೋಷ!"

ರಮಾ ತಲೆ ತಗ್ಗಿಸಿದಳು. ತನ್ನ ಕೈಚೀಲದಿಂದ ನೂರು ರೂಪಾಯಿನ ನೋಟೊಂದನ್ನು ತೆಗೆದು ಭಕ್ತಿಯಿಂದ ಶ್ಯಾಮಲಾದೇವಿಯ ಮುಂದಿಟ್ಟು "ನಿಮ್ಮ ಆಶ್ರಮಕ್ಕೆ ನನ್ನ ಕಾಣಿಕೆ" ಎಂದು ಹೇಳಿದಳು. ಅವಳ ಕಣ್ಣುಗಳಲ್ಲಿ ದೈನ್ಯವಿತ್ತು!

ಶ್ಯಾಮಲಾ ಅದನ್ನು ಕೈಗೆ ತೆಗೆದುಕೊಂಡಳು; "ಒಳ್ಳೆಯದು, ನಿಮಗೆ ಶುಭವಾಗಲಿ!" ಎಂದಳು.

ರಮಾ ತಾರೆಯ ಕಡೆ ತಿರುಗಿ "ತಮ್ಮ ಹೆಸರೇನು?" ಎಂದು ಕೇಳಿದಳು.

ತಾರಾ ನಗುತ್ತಾ "ನನ್ನ ಹೆಸರೇ! ತಾರಾದೇವಿ!" ಎಂದಳು

ರಮಾ ಇಬ್ಬರಿಗೂ ಅಭಿವಂದಿಸಿ ಅಪ್ಪಣೆ ಪಡೆದು ಹೊರಟಳು. ಮತ್ತೆ ಎರಡು ಹೆಜ್ಜೆ ಹಿಂದಕ್ಕೆ ಬಂದು "ತಾರಾದೇವಿ! ನಾನು ಆಗಾಗ 'ಚಿತ್ರಕೂಟ'ಕ್ಕೆ ಬಂದುಹೋಗಬಹುದೇ?" ಎಂದು ಕೇಳಿದಳು.

ಶ್ಯಾಮಲಾ ನಗುತ್ತಾ "ಯಾವಾಗ ಬೇಕಾದರೂ ಬರಬಹುದು. ಇದು ಬಡಮಕ್ಕಳ ಅನಾಥ ಹೆಂಗಸರ ಆಶ್ರಮ!" ಎಂದಳು.

ರಮಾ ಮತ್ತೊಮ್ಮೆ ವಂದಿಸಿ ಹೊರಟುಹೋದಳು.

ಅವಳು ಮನೆಯ ವರೆಗೆ ತಲೆ ಬಗ್ಗಿಸಿಕೊಂಡೇ ನಡೆಯುತ್ತಾ ಹೋದಳು. ಅವಳ ಮನಸ್ಸನ್ನು ಶ್ಯಾಮಲಾದೇವಿಯ ಗಂಭೀರ ಮೂರ್ತಿಯು ಆಕ್ರಮಿಸಿತ್ತು; ಹೃದಯದಲ್ಲಿ ಆ ಇಬ್ಬರು ಸ್ತ್ರೀಯರ ಸರಳ ಸಂಭಾಷಣೆ ಪ್ರತಿಧ್ವನಿಸುತ್ತಿತ್ತು! 'ಈ ಶ್ಯಾಮಲಾದೇವಿ ನಮ್ಮ ರಾಯರ ಧರ್ಮಪತ್ನಿಯೇ! ಇವರು ನಮ್ಮ ಅಕ್ಕನೇ! ವಿಧಿವಿಲಾಸ!' ಎಂದುಕೊಂಡಳು.

ಮನೆಯನ್ನು ತಲಪಿದಾಗ ಇನ್ನೂ ಕತ್ತಲಾಗಿರಲಿಲ್ಲ. ರಂಗರಾಯನು ಮನೆಗೆ ಬಂದಿರಲಿಲ್ಲ. ರಮಾ ಮಹಡಿಯ ಮೇಲೆ ಹೋಗಿ ತನ್ನ ಕೋಣೆಯಲ್ಲಿ ಕುಳಿತಳು. ಪುಸ್ತಕಗಳ ಕಪಾಟಿನಿಂದ ಒಂದು ಪುಸ್ತಕವನ್ನು ಕೈಗೆ ತೆಗೆದುಕೊಂಡಳು. ಅದು ಬಂಕಿಂಚಂದ್ರರ 'ದೇವೀ ಚೌಧುರಾಣಿ!' ಆ ಪುಸ್ತಕವನ್ನು ಎಷ್ಟೋ ಬಾರಿ ಅವಳು ಓದಿದ್ದಳು. ಇಂದು ಪುನಃ ಅದೇ ಪುಸ್ತಕ....ಓದ ತೊಡಗಿದಳು.

ರಂಗರಾಯನು ಇಂದು ಬೇಗನೇ ಮನೆಗೆ ಬಂದನು. ಏಕೋ ಬಹಳ ಹರ್ಷಚಿತ್ತನಾಗಿದ್ದನು. ಮದಿರಾದೇವಿಯ ಅನುಗ್ರಹವಾಗಿರಲಿಲ್ಲ.

ರಮಾ "ಇದೇನು ಇಂದು ಬಹಳ ಹರ್ಷಚಿತ್ತರಾಗಿದೀರಿ?" ಎಂದು ಕೇಳಿದಳು.

"ಏನು? ರಮಾ ನಾನು ಎಂದು ತಾನೇ ಹರ್ಷಚಿತ್ತನಾಗಿರುವುದಿಲ್ಲ. ನಿನ್ನನ್ನು ನೋಡುತ್ತಲೇ ನನ್ನ ಹೃದಯದಲ್ಲಿ ಹರ್ಷವು ಉಕ್ಕೇಳುತ್ತದೆ. ನೀನು ಅಂಥಾ ಸುರಸುಂದರಿ! ನೀನು ಬುದ್ಧಿವಂತಳು!—ನಿಜ! ನಾನಿಂದು ಹೆಚ್ಚು ಹರ್ಷದಿಂದ ಇದೇನೆ. ಇಂದು ಸರ್ಕಾರದಿಂದ ಮೂವತ್ತು ಲಕ್ಷ ರೂಪಾಯಿಗಳ ಆರ್ಡರು ಬಂದಿದೆ. ಮೂರು ತಿಂಗಳಿಂದ ಇದೇ ವಿಷಯ ಅನಿಶ್ಚಿತವಾಗಿತ್ತು. ಇಂದು ಆರ್ಡರು ಬಂದೇಬಿಟ್ಟಿತು."

"ಸಂತೋಷ!"

ರಂಗರಾಯನು ಸೋಫಾದ ಮೇಲೆ ಕುಳಿತುಕೊಂಡು "ರಮಾ ಹಾಗಾದರೆ ನೀನೆಲ್ಲಿಯೂ ಹೊರಗೆ ಹೋಗಲಿಲ್ಲವೆ?" ಎಂದು ಕೇಳಿದ.

"ಹೋಗಿದ್ದೆ. ಕಾಲು ನಡಗೆಯಲ್ಲೇ ಸ್ವಲ್ಪ ದೂರ ಹೋಗಿ ಬಂದೆ."

"ಎತ್ತ ಕಡೆ ಹೋಗಿದ್ದೆ?"

"ನಾನಿಂದು 'ಚಿತ್ರಕೂಟ'ಕ್ಕೆ ಹೋಗಿದ್ದೆ."

ರಂಗರಾಯನು ಎದ್ದು ಕುಳಿತನು. "ರಮಾ ಇದೇನು ಆಶ್ಚರ್ಯ?" ಎಂದನು.

"ಅದರಲ್ಲಿ ಆಶ್ಚರ್ಯವೇನಿದೆ. ಆ ರಸ್ತೆಯಲ್ಲಿ ಹೋದೆ. 'ಚಿತ್ರಕೂಟ'ದ ಮುಂದೆ ಹೋದೆ. ಆ ಕಾಂಪೌಂಡಿನಲ್ಲಿ ಹುಡುಗರು ಆಡುತ್ತಿದ್ದರು. ಅದು ಶ್ಯಾಮಲಾದೇವಿಯ ಆಶ್ರಮವೆಂದು ಭಾಸವಾಯಿತು. ಕಾಲುಗಳು ತನ್ನಷ್ಟಕ್ಕೇ ಒಳಗೆ ಎಳೆದುಕೊಂಡು ಹೋದುವು. ಹೊರಗಡೆಯೇ ಇಬ್ಬರು ತರುಣಿಯರು ನಿಂತಿದ್ದರು."

"ಅವರು ಶ್ಯಾಮಲಾ ಮತ್ತು ತಾರಾ! ಅವರೊಡನೆ ಮಾತನಾಡಿದೆಯೇನು? ಏನು ಹೇಳಿದರು?"

" ಮಾತನಾಡಿದೆ. ಸರಳವಾಗಿ ಮಾತನಾಡಿದರು. ಎಷ್ಟೋ ಮರ್ಯಾದೆ ಮಾಡಿದರು. "

" ನೀನಾರೆಂಬುದು ಅವರಿಗೆ ತಿಳಿಯಿತೇನು ? "

" ತಿಳಿಯದೇ ಏನು ? ಚೆನ್ನಾಗಿಯೇ ತಿಳಿದಿತ್ತೆಂದು ನನ್ನ ಮನಸ್ಸಿಗೆ ಭಾಸವಾಯಿತು ! "

" ನೀನು ರಂಗರಾಯನ ಪತ್ನಿಯೆಂದು ಹೇಳಿಕೊಂಡೆಯಾ ? "

" ಹೇಳಬಾರದಾಗಿತ್ತೇನು ? ನೀವು ಆ ವಿಷಯ ಅವರಿಗೆ ಗೊತ್ತಾಗ ಬಾರದೆಂದು ಇದ್ದೀರೇನು ? "

" ಏಕೆ ? ಗೊತ್ತಾಗಬೇಕು. ಶ್ಯಾಮಲೆಯ ಮನಸ್ಸು ಚುಚ್ಚಬೇಕು. ಅದಿರಲಿ, ಅವಳೇನು ಹೇಳಿದಳು ? "

" ಏನೂ ಇಲ್ಲ. ಅವರ ಶಿಶುವಿಹಾರದ ಮಾತು. ವನಿತಾಶ್ರಮದ ಮಾತು. ಅಷ್ಟೇ ! "

" ಅದೊಂದು ಜಂಭ ! ಇರಲಿ ! ನಮ್ಮ ಮನೆಯ ಮಾತೇನೂ ಬರಲಿಲ್ಲವೇನು ? "

" ಅದೇನೂ ಇಲ್ಲ ! ನಮ್ಮನಮ್ಮದು ಪ್ರಥಮ ಪರಿಚಯ ! ಒಟ್ಟಿನಲ್ಲಿ ಅವರು ಬಲು ಒಳ್ಳೆಯವರು ಅಷ್ಟೆ ! "

" ಹೌದು ! ಚೆನ್ನಾಗಿದೆ. ನೀನು ಅವಳ ಸವತಿ. ನನ್ನ ಐಶ್ವರ್ಯಕ್ಕೆ ಇಂದು ಏಕಮಾತ್ರ ಅಧಿಕಾರಿಣಿ ! ನಿನ್ನನ್ನು ನೋಡಿ ಅವಳಿಗೆ ಅಸೂಯೆ ಇಲ್ಲದೇ ಇರುವುದೇ ? "

" ಅಸೂಯೆಯಿಲ್ಲ. ಅಭಿಮಾನವನ್ನೇ ತೋರಿಸಿದರು. "

" ನಿನಗೇನು ಗೊತ್ತು ! ಅವಳ ಗುಣ. ಅವಳು ಚರಿತ್ರಹೀನೆ. ಕುಲಟೆ ! ನಮ್ಮ ಮನೆಯನ್ನು ಬಿಟ್ಟು ಹೋಗುವಾಗ ಅವಳು ಹೇಗೆ ಹೋದಳು ಬಲ್ಲೆಯಾ ? "

" ಛಿ. ಛಿ. ಅವರು ಗಂಭೀರಸ್ಥರು. ನಿಮಗೆ ಯಾರೋ ದೂರು ಹೇಳಿ ಮನಸ್ಸು ಕೆಡಿಸಿದ್ದಾರೆ. ಈಗ ನೀವು ಅವರನ್ನೊಂದು ಬಾರಿ ನೋಡಿದರೆ

ನೀವೇ ಒಪ್ಪುವಿರಿ. ಆ ಶ್ಯಾಮಲಾದೇವಿಯವರು ಈ ಮನೆಯಲ್ಲಿದ್ದಾಗ ಹೇಗಿದ್ದರು ? "

" ಆ ಶ್ಯಾಮಲಾ ಜೊತೆಯಲ್ಲಿ ನಾನು ಪಟ್ಟ ಪಾಡು ದೇವರೇ ಬಲ್ಲ. ಅವಳಿಲ್ಲಿದ್ದಿದ್ದರೆ ನಿನ್ನ ಗತಿ ಏನಾಗುತ್ತಿತ್ತು ? "

" ಶ್ಯಾಮಲಾದೇವಿಯವರು ಈ ಮನೆಗೆ ಬರುವುದಾದರೆ ಸಂತೋಷ ವಾಗಿ ಕರತನ್ನಿ ! ಈ ಮನೆ ಬೆಳಕಾಗುತ್ತದೆ. ನಾನು ಅವರ ತಂಗಿಯಾಗಿ ರುತ್ತೇನೆ. "

" ಅಯ್ಯೋ ಹುಚ್ಚಿ ! ಆ ಮಾರಿಯನ್ನು ಮನೆಗೆ ಕರತರುವುದೇ. ಊರಿನವರೆಲ್ಲಾ ಏನಂದಾರು ? ನಿನಗೆ ಹುಚ್ಚು ಹಿಡಿದಿದೆಯೇನು ? "

" ಶ್ಯಾಮಲಾದೇವಿ ಇಲ್ಲಿ ಬಂದಿದ್ದರೆ ಈ ಮನೆಯೂ ಶೋಭಿಸುತ್ತದೆ. ಈ ಊರೆಲ್ಲವೂ ನಿಮ್ಮನ್ನು ಕೊಂಡಾಡುತ್ತದೆ. ನನಗೂ ಎಷ್ಟೋ ಗೌರವ ಬರುತ್ತದೆ. "

" ರಮಾ ! ನೀನು ಪ್ರಪಂಚ ಜ್ಞಾನವಿಲ್ಲದ ಹುಡುಗಿ. ನಿನಗೇನೂ ಗೊತ್ತಿಲ್ಲ. ಸಾಕು, ಇನ್ನು ಆ ಮಾತು ನಿಲ್ಲಿಸು ! ಸ್ವಲ್ಪ ಮದ್ಯವನ್ನು ತಂದು ಕೊಡು. "

" ತಂದು ಒಪ್ಪಿಸುತ್ತೇನೆ. ಸ್ವಲ್ಪ ತಡೆದುಕೊಳ್ಳಿರಿ ! ಇಂದು ಈ ಮಾತು ಬಂದಿದೆ. ಪೂರ್ತಾ ಆಡಿ ಮುಗಿಸಿಬಿಡೋಣ. ನೀವೇ ಈ ಮಾತನಾಡಲು ಇವತ್ತು ಪೂರಾ ಅವಕಾಶ ಕೊಟ್ಟಿದ್ದೀರಿ! ಶ್ಯಾಮಲಾದೇವಿಯರು ಈ ಮನೆ ಯಲ್ಲಿ ಎಷ್ಟು ದಿನ ಇದ್ದರು ? "

" ಐದಾರು ವರ್ಷಗಳು ! "

" ನಮ್ಮ ಅತ್ತೆಯವರಿದ್ದಾಗ ಎಂದಾದರೂ ಅವರ ಮನಸ್ಸಿಗೆ ಅಪ್ರಿಯ ವಾಗಿ ಅವರು ನಡೆದುಕೊಂಡರೇ ? "

" ನಿಮ್ಮ ಅತ್ತೆಗೂ ನಿನ್ನ ಹಾಗೆಯೇ ಹುಚ್ಚು ಹಿಡಿದಿತ್ತು. ಅವರು ಸಾಯುವಾಗಲೂ ಶ್ಯಾಮಲಾ—ಶ್ಯಾಮಲಾ ಎನ್ನುತ್ತಲೇ ಸತ್ತರು. ನನ್ನನ್ನೇ ಬೈಯ್ಯುತ್ತಿದ್ದರು. "

" ನೀವೇ ಅವರನ್ನು ಮನೆ ಬಿಟ್ಟು ಓಡಿಸಿದಿರೋ ? ಅವರೇ ಹೊರಟು ಹೋದರೋ ? "

" ನಾನು ಬೇಡ ಬೇಡವೆಂದರೂ ಅವಳಾಗಿಯೇ ಹೊರಟುಹೋದಳು. ನಗನಾಣ್ಯಗಳನ್ನೆಲ್ಲಾ ಇಲ್ಲಿಯೇ ಬಿಟ್ಟು ಏಕವಸ್ತ್ರಧಾರಿಣಿಯಾಗಿ ಹೊರಟು ಹೋದಳು. "

" ಈ ಮನೆಯಲ್ಲಿ ಅವರ ಪಟವಿದೆಯೇನು ? "

" ಇವೆ. ಬೇಕಾದಷ್ಟಿವೆ. "

ರಂಗರಾಯನು ಸೋಫಾದ ಮೇಲೆ ಕುಳಿತಿದ್ದವನೆದ್ದನು. ತನ್ನ ಕೋಣೆಯ ಪಕ್ಕದ ಕೋಣೆಯ ಬೀಗವನ್ನು ತೆಗೆದು ರಮಾದೇವಿಯನ್ನು ಒಳಗೆ ಕರೆದುಕೊಂಡು ಹೋದನು. ಅಲ್ಲಿ ಶ್ಯಾಮಲಾದೇವಿಯ ದೊಡ್ಡ ತೈಲ ಚಿತ್ರವಿತ್ತು. ಅದರ ಮುಂದೆ ರಮಾದೇವಿಯನ್ನು ನಿಲ್ಲಿಸಿದನು. ರಮಾದೇವಿಯು ಅಪ್ರತಿಭಳಾಗಿ ಎಳೆಯ ಮಗುವಿನಂತೆ ನೋಡುತ್ತ ನಿಂತಳು.

" ಪಕ್ಕದಲ್ಲಿದ್ದ ದೊಡ್ಡ ಬೀರುವನ್ನು ತೆಗೆದು ನೋಡು ! ರಮಾ. ಈ ಸೀರೆಗಳೆಲ್ಲಾ ಅವಳದು. ಆ ಕಬ್ಬಿಣದ ಪೆಟ್ಟಿಗೆಯಲ್ಲಿರುವ ಆಭರಣಗಳೆಲ್ಲಾ ಅವಳದೇ ! ಈ ಕೋಣೆಯಲ್ಲಿರುವ ಎಲ್ಲ ಪದಾರ್ಥಗಳೂ ಅವಳದೇ ! "

" ಇವೆಲ್ಲಾ ಬಹಳ ಚೆನ್ನಾಗಿವೆ. "

" ಇದೆಲ್ಲಾ ನಿನಗೆ ಬೇಕೇನು ? "

" ಇಲ್ಲ ! ಇಲ್ಲ. ಇದೆಲ್ಲಾ ಅವರದು. ಅದು ನನಗೆ ಬೇಡ ! ಅವರೇ ಬಂದು ಈ ಕೋಣೆಯನ್ನು ಅಲಂಕರಿಸಿದರೆ ಎಷ್ಟು ಚೆನ್ನಾಗಿರುತ್ತೆ ! "

" ಅದಿಲ್ಲ. ಇನ್ನು ಆ ಆಸೆ ಇಲ್ಲವೇ ಇಲ್ಲ ! "

" ಹಾಗಾದರೆ ಇದನ್ನೆಲ್ಲಾ ಏಕೆ ಇಷ್ಟು ಅಚ್ಚುಗಟ್ಟಾಗಿ ಇಟ್ಟಿದ್ದೀರಿ ? "

" ಸಮಯ ನೋಡಿ ಇದನ್ನೆಲ್ಲಾ ಅವಳಿಗೇ ಕೊಟ್ಟುಬಿಡಬೇಕು. ಅವಳ ದುರ್ನಡತೆ, ಅಹಂಕಾರ ಇದನ್ನೆಲ್ಲಾ ನೋಡಿ ನೋಡಿ, ನನ್ನ ಮನಸ್ಸು ಕುದಿಯುತ್ತಿದ್ದರೂ ನನ್ನನ್ನು ನಂಬಿ ಬಂದು, ನನ್ನ ಕೈಹಿಡಿದು ಒಂದು ಕುರುಡು ಕಾಸನ್ನೂ ತೆಗೆದುಕೊಳ್ಳದೇ ಗೃಹ ಪರಿತ್ಯಾಗ ಮಾಡಿ ಹೊರಟುಹೋದುದು

ನನ್ನ ಮನಸ್ಸು ಚುಚ್ಚುತ್ತಿದೆ."

"ಅದು ದೊಡ್ಡ ಮನಸ್ಸು! ಇದನ್ನೆಲ್ಲಾ ಅವರಿಗೆ ಯಾವಾಗ ಒಪ್ಪಿಸುವಿರಿ?"

"ರಮಾ! ಎಂದಿಗೋ ನಾನರಿಯೆ! ಅವಳು ಗತಿ ಕೆಟ್ಟು ಅಲೆಯುವಾಗ, ಗೃಹತ್ಯಾಗ ಮಾಡಿದ ಪರಿತಾಪದಿಂದ ಹಂಬಲಿಸುವಾಗ. ಇದನ್ನೆಲ್ಲಾ ಅವಳಿಗೆ ಕೊಟ್ಟು, ಆಮರಣಾಂತ ಜೀವಿಸುವಷ್ಟು ಹಣವನ್ನೂ ಕೊಡಬೇಕೆಂದಿದ್ದೇನೆ."

ರಮಾ ನಕ್ಕಳು. "ಅದೆಲ್ಲಾ ಭ್ರಾಂತಿ! ನಿಮ್ಮ ಮನಸ್ಸು ಒಳ್ಳೆಯದು. ನಾಳೆ ಬೆಳಗ್ಗೆ ನಾವಿಬ್ಬರೂ 'ಚಿತ್ರಕೂಟ'ಕ್ಕೆ ಹೋಗೋಣ ಬನ್ನಿ! ನಾನು ಅವರನ್ನು ಮನೆಗೆ ಬರುವಂತೆ ಪ್ರಾರ್ಥಿಸುತ್ತೇನೆ. ಅವರು ಈ ಮನೆಯಲ್ಲಿದ್ದುಕೊಂಡೇ ಆ ಲೋಕಸೇವೆ ಮಾಡಲಿ!"

"ಅದೊಂದು ಭ್ರಾಂತಿ! ಅವಳೇಕೆ ಇಲ್ಲಿಗೆ ಬರುತ್ತಾಳೆ?"

"ನಿಮಗಾಗಿ ಬಾರದಿರಬಹುದು. ನನ್ನದೇನೂ ತಪ್ಪಿಲ್ಲ. ನನಗಾಗಿ ಬರಬಹುದು."

"ನೀನು ಹೋಗಲೂ ಬೇಡ! ನಾನು ಬರುವುದೂ ಇಲ್ಲ. ನನ್ನ ಪ್ರತಿಜ್ಞೆಯನ್ನೂ ನಾನು ಬದಲಾಯಿಸುವುದಿಲ್ಲ."

ಇಬ್ಬರೂ ಆ ಕೋಣೆಯನ್ನು ಬಿಟ್ಟು ಹೊರಗೆ ಬಂದರು. ರಂಗರಾಯನು ಆ ಕೋಣೆಯ ಬೀಗ ಹಾಕಿ ತನ್ನ ಕೋಣೆಯಲ್ಲಿ ಸೋಫಾದ ಮೇಲೆ ಕುಳಿತನು. ರಮಾದೇವಿಯನ್ನೂ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು.

ರಮಾದೇವಿ ಹೇಳಿದಳು. "ನಾನು ಈ ದಿನ ಆ ಆಶ್ರಮಕ್ಕೆ ಒಂದುನೂರು ರೂಪಾಯಿ ಕೊಟ್ಟೆ!"

"ನೀನೇಕೆ ಕೊಟ್ಟೆ?"

"ಅದು ನನ್ನ ಹಣ. ನನ್ನ ಸಂಬಳದಲ್ಲಿ ಮಿಗಿಸಿಟ್ಟುಕೊಂಡಿದ್ದ ಹಣ. ನನಗೆ ಅದನ್ನು ಕೊಡಲು ಅಧಿಕಾರವಿಲ್ಲವೆ?"

"ಇಲ್ಲದೇ ಏನು? ನಿನ್ನ ಹಣವನ್ನಾದರೂ ಕೊಡಬಹುದು, ನನ್ನ ಹಣ

ವನ್ನಾದರೂ ಕೊಡಬಹುದು. ಆದರೆ ಆ ಆಶ್ರಮಕ್ಕೆ ಕೊಡಕೂಡದು. ಅದೆಲ್ಲಾ ಹಾಳಾಗಿ ಹೋಗಬೇಕು. ಆಗಲೇ ಅವಳಿಗೆ ಬುದ್ಧಿ ಬರುತ್ತೆ."

"ನಿಮ್ಮ ಭಾವನೆಗಳೆಲ್ಲಾ ವಿಚಿತ್ರವಾಗಿದೆ. ನೀವು ಹಠವಾದಿಗಳು. ಬೇಕಾದ್ದು ಮಾಡಿಕೊಳ್ಳಿ! ನನಗೇನು?"

ಇಬ್ಬರೂ ಹಾಗೆಯೇ ಮಾತನಾಡುತ್ತಾ ಊಟಕ್ಕೆದ್ದರು. ಊಟ ಮಾಡಿದರು. ಬಂದು ಕುಳಿತುಕೊಂಡು ಎಷ್ಟೋ ಮಾತನಾಡಿದರು.

ರಂಗರಾಯನು ಈ ರಮಾದೇವಿಯು ಸಾಮಾನ್ಯಳಲ್ಲ. ಇವಳಿಗೆ ಪ್ರಪಂಚದ ವಿಷಯಗಳೆಲ್ಲಾ ಗೊತ್ತಿದೆ. ನನ್ನ ಮೇಲೆಯೇ ಅಧಿಕಾರ ಮಾಡುತ್ತಾಳೆ. ಮಾಡಲಿ! ಅದು ಪ್ರೇಮದ ಅಧಿಕಾರ!, ಎಂದುಕೊಂಡನು.

ರಮಾದೇವಿಯ ಕಲ್ಪನೆಗಳೇ ಬೇರೆ! 'ಆ ಶ್ಯಾಮಲಾದೇವಿಯು ದೇವರಂಥಾ ಹೆಂಗಸು, ಅವಳು ಪೂರ್ತಿಯಾಗಿ ನನ್ನ ಮನಸ್ಸನ್ನು ಆಕರ್ಷಿಸಿದೆ. ಅವಳು ಸರಳ ಹೃದಯಳು. ಈ ನಮ್ಮ ಪತಿದೇವನು ಅವಳ ಮನಸ್ಸನ್ನು ಒಡೆದು ಚೂರು ಚೂರು ಮಾಡಿಬಿಟ್ಟಿದ್ದಾನೆ. ನಾನು ಅವಳನ್ನು ವಶಪಡಿಸಿಕೊಳ್ಳಬಲ್ಲೆ! ಏನಾದರೂ ಮಾಡಿ ಆ ಶ್ಯಾಮಲಾದೇವಿಯನ್ನು ಒಲಿಸಿ ಈ ಮನೆಗೆ ಕರೆತರಬೇಕು. ಶ್ಯಾಮಲಾದೇವಿಯೇ ಈ ಮನೆಯ ಯಜಮಾನಿ. ನಾನು ಅವಳ ತಂಗಿ! ನಾವಿಬ್ಬರೂ ಆ 'ಚಿತ್ರಕೂಟ'ವನ್ನು ನಡಸಬೇಕು. ಈ ರಂಗರಾಯನು ನಾವು ಹೇಳಿದಂತೆ ಕೇಳಿಕೊಂಡು ಇರುತ್ತಾನೆ, ಎಂದುಕೊಂಡಳು.

ಅವಳು ನಾಲ್ಕಾರು ದಿನಗಳನ್ನು ಬಿಟ್ಟು ಪುನಃ 'ಚಿತ್ರಕೂಟ'ಕ್ಕೆ ಕೆಲವು ದಿನ ಭೇಟಿ ಕೊಟ್ಟಳು. ಯಥಾಪ್ರಕಾರ ಮಾತುಕಥೆಗಳು ದೇಶಸೇವೆ, ಬಡವರ ಸಮಸ್ಯೆ, ಸ್ತ್ರೀಯರ ದುರವಸ್ಥೆ ಇತ್ಯಾದಿ ವಿಷಯಗಳ ಮೇಲೆ ಮಾತುಗಳು ನಡೆಯುತ್ತಿದ್ದುವು. ಶ್ಯಾಮಲಾದೇವಿಯ ಮಾತುಗಳೆಲ್ಲಾ ಅನುಭವಪೂರ್ಣವಾಗಿರುತ್ತಿದ್ದುವು. ಆಕೆ ತುಂಬ ದಯಾಮಯಳಾಗಿ ಕಾಣುತ್ತಿದ್ದಳು. ಯಾರಿಂದಲೂ ಇದನ್ನೆಲ್ಲಾ ಸರಿಪಡಿಸಲು ಸಾಧ್ಯವಿಲ್ಲ. ಕಷ್ಟಪಡುವವರು ಕಷ್ಟದಲ್ಲಿಯೇ ಮಣ್ಣಾಗಿ ಹೋಗುತ್ತಾರೆ. ಎಂಬ ನಿರಾಶಾವಾದವನ್ನು ಆಕೆ

ಹೇಳುತ್ತಿದ್ದಳು.

ರಮಾದೇವಿಯು ಹೆಚ್ಚು ಮಾತನಾಡಲಾಗುತ್ತಿರಲಿಲ್ಲ. ಅವಳು ಎಲ್ಲ ವನ್ನೂ ಭಕ್ತಿಯಿಂದ ಕೇಳಿಕೊಂಡು ಬರುತ್ತಿದ್ದಳು.

ರಮಾದೇವಿಗೆ ಒಂದು ಹೆಬ್ಬಯಕೆ ಇದ್ದಿತು. ಈ ಶ್ಯಾಮಲಾದೇವಿಯು ಏಕೆ ಗೃಹತ್ಯಾಗ ಮಾಡಿದಳು, ಎಂಬುದನ್ನು ಅವಳ ಬಾಯಿಂದಲೇ ಕೇಳ ಬೇಕೆಂಬ ಆಸೆಯಿತ್ತು. ಆದರೆ ಧೈರ್ಯವಾಗಲಿಲ್ಲ. ಆ ಆಸೆಯು ಮನಸ್ಸಿನಲ್ಲಿಯೇ ಇಂಗುತ್ತಿತ್ತು ! ತಾನು 'ಚಿತ್ರಕೂಟ'ಕ್ಕೆ ಹೋದದ್ದು ಬಂದಿದ್ದು ರಂಗರಾಯ ನೊಡನೆ ಹೇಳುತ್ತಿರಲಿಲ್ಲ. ರಂಗರಾಯನು ತಾನಾಗಿ ಶ್ಯಾಮಲಾದೇವಿಯ ಮಾತೆತ್ತಿದರೆ ಒಂದೊಂದು ಬಾರಿ ಉತ್ತರ ಕೊಡುತ್ತಿದ್ದಳು. ಒಂದೊಂದು ಬಾರಿ ಸುಮ್ಮನಿದ್ದು ಬಿಡುತ್ತಿದ್ದಳು.

ರಂಗರಾಯನು ವ್ಯಾಪಾರದ ನಿಮಿತ್ತ ಬೊಂಬಾಯಿಗೆ ಹೋಗಿದ್ದನು. ಒಂದೇ ದಿನದಲ್ಲಿ ವಿಮಾನದಲ್ಲಿ ಬೆಂಗಳೂರಿಂದ ಬೊಂಬಾಯಿಗೆ ಹೋಗಿ ಬಂದು ಬಿಡುವುದಾಗಿ ರಮಾದೇವಿಯೊಡನೆ ಹೇಳಿ, ಅವಳನ್ನು ಮೈಸೂರಿನಲ್ಲಿಯೇ ಬಿಟ್ಟು ಹೋದನು.

ರಮಾದೇವಿಯು ಆ ದಿನವೆಲ್ಲಾ 'ಚಿತ್ರಕೂಟ' ದಲ್ಲಿರಬೇಕೆಂದು ನಿಶ್ಚಯ ಮಾಡಿಕೊಂಡು, ಕಾಫಿ ತೆಗೆದುಕೊಂಡು ಕಾಲು ನಡಗೆಯಲ್ಲಿಯೇ 'ಚಿತ್ರಕೂಟ'ಕ್ಕೆ ಹೋದಳು.

ಆ ದಿನ ತಾರಾ ಇರಲಿಲ್ಲ. ಶ್ಯಾಮಲಾದೇವಿಯೊಬ್ಬಳೇ ಇದ್ದಳು. ರಮಾದೇವಿಯು 'ಚಿತ್ರಕೂಟ'ಕ್ಕೆ ಹೋಗುತ್ತಲೇ ಆಕೆಯನ್ನು ಶ್ಯಾಮಲಾ ಆದರದಿಂದ ಸ್ವಾಗತಿಸಿದಳು.

ರಮಾದೇವಿಯು ಬಹಳ ವಿನಯದಿಂದ "ಶ್ಯಾಮಲಾದೇವಿ ! ನಿಮ್ಮೊಡನೆ ಅಂತರಂಗ ಸಂಭಾಷಣೆ ಮಾಡಬೇಕೆಂದು ಕೆಲವು ತಿಂಗಳುಗಳಿಂದ ನನ್ನ ಮನಸ್ಸು ತುಡುಕುತ್ತಿದೆ" ಎಂದು ಹೇಳಿದಳು.

ಶ್ಯಾಮಲಾದೇವಿಯು ಕಣ್ಣರಳಿಸಿದಳು. ಅವಳ ಮನಸ್ಸಿನ ಮೇಲೆ ಯಾವುದೋ ಒಂದು ಚಿತ್ರವು ಸ್ಫುರಿಸತೊಡಗಿತು. ಆ ಮನಸ್ಸನ್ನು ಸೆಳೆದು

ಹಿಡಿದುಕೊಂಡು, ಸಮಾಧಾನದಿಂದ "ಅದಕ್ಕೇನು ರಮಾದೇವಿ! ನೀವು ಯಾವಾಗ ಬೇಕಾದರೂ ಮಾತನಾಡಬಹುದಿತ್ತು. ಅದಕ್ಕೆ ಅಡ್ಡಿಯೇನಿದೆ?" ಎಂದಳು.

ಅವರಿಬ್ಬರೂ ಒಂದು ಕೋಣೆಯಲ್ಲಿ ಕುಳಿತು ಮಾತನಾಡತೊಡಗಿದರು.

"ಶ್ಯಾಮಲಾದೇವಿ! ನನಗೂ ನಿಮಗೂ ಏನೋ ಋಣಾನುಬಂಧವಿದೆ. ಇಲ್ಲದಿದ್ದರೆ ನನ್ನ ಮನಸ್ಸು ನಿಮ್ಮ ಕಡೆಗೆ ಇಷ್ಟು ಸೆಳೆಯುತ್ತಿರಲಿಲ್ಲ!"

ಶ್ಯಾಮಲಾದೇವಿಯು ರಮಾದೇವಿಯ ಹಸ್ತವನ್ನು ಹಿಡಿದುಕೊಂಡು "ಹೌದು! ರಮಾದೇವಿ! ನನಗೂ ನಿಮ್ಮ ವಿಷಯದಲ್ಲಿ ಹಾಗೆಯೇ ಅನ್ನಿಸುತ್ತಿದೆ. ನಾವಿಬ್ಬರೂ ಪೂರ್ವ ಜನ್ಮದಲ್ಲಿ ತಾಯಿ ಮಕ್ಕಳೋ ಅಕ್ಕ ತಂಗಿಯರೋ ಆಗಿದ್ದೆವೆಂದು ಕಾಣುತ್ತದೆ" ಎಂದಳು.

ರಮಾದೇವಿಯು ಶ್ಯಾಮಲಾದೇವಿಯನ್ನು ಬಿಗಿಯಾಗಿ ತಬ್ಬಿಕೊಂಡು "ನೀವು ನನ್ನ ಅಕ್ಕ! ಪೂರ್ವ ಜನ್ಮದಲ್ಲಿಯೂ ನಾವು ಸಹೋದರಿಯರು. ಈ ಜನ್ಮದಲ್ಲಿಯೂ ದೇವರು ಅದೇ ಸಂಬಂಧವನ್ನು ಗಂಟು ಹಾಕಿದಾನೆ. ನೀವು ನನ್ನನ್ನೇಕೆ ದೂರ ತಳ್ಳಬೇಕು?" ಎಂದು ಕೇಳಿದಳು.

ರಮಾದೇವಿಯ ತಲೆ ಸವರುತ್ತಾ "ರಮಾದೇವಿ, ನೀನು ಹೇಳುವುದೆಲ್ಲಾ ಸರಿಯಾಗಿದೆ. ನಾನು ರಂಗರಾಯರ ಧರ್ಮಪತ್ನಿ ಎಂಬುದು ನಿನಗೆ ಗೊತ್ತಿದೆ. ಅದು ಬಹು ವರ್ಷಗಳ ಮಾತು. ನೀನು ಆ ಮನೆಗೆ ಹೊಸದಾಗಿ ಮದುವೆಯಾಗಿ ಬಂದಿದ್ದೀಯೆ, ನಮ್ಮ ಸಂಬಂಧ ಹೇಗಿತ್ತು—ಹೇಗೆ ಹರಿಯಿತು. ಎಂಬುದನ್ನು ತಿಳಿದುಕೊಳ್ಳುವ ಚಪಲ ಉಂಟಾಗಿದೆ. ಅದು ಸರಿಯೇ! ಅದರಲ್ಲಿ ಅಂತಹ ಮಹತ್ವವೇನೂ ಇಲ್ಲ. ಅದನ್ನು ನೆನೆದುಕೊಳ್ಳುವುದಕ್ಕಿಂತಲೂ, ಮರೆತುಬಿಡುವುದೇ ಒಳ್ಳೆಯದು. ನಾನು ಪೂರ್ಣವಾಗಿ ಮರತೇಬಿಟ್ಟಿದ್ದೇನೆ. ನೀನೇಕೆ ಅದನ್ನು ತಲೆಗೆ ಹಚ್ಚಿಕೊಳ್ಳುತ್ತಿ?"

"ನನಗೆ ಆ ಮದುವೆಯಾಗುವ ಮುಂಚೆಯೇ ರಾಯರಿಗೆ ಒಂದು ಲಗ್ನವಾಗಿದೆಯೆಂದೂ ಅವರು ಆ ಹೆಂಡತಿಯನ್ನು ಪೂರ್ಣವಾಗಿ ಪರಿತ್ಯಾಗ

ಮಾಡಿದ್ದಾರೆಂದೂ ತಿಳಿದಿತ್ತು. ನಿಜವಾಗಿಯೂ ಅದು ನನಗೆ ಕೊಂಚವೂ ಸಂಬಂಧಪಟ್ಟದ್ದಲ್ಲ. ನಿಮ್ಮ ಭೇಟಿಯು ನನಗೆ ಆಗಿದ್ದು ಆಕಸ್ಮಿಕ. ಈ ವನಿತಾಶ್ರಮ ಈ ಶಿಶುವಿಹಾರಗಳು ನನ್ನನ್ನು ಆಕರ್ಷಿಸಿದುವು. ನಾನು ಅನಾಥೆಯಾಗಿದ್ದೆ. ಈ ಊರಿನ ವಿಧವಾಶ್ರಮದಲ್ಲಿ ಕೆಲವು ದಿನಗಳಿದ್ದೆ. ಆ ಅನುಭವದಿಂದ ಇಂಥಾ ಆದರ್ಶ ವನಿತಾಶ್ರಮದ ಮೇಲೆ ಮಮತೆ. ಆದರಿಂದ ಇಲ್ಲಿಗೆ ಬಂದೆ. ನಿಮ್ಮ ಭೇಟಿ ಮಾಡಿದೆ. ನೀವು ರಂಗರಾಯರ ಪತ್ನಿ ಎಂದು ಅರಿತ ಮೇಲೆ ನಿಮ್ಮಲ್ಲಿ ನನಗೆ ಪೂಜ್ಯ ಬುದ್ಧಿ ಉಂಟಾಗಿದೆ. ನೀವು ಮತ್ತೆ ನಿಮ್ಮ ಮನೆಗೆ ಬರಬಾರದೇಕೆ, ಎನ್ನಿಸುತ್ತದೆ. ಅದೇ ನಿಮ್ಮಲ್ಲಿ ನನ್ನ ಪ್ರಾರ್ಥನೆ. ”

“ ಆದೆಲ್ಲಾ ಪೂರ್ವ ಸ್ಮೃತಿ. ಈಗ ಮರೆತುಬಿಟ್ಟಿದ್ದೇನೆ. ಈಗ ನಿಮ್ಮ ಮನೆಗೂ ನನಗೂ ಯಾವ ಸಂಬಂಧವೂ ಇಲ್ಲ. ನಾನು ಹುಟ್ಟಿದಂದಿನಿಂದ ಬಡವಳು. ಈ ಬಡ ಮಕ್ಕಳ ಸೇವೆಗೆ ದೇವರು ನನ್ನನ್ನು ನಿಯೋಜಿಸಿದ್ದಾನೆ. ನಾನು ಸಂತೋಷವಾಗಿದ್ದೇನೆ. ರಂಗರಾಯರು ನನ್ನನ್ನು ಪರಿತ್ಯಜಿಸಿದಾಗಲೂ ನನಗೆ ದುಃಖವಾಗಲಿಲ್ಲ. ನಾನೇ ಗೃಹತ್ಯಾಗ ಮಾಡಿದೆನೆಂದು ಹೇಳಿದರೂ ಹೇಳಬಹುದು. ರಂಗರಾಯರು ಈಗ ಸುಖವಾಗಿದ್ದಾರೆಂದು ನನ್ನ ಭಾವನೆ. ನೀವು ಸುಖವಾಗಿರಿ. ನೀನು ಪ್ರಪಂಚದ ಸಮಸ್ಯೆಗಳನ್ನು ಬಿಡಿಸಲಾರದೇ, ನನ್ನ ಮತ್ತು ಆ ಮನೆಯ ಸಂಬಂಧದಲ್ಲಿ ತೊಳಲುತ್ತಿದ್ದೀಯೆ. ಮಾನವರು ಯಾವುದೋ ಕಾರಣಗಳಿಂದ ಸೇರುತ್ತಾರೆ, ಬೇರೆಯಾಗಿ ಹೋಗುತ್ತಾರೆ. ಸೇರುವುದೆಷ್ಟು ಸಹಜವೋ- ಬೇರ್ಪಡುವುದೂ ಅಷ್ಟೇ ಸಹಜ. ಬೇರ್ಪಡೆಯಾದ ಮೇಲೆ ಆ ಸ್ಮರಣೆ ಒಳ್ಳೆಯದಾಗಲೀ, ಕೆಟ್ಟದಾಗಲೀ ಅಲ್ಪ ಸ್ವಲ್ಪ ಉಳಿದಿರುತ್ತದೆ. ಕಾಲವು ಅದನ್ನೂ ಅಳಿಸಿಬಿಡುತ್ತದೆ. ಇದನ್ನು ಚೆನ್ನಾಗಿ ಅರ್ಥ ಮಾಡಿಕೊಂಡರೆ ನಿನಗೆ ಸ್ಪಷ್ಟವಾಗುತ್ತದೆ—ನನಗೂ ಆ ಮನೆಗೂ ಏನೂ ಸಂಬಂಧವಿಲ್ಲವೆಂದು ! ”

ರಮಾ ಶ್ಯಾಮಲಾದೇವಿಯ ಕೈಹಿಡಿದುಕೊಂಡು “ ಅಕ್ಕನವರೇ, ಬಲು ಕಷ್ಟವಾಯಿತು. ಆ ವೇದಾಂತವನ್ನೆಲ್ಲಾ ಅರ್ಥ ಮಾಡಿಕೊಳ್ಳುವ ಶಕ್ತಿಯು ನನಗಿಲ್ಲ. ಪ್ರಚಂಡ ಬಿರುಗಾಳಿಯು ಗಿಡ ಬಳ್ಳಿಗಳನ್ನು ಉರುಳಿಸಿಬಿಡುವಂತೆ

ನಿಮ್ಮ ಮಾತುಗಳು ನನ್ನನ್ನು ಉರುಳಿ ಹೋಗುವಂತೆ ಮಾಡುತ್ತಿವೆ. ನಾನು ನಿಮ್ಮೊಡನೆ ವಾದ ಮಾಡುವುದಿಲ್ಲ. ನೀವು ಯಾರೇ ಆಗಿರಲಿ, ನನ್ನ ಅಕ್ಕ ! " ಎಂದು ಹೇಳಿದಳು.

ಅವಳ ಕಣ್ಣುಗಳಲ್ಲಿ ನೀರು ತುಂಬಿತು. ಶ್ಯಾಮಲಾದೇವಿಯು ರಮೆಯ ಕಣ್ಣೊರಸಿದಳು. ಅವಳನ್ನು ಸಮಾಧಾನಗೊಳಿಸಿ " ನೀನು ಒಳ್ಳೆಯ ಹುಡುಗಿ, ಸುಖವಾಗಿರು " ಎಂದು ಆಶೀರ್ವದಿಸಿದಳು.

ರಮಾದೇವಿಯ ಮನಸ್ಸು ಹಗುರವಾಯಿತು. ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ಮನಸಾರ ಮಾತನಾಡಿದ್ದೇನೆ, ಎಂಬ ಭಾವನೆ; ಶ್ಯಾಮಲಾದೇವಿಯು ತನ್ನನ್ನು ತಂಗಿ, ಎಂದು ಆತ್ಮಸಾಕ್ಷಿಯಾಗಿ ಒಪ್ಪಿಕೊಂಡಿದ್ದಾಳೆಂದು ಸಮಾಧಾನ.

## ೨೮

ರಮಾದೇವಿಗೆ ತನ್ನ ಜೀವನದಲ್ಲಿ ಬೇಸರವು ಆರಂಭವಾಗಿದೆ. ಯಾರೂ ಸ್ನೇಹಿತರಿಲ್ಲ, ಜೊತೆಗಾರರಿಲ್ಲ, ಮನೆಗೆ ಬರುವವರಿಲ್ಲ, ಹೋಗುವವರಿಲ್ಲ, ಇದೇನು ಜೀವನ. ಅವಳು ಹೀಗೆಂದುಕೊಂಡಿರಲಿಲ್ಲ. 'ಚಿತ್ರಕೂಟ'ಕ್ಕೆ ಆಗಾಗ ಹೋಗಿ ಬರುತ್ತಾಳೆ. ಅಲ್ಲಿ ಅವಳಿಗೆ ಬೇಕಾದುದೇನಿದೆ ಶ್ಯಾಮಲಾ-ತಾರಾದೇವಿಯರ ಪ್ರೀತಿ ವಿಶ್ವಾಸಗಳೇನೋ ಬೆಳೆಯುತ್ತಿವೆ. ಆದರೆ ಅವರ ಜೀವನದಲ್ಲಿ ಏನೂ ಪ್ರಕಾಶವಿರುವಂತೆ ಅವಳಿಗೆ ಭಾಸವಾಗುತ್ತಿರಲಿಲ್ಲ.

ಪತಿರಾಜ ರಂಗರಾಯ! ಅವನ ಸ್ನೇಹಿತರು ಬರುತ್ತಾರೆ. ತಿಂಡಿ ತೀರ್ಥಗಳಾಗುತ್ತವೆ. ಅವರಲ್ಲಿ ಕೆಲವರು ವ್ಯಾಪಾರದ ಜನರು. ಇನ್ನು ಕೆಲವರು ಬರೀ ಹರಟೆಯ ಜನರು. ಎಲ್ಲರೂ ರಂಗರಾಯನಿಂದ ದುಡ್ಡು ಕೀಳುವವರೇ. ಡಾಕ್ಟರೊಬ್ಬ ರಂಗರಾಯನ ಸ್ನೇಹಿತ. ಅವನು ರಮಾದೇವಿಯನ್ನು ಮಾತನಾಡಿಸುತ್ತಾನೆ. ಎಷ್ಟೋ ಅಷ್ಟೆ! ರಮಾದೇವಿಯು ದೂರ ದೂರವಾಗಿಯೇ ಇರುತ್ತಾಳೆ.

ರಂಗರಾಯನಿಗೂ ರಮಾದೇವಿಗೂ ವಯಸ್ಸಿನಲ್ಲಿ ಬಹಳ ಅಂತರ! ಅವಳು ಅವನೊಡನೆ ಯಾವಾಗಲೂ ಭಯ ಭಕ್ತಿಗಳಿಂದ ನಡೆಯಬೇಕು. ಅವನದು ಬಹಳ ಸಂದೇಹ ಪ್ರಕೃತಿ. ಅತ್ಯಂತ ಕಾಮುಕ. ಪಾನಾಸಕ್ತ. ಅವನೊಡನೆ ಬಾಳುವ ರಮಾದೇವಿಗೆ ಒಂದೊಂದು ಬಾರಿ ತನ್ನ ಜೀವನವೇ ಭಾರವಾಗುತ್ತಿತ್ತು.

ರಂಗರಾಯನಿಗೆ ಇದ್ದಕ್ಕಿದ್ದ ಹಾಗೆಯೇ ಕೋಪ ಬರುತ್ತಿತ್ತು. ವ್ಯಾಪಾರದಲ್ಲಿ ಏರುಪೇರಾದರೆ ಖಿನ್ನನಾಗುತ್ತಿದ್ದನು. ಕುಡಿದು-ಕುಡಿದು ಮಿತಿ ಮೀರಿ

ದಾಗ, ರಮಾದೇವಿಯನ್ನು ನಿಷ್ಕಾರಣವಾಗಿ ಹೊಡೆಯುತ್ತಿದ್ದನು. ಮನೆಯಲ್ಲಿದ್ದ ಪರಿಜನರಿಗೆಲ್ಲಾ ಇದು ತಿಳಿಯುತ್ತಿತ್ತು. ಅವರಿಗೆ ಮುಖ ತೋರಿಸಲು ರಮಾದೇವಿಗೆ ನಾಚಿಕೆಯಾಗುತ್ತಿತ್ತು. ಒಂದೊಂದು ಬಾರಿ ಶ್ಯಾಮಲಾದೇವಿಯನ್ನು ಉದ್ದೇಶಿಸಿ ರೇಗುತ್ತಿದ್ದನು. "ಅವಳ ಕತ್ತು ಹಿಸುಗಿ ಕೊಲ್ಲುತ್ತೇನೆ" ಎನ್ನುತ್ತಿದ್ದನು. ರಮಾದೇವಿಯನ್ನು "ನೀನೂ ವ್ಯಭಿಚಾರಿಣಿ, ಕುಲಟೆ" ಎಂದು ಬೈಯ್ಯುತ್ತಿದ್ದನು. ಆಕೆಗೆ ಆಗ ಪ್ರಾಣವನ್ನೇ ಕಳೆದುಕೊಳ್ಳಬೇಕು, ಎನ್ನಿಸುತ್ತಿತ್ತು! ರಂಗರಾಯನು ಒಂದೊಂದು ಬಾರಿ ರಮಾದೇವಿಯ ಮೇಲೆ ಬಹಳ ಪ್ರೇಮವನ್ನು ತೋರುತ್ತಿದ್ದನು. ದಾಸಾನುದಾಸನಾಗಿ ವರ್ತಿಸುತ್ತಿದ್ದನು. ತಾನು ರಮಾದೇವಿಯ ಮೇಲೆ ತೋರಿದ ಕ್ರೂರ ವರ್ತನೆಗಾಗಿ ಕ್ಷಮಾಯಾಚನೆ ಮಾಡುತ್ತಿದ್ದನು. ಒಂದೊಂದು ಬಾರಿ ಗಟ್ಟಿಯಾಗಿ ಅತ್ತುಬಿಡುತ್ತಿದ್ದನು. ಆಳುಕಾಳುಗಳ ಮೇಲೆಯೂ ಹೀಗೆಯೇ ರೇಗುತ್ತಿದ್ದನು. ಒಂದೊಂದು ಬಾರಿ ಅವರೇ ಬಿಟ್ಟುಹೋಗುತ್ತಿದ್ದರು. ಒಂದೊಂದು ಬಾರಿ ರಂಗರಾಯನೇ ಅವರನ್ನು ಓಡಿಸಿಬಿಡುತ್ತಿದ್ದನು.

ಸುಮುಖವಾಗಿದ್ದಾಗ ಬಲು ದೊಡ್ಡ ಮನುಷ್ಯನಂತೆ ವರ್ತಿಸುತ್ತಿದ್ದನು; ಔದಾರ್ಯವನ್ನು ತೋರುತ್ತಿದ್ದನು ದಾನ ಧರ್ಮಗಳನ್ನು ಮಾಡುತ್ತಿದ್ದನು. ಕಾಂಗ್ರೆಸ್ಸಿನವರೆಂದರೆ ಬಲು ದ್ವೇಷ, ಛಲ ಯಾವಾಗಲೂ ಅವರನ್ನು ದೂಷಣೆ ಮಾಡುತ್ತಿದ್ದನು. ಆದರೆ ಮಂತ್ರಿಗಳು ಬರುವ ಸಮಾರಂಭಗಳಿಗೆ ಅವನು ಹೋಗಲೇ ಬೇಕು. ಅಲ್ಲಿ ಅವನಿಗೆ ಗೌರವ ಬರಬೇಕು. ಅದಕ್ಕಾಗಿ ಕೇಳಿದಷ್ಟು ಚಂದಾ ಕೊಡುತ್ತಿದ್ದನು. ಊರಿನ ಜನರೆಲ್ಲಾ ಇವನು ಡಾಂಭಿಕ ಎಂದುಕೊಳ್ಳುತ್ತಿದ್ದರು.

ಯಾವ ಸಮಾರಂಭಗಳಿಗೆ ಹೋದರೂ ರಮಾದೇವಿಯನ್ನು ಕರೆದುಕೊಂಡು ಹೋಗುತ್ತಿದ್ದನು. ಅವಳು ಅವನು ಹೇಳಿದ ಸೀರೆ ಉಡಬೇಕು. ಅವನೊಪ್ಪಿದ ಕುಪ್ಪಸ ತೊಡಬೇಕು. ಆಭರಣಗಳನ್ನೂ ಅವನೇ ತೊಡಿಸಿ ಜೊತೆಯಲ್ಲಿ ಕರೆದುಕೊಂಡು ಹೋಗಬೇಕು. ತನಗೆ ಎಂಥಾ ರೂಪಲಾವಣ್ಯವತಿ ಪತ್ನಿ ಇದ್ದಾಳೆಂದು ತೋರಿಸಿಕೊಳ್ಳುವ ಹೆಮ್ಮೆ ಅದು!

ಇದೆಲ್ಲಾ ರಮಾದೇವಿಗೆ ನಾಚಿಕೆಯಾಗುತ್ತಿತ್ತು. ಅವಳು ಆಟಗಾರನ ಕೈಗೊಂಬೆಯಂತೆ ವರ್ತಿಸುತ್ತಿದ್ದಳು. ಇಷ್ಟಾದರೂ ರಂಗರಾಯನು ಅಸುಖಿ! ರಮಾದೇವಿಯು ಖಿನ್ನಮನಸ್ಕಳು. ಇಂಥಾ ದಾಂಪತ್ಯ!

'ಚಿತ್ರಕೂಟ'ದ ಶಿಶುವಿಹಾರ—ವನಿತಾಶ್ರಮಗಳು ಅಭಿವೃದ್ಧಿಯಾಗುತ್ತಿದ್ದುವು. ಯಾರಾದರೂ ಆ ಮಾತನ್ನೆತ್ತಿದರೆ ರಂಗರಾಯನಿಗೆ ಶೂಲ ಹಾಕಿದಂತಾಗುತ್ತಿತ್ತು. ಡಾಕ್ಟರು ಮಾತ್ರ ಸಮಯಾಸಮಯಗಳಲ್ಲಿ 'ಚಿತ್ರಕೂಟ'ದ ಪ್ರಶಂಸೆ ಮಾಡುತ್ತಿದ್ದರು. ರಂಗರಾಯನನ್ನು ರೇಗಿಸಿ ತಮಾಷೆ ನೋಡುವುದೇ ಅದರ ಉದ್ದೇಶ.

ರಂಗರಾಯನೊಡನೆ ಡಾಕ್ಟರೊಬ್ಬರೇ ಬಂದಾಗ ರಮಾದೇವಿಯು ಬಂದು ಕುಳಿತು ಧಾರಾಳವಾಗಿ ಮಾತನಾಡುತ್ತಿದ್ದಳು. ಅವರು ಕುಡಿಯುವುದಕ್ಕೆ ಆರಂಭಿಸಿದರೆ ರಮಾದೇವಿಯು ಹೇಗೆಯೋ ನುಸುಳಿಕೊಂಡು ಹೊರಟು ಹೋಗುತ್ತಿದ್ದಳು.

ಡಾಕ್ಟರು ಮಾತಿಗೆ ಮಾತು ಬಂದಾಗ "ರಮಾದೇವಿ, ನೀವೇ ಹೇಳಿ, ಆ 'ಚಿತ್ರಕೂಟ'ವು ಎಷ್ಟು ಚೆನ್ನಾಗಿದೆ. ಅದಕ್ಕೆ ಎಂಥ ಹೆಸರು ಬಂದಿದೆ? ಈ ರಂಗರಾಯನು ಸುಮ್ಮನೆ ಬೈಯುತ್ತಾನೆ" ಎಂದನು.

"ಚಿತ್ರಕೂಟ"ಕ್ಕೆ ಯಾರು ಏನು ಹೇಳಿದರೂ ಕುಂದಿಲ್ಲ. ನಮ್ಮ ಯಜಮಾನರೇನು ಹುಚ್ಚರೇ? ಅವರಿಗೂ ಆ ಆಶ್ರಮ ಚೆನ್ನಾಗಿದೆಯೆಂದು ಗೊತ್ತಿದೆ. ಏನೋ ಅಸಮಾಧಾನ. ಅದರಿಂದ ಹಾಗೆ ಮಾತನಾಡುತ್ತಾರೆ. ಅಷ್ಟೆ!"

"ಹೌದು! ಹೌದು, ನೀನು ಮಹಾಪ್ರಾಜ್ಞಳು. ಅದೆಲ್ಲಾ ಆಡಂಬರ! ಇಂಡಿಯಾ ದೇಶದಲ್ಲಿ ಇಂಥದೆಷ್ಟೋ ಆಗಿಹೋದದ್ದನ್ನು ನೋಡಿದ್ದೇನೆ. ಆನಿ ಬೆಸೆಂಟರಿಗಿಂತ ದೊಡ್ಡವರು ಯಾರಿದ್ದಾರೆ. ಅವರು ಮಾಡಿದ ಆಶ್ರಮಗಳೆಲ್ಲಾ ಏನಾಗಿವೆ. ಇದೆಲ್ಲಾ ಎರಡೆರಡು ದಿನ! ಇವನ್ನೆಲ್ಲಾ ಸರ್ಕಾರದವರು ಮಾಡಬೇಕು. ಸಾರೋದ್ಧಾರವಾಗಿ ನಡೆಯಬೇಕು. ನೀನು ಆ 'ಚಿತ್ರಕೂಟ'ಕ್ಕೆ ಹೋಗಿ ಆ ಶ್ಯಾಮಲಾ-ತಾರಾ ಇವರ ಬಿನ್ನಾಣದ ಮಾತುಗಳನ್ನು ಕೇಳಿ

ಮರುಳಾಗಿದ್ದಿ ! ”

“ ಓಹೋ! ಹಾಗಾದರೆ ರಮಾದೇವಿಯು ‘ ಚಿತ್ರಕೂಟ ’ಕ್ಕೆ ಹೋಗಿ ಬರುವುದುಂಟೇನು? ನೀನು ಅಲ್ಲಿಗೆ ಹೋಗಿ ಬರಲು ಅಪ್ಪಣೆ ಕೊಟ್ಟಿದ್ದೀಯೇನು ? ” ಎಂದು ಡಾಕ್ಟರ್ ಕೇಳಿದರು.

“ ನನ್ನ ಅಪ್ಪಣೆ ಕೇಳುವವರಾರು ? ರಮಾದೇವಿ ‘ ಚಿತ್ರಕೂಟ ’ದ ಭಕ್ತವೃಂದಕ್ಕೆ ಸೇರಿದಳು. ಆಗಾಗ ಕಾಣಿಕೆಯನ್ನೊಪ್ಪಿಸುತ್ತಾಳೆ. ಆ ಇಬ್ಬರ ಜೊತೆಗೆ ಇವಳೂ ಮೂರನೆಯವಳಾಗಿ ಖ್ಯಾತಿ ಪಡೆಯಬೇಕೆಂಬ ಆಶೆ ಇದೆ. ಹೌದೋ, ಅಲ್ಲವೋ ರಮಾ ! ” ಎಂದು ರಂಗರಾಯನು ಕೇಳಿದನು.

“ ನೀವೇಕೆ ಠಕ್ಕು ಮಾಡುತ್ತೀರಿ. ಆ ಶ್ಯಾಮಲಾದೇವಿಯು ಬಂದು ನಿಮ್ಮ ಶರಣಾಗತಳಾಗಿ ಕೇಳಿಕೊಂಡರೆ ಆ ‘ ಚಿತ್ರಕೂಟ ’ಕ್ಕೆ ಲಕ್ಷ ರೂಪಾಯಿ ಕೊಡುತ್ತೀರಿ. ಚಿನ್ನದ ಕಲಶ ಹಾಕಿಸುತ್ತೀರಿ ” ಎಂದಳು ರಮಾ.

ಡಾಕ್ಟರ್ “ ಸರಿಯಾಗಿ ತಿಳಿದುಕೊಂಡಿದ್ದೀರಿ. ನನ್ನದೂ ಅದೇ ಅಭಿಪ್ರಾಯ ” ಎಂದರು.

ರಂಗರಾಯನು “ ಅದೆಲ್ಲಾ ಉಪಯೋಗವಿಲ್ಲದ ಮಾತುಗಳು. ವೃಥಾ ಆ ಮಾತುಗಳನ್ನಾಡಿ ನನ್ನ ಮನಸ್ಸನ್ನು ಕಲಕುತ್ತೀಯೆ. ನಿಜವಾಗಿ ಹೇಳುತ್ತೇನೆ ಕೇಳು ಡಾಕ್ಟರ್, ಆ ‘ ಚಿತ್ರಕೂಟ ’ಕ್ಕೆ ಏನಾದರೊಂದು ಕೊಂಕು ತಂದಿಟ್ಟು ಅದನ್ನು ಮುರಿದು ಹಾಕಬೇಕೆಂದಿದ್ದೇನೆ. ನೋಡು. ಈ ಊರಿನಲ್ಲಿ ಒಬ್ಬ ಹುಡುಗ ನನ್ನ ಕೈಗೆ ಸಿಕ್ಕಿದ್ದಾನೆ. ಅವನು ಒಂದು ಪತ್ರಿಕೆ ಹಾಕುತ್ತಾನಂತೆ. ಕಾಂಗ್ರೆಸ್ಸನ್ನು ಬಯ್ಯುವುದಕ್ಕೆ ಆ ಪತ್ರಿಕೆಯು ಮೀಸಲಂತೆ. ಅವನು ಬಂದು ನನಗೆ ಗಂಟುಬಿದ್ದಿದ್ದಾನೆ. ‘ದುಡ್ಡು ಕೊಡಿ, ಪತ್ರಿಕೆಯನ್ನು ಹೇಗೆ ಮಾಡುತ್ತೇನೆ ನೋಡಿ!’ ಎಂದು ಪೀಡಿಸುತ್ತಿದ್ದಾನೆ. ಅವನಿಗೆ ಹೇಗೂ ದುಡ್ಡು ಕೊಡಲೇಬೇಕು. ಕೊಡುತ್ತೇನೆ. ಅವನನ್ನು ಈ ‘ ಚಿತ್ರಕೂಟ ’ದ ಮೇಲೆ ಛೂ ಬಿಡುತ್ತೇನೆ. ಆಗ ನೋಡು ‘ ಚಿತ್ರಕೂಟ ’ದ ಗತಿ ಏನಾಗುತ್ತದೆ. ಅಂಥದೊಂದು ಪೇಪರ್ ಬೇಕೇ ಬೇಕು. ಆ ಹುಡುಗನ ಹೆಸರು ಹರೀಂದ್ರ. ಪತ್ರಿಕೆಯ ಹೆಸರು ‘ ಪ್ರದೀಪ ’. ನಾಳೆ ಬೆಳಗ್ಗೆ ಅವನನ್ನು ನಿನ್ನ ಹತ್ತಿರ ಕಳಿ

ಸುತ್ತೇನೆ. ಅವನೆಂಥಾ ಗಟ್ಟಿಗ, ನೀನೇ ನೋಡು" ಎಂದನು.

ಡಾಕ್ಟರ್ "ಬೇಡಪ್ಪಾ ಬೇಡ! ಅಂಥವರ ಸಹವಾಸ ನನಗೆ ಹಚ್ಚಬೇಡ. ಇಂದು 'ಚಿತ್ರಕೂಟ'ದ ಮೇಲೆ ನೀನು ಬರೆಸಿದರೆ ನಾಳೆ ನಿನ್ನ ಮೇಲೆಯೇ ಅವನು ಬರೆಯುತ್ತಾನೆ. ಈ ಪತ್ರಿಕೆಗಳವರ ತಂಟೆಗೆ ಹೋಗಬೇಡಯ್ಯಾ! ಮಹಾರಾಯ" ಎಂದು ಎಚ್ಚರಿಸಿದನು.

ರಂಗರಾಯನು "ಅದೆಲ್ಲಾ ಇರಲಿ. ನನ್ನ ಬುದ್ಧಿ ನನ್ನ ಕೈಯ್ಯಲ್ಲಿದೆ. ಈ ಮಾತು ಸಾಕು. ಸ್ವಲ್ಪ ವಿಸ್ಕಿ ಪಾನ ಮಾಡೋಣ" ಎಂದು ರಮಾದೇವಿಯ ಕಡೆಗೆ ತಿರುಗಿ "ರಮಾ! ಸ್ವಲ್ಪ ನಮ್ಮ ಪಾನಕ ಪೂಜೆಯ ಸಾಮಗ್ರಿಗಳನ್ನೆಲ್ಲಾ ತಂದಿಡುವೆಯಾ?" ಎಂದನು.

ರಮಾದೇವಿಯು ಎಲ್ಲವನ್ನೂ ತಂದಿಟ್ಟು ಹೊರಟುಹೋದಳು. ಅವರಿಬ್ಬರೂ ಪಾನ ಮಾಡಿ ಮನಸ್ಸಿನ ಲಹರಿಯಲ್ಲಿ ತೋರಿದಂತೆ ಮಾತನಾಡಿಕೊಳ್ಳುತ್ತಿದ್ದರು.

ಒಂದೆರಡು ವಾರಗಳಲ್ಲಿ 'ಚಿತ್ರಕೂಟ'ದ ವಾರ್ಷಿಕೋತ್ಸವವು ಬಂದಿತು. ಮುಖ್ಯಮಂತ್ರಿಗಳು ಬಂದು ಅಧ್ಯಕ್ಷತೆಯನ್ನು ವಹಿಸುತ್ತಾರೆಂದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ರಂಗರಾಯನು ಅದನ್ನು ನೋಡಿದನು. ತನಗೂ ಆಹ್ವಾನ ಬರಬಹುದೆಂದು ಊಹಿಸಿದನು. ಗೊತ್ತಾದ ದಿನ ಊರಿನಲ್ಲೇ ಇರಬಾರದೆಂದು ಅವನು ಆಗ ಮದರಾಸಿಗೆ ಹೊರಟುಹೋದನು.

ನಗರದ ಎಲ್ಲ ದೊಡ್ಡ ಮನುಷ್ಯರಿಗೂ ಬಂದಿದ್ದಂತೆ ರಂಗರಾಯನಿಗೂ ಆಹ್ವಾನ ಪತ್ರಿಕೆ ಬಂದಿತ್ತು. ಆ ದಿನ ಆ ಸಮಾರಂಭಕ್ಕೆ ರಮಾದೇವಿಯು ಹೋಗಿದ್ದಳು. ಆದರೆ ಅವಳು ಆ ಸಮಾರಂಭಕ್ಕೆ ಬಂದಿದ್ದ ದೊಡ್ಡ ಮನುಷ್ಯರ ಅಂತಸ್ತಿನಲ್ಲಿ ಹೋಗಿರಲಿಲ್ಲ. ತಾನೂ ಶ್ಯಾಮಲಾ-ತಾರಾದೇವಿಯವರೊಡನೆ ಸೇರಿಕೊಂಡು ಓಡಾಡುತ್ತಿದ್ದಳು. ಬಂದ ಸ್ತ್ರೀಯರನ್ನೆಲ್ಲಾ ಉಪಚರಿಸಿ ಕೂಡಿಸುತ್ತಿದ್ದಳು. ಗಂಧ ಪುಷ್ಪ ತಾಂಬೂಲಗಳನ್ನು ಕೊಡುತ್ತಿದ್ದಳು.

ಮುಖ್ಯಮಂತ್ರಿಗಳು ಆ 'ಚಿತ್ರಕೂಟ'ದ ಕೆಲಸ ಕಾರ್ಯಗಳನ್ನೂ ಶಿಸ್ತನ್ನೂ ಪ್ರಶಂಸೆ ಮಾಡಿ ಭಾಷಣ ಮಾಡಿದರು. ಮಹಾತ್ಮಾ ಗಾಂಧಿಯವರ ತತ್ವ

ವನ್ನು ಪೂರ್ಣವಾಗಿ ಈ ಆಶ್ರಮಗಳು ಪ್ರತಿಬಿಂಬಿಸುತ್ತವೆಂದು ಹೇಳಿದರು.

ನಾರಾಯಣರಾಯನು ವರದಿಯನ್ನೋದಿದನು. ಈ ಆಶ್ರಮಗಳಿಗೆ ಒಂದು ಕಟ್ಟಡವನ್ನು ನಿರ್ಮಾಣ ಮಾಡಬೇಕೆಂದೂ ಅದಕ್ಕೆ ಒಂದು ಲಕ್ಷ ರೂಪಾಯಿಗಳ ನಿಧಿಯನ್ನು ಕೂಡಿಸಬೇಕೆಂದೂ ಪ್ರಾರ್ಥನೆ ಮಾಡಿದನು.

ಮಂತ್ರಿಗಳು ಸರಕಾರದಿಂದ ಇಪ್ಪತ್ತು ಸಹಸ್ರ ರೂಪಾಯಿಗಳನ್ನು ಕೊಡಿಸುವುದಾಗಿ ವಾಗ್ದಾನ ಮಾಡಿದರು. ಅಂದಿನ ಉತ್ಸವವೆಲ್ಲಾ ಬಹಳ ವಿಜೃಂಭಣೆಯಿಂದ ನಡೆಯಿತು.

ರಂಗರಾಯನು ಎರಡು ಮೂರು ದಿನಗಳು ಕಳೆದನಂತರ ಊರಿಗೆ ಹಿಂತಿರುಗಿ ಬಂದನು. ಕುತೂಹಲದಿಂದ "ಆ ದಿನದ ಉತ್ಸವವು ಹೇಗೆ ನಡೆಯಿತು" ಎಂದು ರಮಾದೇವಿಯನ್ನು ಕೇಳಿದನು. ರಮಾದೇವಿಯು ಅಂದಿನ ಉತ್ಸವದ ವಿವರಣೆಯನ್ನೆಲ್ಲಾ ಬಣ್ಣಿಸಿ ಹೇಳಿದಳು.

ರಂಗರಾಯನು ಎಲ್ಲವನ್ನೂ ಮೌನವಾಗಿ ಕೇಳಿದನು. ಮನಸ್ಸಿನಲ್ಲಿಯೇ ದ್ವೇಷವು ಜ್ವಾಲೆಯಂತೆ ಉರಿಯತೊಡಗಿತು. ಆದರೆ ತಡೆದುಕೊಂಡು ಸುಮ್ಮನಿದ್ದನು.

ಮಾರನೆಯ ದಿನವೇ 'ಪ್ರದೀಪ' ಪತ್ರಿಕೆಯಲ್ಲಿ 'ಚಿತ್ರಕೂಟ'ದ ಆಶ್ರಮ ನಿಧಿಸಂಗ್ರಹ, ಕಾಂಗ್ರೆಸ್ಸಿನವರ ಓಡಾಟ ಮಂತ್ರಿಗಳ ಭಾಷಣ ಇವೆಲ್ಲವನ್ನೂ ಖಂಡಿಸಿ ಲೇಖನವು ಬರೆಯಲ್ಪಟ್ಟಿತ್ತು. ಆ ಪತ್ರಿಕೆಯಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಖಂಡನೆಯ ಶೀರ್ಷಿಕೆಗಳು ತುಂಬಿಹೋಗಿದ್ದುವು. ಸಂಧ್ಯಾಕಾಲ ರಂಗರಾಯನು ಮನೆಗೆ ಬರುವಾಗ ಆ ಪತ್ರಿಕೆಯ ನಾಲ್ಕಾರು ಪ್ರತಿಗಳನ್ನು ತಂದನು.

ಮನೆಯೊಳಗೆ ಬರುವಾಗಲೇ 'ರಮಾ, ರಮಾ' ಎಂದು ಕೂಗುತ್ತಾ ಒಳಹೊಕ್ಕನು. ರಮಾದೇವಿಯೂ ಎದುರಿಗೆ ಬಂದು ನಿಂತಳು. "ರಮಾ! ತೆಗೆದುಕೋ, ಈ ಪತ್ರಿಕೆಯನ್ನು ಓದಿ ನೋಡಿಕೋ! ನಿನ್ನ ಶ್ಯಾಮಲಾ ದೇವಿಗೂ ಒಂದು ತೆಗೆದುಕೊಂಡು ಹೋಗಿ ಕೊಡು. ಇದಕ್ಕಿಂತಲೂ ಅವಮಾನವು ಬೇಕೇ? ನಾಳೆ ದಿನ ಬೇಕಾದರೆ ಶ್ಯಾಮಲಾ, ತಾರಾ ಇಬ್ಬರ ಪಠಗಳನ್ನೂ

ಈ ಪತ್ರಿಕೆಯಲ್ಲಿ ಹಾಕಿಸುತ್ತೇನೆ. ಅವರ ಜೊತೆಯಲ್ಲಿ ನಿನ್ನ ಪಠವನ್ನೂ ಹಾಕಿಸುತ್ತೇನೆ, ನೋಡಿಕೋ ! ”

ರಮಾದೇವಿಯು ಆ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು ಮಹಡಿಯ ಮೇಲಕ್ಕೆ ಓಡಿಹೋದಳು. ತನ್ನ ಕೋಣೆಯಲ್ಲಿ ಕುಳಿತು ಪತ್ರಿಕೆಯನ್ನು ಪೂರ್ತಿಯಾಗಿ ಓದಿದಳು. “ ಆಹಾ ! ಇವರು ಎಷ್ಟು ಹೀನ ಕೆಲಸಕ್ಕೆ ಇಳಿದುಬಿಟ್ಟರು ! ಇದರಿಂದ ಇವರಿಗೂ ಅಗೌರವ !” ಎಂದುಕೊಂಡಳು.

ರಂಗರಾಯನು ರಮಾದೇವಿಯನ್ನು ಕರೆದು “ ರಮಾ ! ಓದಿದೆಯಾ ? ಹೇಗಿದೆ ? ” ಎಂದು ಗಹಗಹಿಸಿ ನಕ್ಕನು.

ರಮಾದೇವಿಯು ಮೌನವಾಗಿದ್ದಳು. ಏನೂ ಮಾತನಾಡಲಿಲ್ಲ.

ರಂಗರಾಯನು ಹೆಂಡತಿಯೊಡನೆ ಕುಳಿತು ಭೋಜನ ಮಾಡಿದನು. ಆಗಲೂ ಅದೇ ಮಾತು.

ಭೋಜನವಾದನಂತರ ಮಹಡಿಯ ಮೇಲೆ ಕುಳಿತು ತಾಂಬೂಲ ಸೇವನೆಗೆ ಆರಂಭಿಸಿದನು. ರಮಾದೇವಿಯು ವೀಳೆಯದೆಲೆಗಳಿಗೆ ಸುಣ್ಣ ಹಚ್ಚಿ ಮಡಿಸಿ ಕೊಡುತ್ತ ನಿಂತಿದ್ದಳು. ರಂಗರಾಯನು ಆ ಪತ್ರಿಕೆಯಲ್ಲಿ ಬರೆದಿರುವ ಮಾತುಗಳನ್ನೇ ಎತ್ತಿ ಎತ್ತಿ ಹಾಸ್ಯ ಮಾಡುತ್ತಿದ್ದನು.

ರಾತ್ರಿ ಬಹಳ ಹೊತ್ತಾಗಿತ್ತು. ರಮಾದೇವಿಯು ತನ್ನ ಕೋಣೆಗೆ ಹೋಗಿ ಮಲಗಿದಳು.

ರಂಗರಾಯನು “ ಈ ರಮಾ ! ಇಂದು ಬುದ್ಧಿ ಕಲಿತಿದ್ದಾಳೆ. ಅವಳು ಇನ್ನು ‘ ಚಿತ್ರಕೂಟ ’ಕ್ಕೆ ಹೋಗುವುದಿಲ್ಲ ” ಎಂದುಕೊಂಡನು.

ರಂಗರಾಯನ ಅಂದಿನ ಸಂತೋಷಕ್ಕೆ ಪಾರವೇ ಇರಲಿಲ್ಲ.

ಮರುದಿನ ಪ್ರಾತಃಕಾಲ ನಾಲ್ಕಾರು ಮಂದಿ ಕಾಂಗ್ರೆಸ್ ಮುಖಂಡರು ರಂಗರಾಯನನ್ನು ನೋಡುವುದಕ್ಕೆ ಬಂದರು. ಹಜಾರದಲ್ಲಿ ಆಸನಗಳ ಮೇಲೆ ಅವರನ್ನು ಕುಳ್ಳಿರಿಸಿದನು. ಪರಿಚಾರಕನನ್ನು ಕರೆದು ಎಲ್ಲರಿಗೂ ಕಾಫಿ ತಂದು ಕೊಡುವಂತೆ ಹೇಳಿದನು. ಅವರೆಲ್ಲರೂ ಕಾಫಿ ಕುಡಿದನಂತರ “ಏನು ರಾಯರೇ! ಏನು ಬಂದಿದ್ದೀರಿ. ಅಪರೂಪವಾಗಿ ದಯಮಾಡಿಸಿದ ಹಾಗಾಯಿತಲ್ಲಾ ? ”

ಎಂದನು.

ಕೃಷ್ಣರಾಯನು 'ಚಿತ್ರಕೂಟ'ದ ಚಂದಾ ಪಟ್ಟಿಯನ್ನು ರಂಗರಾಯನ ಕೈಗೆ ಕೊಟ್ಟನು. "ನೀವು ದಯವಿಟ್ಟು ಐದು ಸಹಸ್ರ ರೂಪಾಯಿಗಳ ಚಂದಾ ಕೊಡಬೇಕು" ಎಂದು ವಿನಯದಿಂದ ಪ್ರಾರ್ಥನೆ ಮಾಡಿದನು.

ರಂಗರಾಯನು "ಏನು ನಾರಾಯಣ ಜೋಯಿಸರೇ! ನಾನು ನೀವು ಬಂದಾಗಲೆಲ್ಲಾ ಚಂದಾ ಕೊಡುವುದಿಲ್ಲವೇ? ಕೊಡುತ್ತಿದ್ದೇನೆ. ಆದರೆ ಇದಕ್ಕೆ ಮಾತ್ರ ಒಂದು ಕಾಸನ್ನೂ ನಾನು ಕೊಡತಕ್ಕವನಲ್ಲ. ನೀವು ಬಲಾತ್ಕಾರ ಮಾಡಬೇಡಿರಿ" ಎಂದು ಹೇಳಿದನು.

ಆ ಮುಖಂಡರೆಲ್ಲರೂ ಒಬ್ಬೊಬ್ಬರಾಗಿ ರಂಗರಾಯನನ್ನು ಸ್ತೋತ್ರ ಮಾಡಿದರು. ಆದರೆ ರಂಗರಾಯನ ಮನಸ್ಸು ತಿರುಗಲಿಲ್ಲ.

ನಾರಾಯಣಜೋಯಿಸರು "ರಂಗರಾಯ! ನಿನ್ನ ಬಂಡವಾಳವೆಲ್ಲಾ ನನಗೆ ಗೊತ್ತು. ನಿನ್ನಿಂದ ಐದುಸಾವಿರ ರೂಪಾಯಿಗಳನ್ನು ವಸೂಲು ಮಾಡದಿದ್ದರೆ ನನ್ನ ಹೆಸರು ಜೋಯಿಸನೇ ಅಲ್ಲ. ಏನೋ ದೊಡ್ಡ ಮನುಷ್ಯನಂತೆ ದೊಡ್ಡ ಮನುಷ್ಯ! ನೋಡುತ್ತೇನೆ–ನೀನು ಪೇಟೆ ಬೀದಿಯಲ್ಲಿ ಹೇಗೆ ತಿರುಗುತ್ತೀಯೆಂಬುದನ್ನ. ಇದೆಲ್ಲಾ ಎಲ್ಲಿ ಬಂತಯ್ಯಾ, ಹಣ! ಬ್ಲಾಕ್‌ಮಾರ್ಕೆಟ್ಟಿನ ದೊರೆಯಲ್ಲವೇನಯ್ಯಾ ನೀನು! ಇರಲಿ! ಏಳಿರಯ್ಯಾ! ಇವನೆಲ್ಲಿ ಹೋಗುತ್ತಾನೆ ನೋಡೋಣ" ಎಂದು ಹೇಳಿದರು.

ರಂಗರಾಯನು ಯಾವುದಕ್ಕೂ ಜಗ್ಗಲಿಲ್ಲ ಎಲ್ಲರೂ ಹೊರಟು ಹೋದರು.

ರಂಗರಾಯನು ಕಚೇರಿಗೆ ಹೋಗಲಿಲ್ಲ. ಮಹಡಿಯ ಮೇಲೆ ಹೋಗಿ ಕುಳಿತುಕೊಂಡನು. ರಮಾದೇವಿಯು ಮತ್ತೊಮ್ಮೆ ಕಾಫಿಯನ್ನು ತಂದು ಕೊಟ್ಟಳು.

"ಏನು ನೀವು ಚಂದಾ ಕೊಡಲಿಲ್ಲವೇ? ಕೊಟ್ಟುಬಿಟ್ಟಿದ್ದರೆ ಚೆನ್ನಾಗಿತ್ತು. ನಿಮ್ಮಂಥಾ ದೊಡ್ಡ ಮನುಷ್ಯರು ಊರಿನವರ ನಿಷ್ಠುರವನ್ನೆಲ್ಲಾ ಕಟ್ಟಿಕೊಂಡರಾಗುತ್ತದೆಯೇ?" ಎಂದು ರಮಾ ಕೇಳಿದಳು.

“ ರಮಾ ! ನೀನು ಮಾತನಾಡಬೇಡ. ಈ ಕಾಂಗ್ರೆಸ್ ಮುಖಂಡರೆಲ್ಲಾ ನನ್ನ ವಿರೋಧಿಗಳು. ಈ ಜೋಯಿಸ ನನ್ನ ಹತ್ತಿರ ಎಷ್ಟು ದುಡ್ಡು ಹೊಡೆದಿದ್ದಾನೆ ಬಲ್ಲೆಯಾ. ದೊಡ್ಡ ಮನುಷ್ಯನಂತೆ ಮಾತನಾಡುತ್ತಾನೆ. ಭಂಡ ಜನ. ಈ ಜನರೇ ಹೀಗೆ. ”

ರಮಾ ಸುಮ್ಮನಾದಳು.

ಅಂದಿನ ದಿನವೂ ಕಳೆಯಿತು. ‘ ಚಿತ್ರಕೂಟ ’ಕ್ಕೆ ಹೋದಳು. ಶ್ಯಾಮಲಾದೇವಿಯು ಯಥಾಪ್ರಕಾರ ಮಾತನಾಡಿಸಿದಳು. ಅವಳಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ. ಚಂದಾ ವಸೂಲಿಯ ಮಾತುಕಥೆಗಳನ್ನೇ ಅಲ್ಲಿ ಯಾರೂ ಆಡಲಿಲ್ಲ. ರಮಾದೇವಿಯು ಕತ್ತಲು ಹೊತ್ತಿಗೆ ಮನೆಗೆ ಬಂದು ಸೇರಿದಳು.

ಅವಳಿಗೆ ಆ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ಅಂದು ರಂಗರಾಯನೂ ಅವಳ ಕಡೆ ಗಮನ ಕೊಡಲಿಲ್ಲ. ಬೆಳಕು ಹರಿಯುವುದರೊಳಗೆ ಎದ್ದು ಸ್ನಾನ ಮಾಡಿ ಮಡಿಯುಟ್ಟಳು. ರಂಗರಾಯನು ಏಳುವ ಹೊತ್ತಿಗೆ ಕಾಫಿಯನ್ನು ತಂದು ಕೊಟ್ಟಳು.

ರಂಗರಾಯನು ಕಾಫಿ ಕುಡಿಯುತ್ತಾ ಯಥಾಪ್ರಕಾರ ವಿಶ್ವಾಸವಾಗಿ ಮಾತನಾಡುತ್ತಿದ್ದನು.

ರಮಾದೇವಿಯು “ ಈ ಹಣವಂತರಾದ ದೊಡ್ಡ ಮನುಷ್ಯರೇ ಹೀಗೆ ! ಕ್ಷಣಕ್ಕೊಂದು ಚಿತ್ತ ! ” ಎಂದುಕೊಂಡಳು.

ರಂಗರಾಯನು ಬೊಂಬಾಯಿಗೆ ಹೊರಡಬೇಕಾಗಿತ್ತು. ಅಂದೇ ಏಕಾಏಕಿ ಹೊರಡುವ ನಿಶ್ಚಯ ಮಾಡಿದನು. ರಮಾದೇವಿಗೆ ಒಬ್ಬಳೇ ಇರುವುದಕ್ಕೆ ಬೇಸರ. ಅವಳನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದು ನಿಶ್ಚಯ ಮಾಡಿದನು. ಎರಡು ಮೂರು ದಿನಗಳಿಂದ ರಮಾದೇವಿಯನ್ನು ಮಾತನಾಡಿಸಿರಲಿಲ್ಲ. ಅವಳೂ ರಂಗರಾಯನ ಮುಂದೆ ಸುಳಿಯಲಿಲ್ಲ. ರಂಗರಾಯನು ರಮಾದೇವಿಯ ಕೋಣೆಗೆ ಹೋಗಿ ನೋಡಿದನು. ರಮಾ ಇನ್ನೂ ಹಾಸಿಗೆಯಿಂದ ಎದ್ದಿರಲಿಲ್ಲ. ಹಾಸಿಗೆಯ ಮೇಲೆ ಹೋಗಿ ಕುಳಿತು “ ರಮಾ ! ಏಕೆ ಇನ್ನೂ ಎದ್ದಿಲ್ಲ ? ” ಎಂದು ಮಾತನಾಡಿಸಿದನು.

ರಮಾದೇವಿಯು ತಿರುಗಿ ನೋಡಿದಳು.

ರಂಗರಾಯನು "ರಮಾ! ನಿನ್ನೆ ತಂತಿ ಬಂದಿದೆ. ಬೊಂಬಾಯಿಗೆ ಈ ದಿನವೇ ಹೊರಡಬೇಕಾಗಿದೆ. ನಿನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗೋಣವೆಂದಿದ್ದೇನೆ" ಎಂದು ಹೇಳಿದನು.

ರಮಾ "ನಿಮ್ಮ ಇಷ್ಟವಿದ್ದಂತೆ ನಾನು ಸಿದ್ಧಳಾಗಿಯೇ ಇದ್ದೇನೆ. ಆದರೆ ನನಗೆ ಎರಡು ದಿನಗಳಿಂದಲೂ ಮೈಗೆ ಚೆನ್ನಾಗಿಲ್ಲ. ಈ ಪ್ರಯಾಣದಿಂದ ಏನಾದರೂ ಹೆಚ್ಚಾದರೆ ನಿಮಗೆ ಬಹಳ ತೊಂದರೆ. ಅಲ್ಲಿ ನನ್ನನ್ನು ಬೈಯ್ಯಬೇಡಿ!" ಎಂದಳು.

ರಂಗರಾಯನು ಮೈಮುಟ್ಟಿ ನೋಡಿದನು. ಜ್ವರವಿತ್ತು. "ಇದೇನು ರಮಾ! ಹೀಗೆ ಮಾಡಿದೆ. ನನಗೆ ಹೇಳಲೇಬೇಡವೆ?" ಎಂದು ಹೇಳಿ ಡಾಕ್ಟರಿಗೆ ಫೋನ್ ಮಾಡಿ, ರಮಾದೇವಿಯ ಪಕ್ಕದಲ್ಲಿಯೇ ಮಾತನಾಡುತ್ತಾ ಕುಳಿತನು.

ಡಾಕ್ಟರು ಬಂದರು.

ರಂಗರಾಯನು "ನೋಡು ಸುಬ್ಬರಾವ್, ಬೊಂಬಾಯಿಂದ ತಂತಿ ಬಂದಿದೆ. ಈ ದಿನ ಹೊರಡುವ ನಿಶ್ಚಯ ಮಾಡಿದ್ದೆ. ಇವಳಿಗೆ ಆಲಸ್ಯವಾಗಿದೆ. ನಾನು ಪ್ರಯಾಣವನ್ನು ನಿಲ್ಲಿಸಿಬಿಡಬೇಕೆಂದಿದ್ದೇನೆ. ನೀನೇನು ಹೇಳುವಿ?" ಎಂದು ಕೇಳಿದನು.

ರಮಾ "ನನಗಾಗಿ ನೀವೇಕೆ ಪ್ರಯಾಣ ನಿಲ್ಲಿಸಬೇಕು? ನೀವು ಪ್ರಯಾಣ ಮಾಡಿ. ಸ್ವಲ್ಪ ದೇಹಾಲಸ್ಯವಾಗಿದೆ. ಅಷ್ಟೆ! ಸರಿಹೋಗುತ್ತದೆ" ಎಂದಳು.

ಡಾಕ್ಟರು ಪರೀಕ್ಷೆ ಮಾಡಿ "ಜ್ವರವಿದೆ ಬಳಲಿಕೆಯೂ ಆಗಿದೆ. ಆದರೂ ನೀನು ಚಿಂತಿಸುವ ಕಾರಣವಿಲ್ಲ, ಔಷಧಿ ಕೊಡುತ್ತೇನೆ. ಮೂರು ಹೊತ್ತು ಔಷಧಿ ಬಿದ್ದರೆ ಸರಿಹೋಗುತ್ತದೆ. ನೀನು ಪ್ರಯಾಣ ಮಾಡುವುದಾದರೆ ಹೋಗಿ ಬಾ! ನಾನು ಸರಿಯಾಗಿ ನೋಡಿಕೊಳ್ಳುತ್ತೇನೆ. ಷಾಪಿಗೆ ಹೋಗಿ ಔಷಧಿ ಕಳಿಸುತ್ತೇನೆ" ಎಂದು ಹೇಳಿ ಹೊರಟರು.

ರಂಗರಾಯನೂ ಆಫೀಸಿಗೆ ಹೋದನು.

ಪ್ರಾತಃಕಾಲ ಹತ್ತು ಗಂಟೆಯಾಗಿರಬಹುದು. ಬೊಂಬಾಯಿನಿಂದ ಟ್ರಂಕ್‌ಕಾಲ್ ಬಂತು–'ತಕ್ಷಣ ಹೊರಟು ಬನ್ನಿ' ಎಂಬುದಾಗಿ ಕಂಪನಿಯವರು ಫೋನ್ ಮಾಡಿದರು.

ನಾಳೆ ಬೆಂಗಳೂರಿಂದ ವಿಮಾನದಲ್ಲಿ ಬರುತ್ತೇನೆಂದು ರಂಗರಾಯನು ಹೇಳಿದನು.

ಅಂದಿನ ಕೆಲಸವನ್ನೆಲ್ಲಾ ಮುಗಿಸಿಕೊಂಡು ಮನೆಗೆ ಬಂದನು. ಆ ದಿನವೇ ಮೈಸೂರಿಂದ ಪ್ರಯಾಣ ಮಾಡಿದನು.

ಬೊಂಬಾಯಿಯಲ್ಲಿ ರಂಗರಾಯನಿಗೆ ನಾಲ್ಕೈದು ದಿನಗಳ ಕೆಲಸವಿತ್ತು. ಮನೆಯ ಕಡೆ ಅವನು ಅಷ್ಟೇನೂ ಚಿಂತೆ ಹಚ್ಚಿಕೊಳ್ಳಲಿಲ್ಲ.

ಡಾಕ್ಟರು ಎರಡು ಹೊತ್ತು ಬಂದು ನೋಡಿ ರಮಾದೇವಿಗೆ ಔಷಧಿ ಕೊಟ್ಟರು. ಜ್ವರ ಬಿಟ್ಟು ಗುಣಮುಖವಾಯಿತು.

ಮಾರನೆಯ ದಿನ ಪ್ರಾತಃಕಾಲ ಡಾಕ್ಟರು ಬಂದು ನೋಡಿದರು. "ರಮಾ ದೇವಿ, ಜ್ವರ ಬಿಟ್ಟಿದೆ. ಗುಣವಾಗಿ ಹೋಗುತ್ತದೆ. ನೀವೇನು ಯೋಚನೆ ಮಾಡಬೇಡಿ" ಎಂದು ಹೇಳಿದರು.

ರಮಾ ಕಾಫಿ ತರಿಸಿಕೊಟ್ಟಳು. ಡಾಕ್ಟರು ಕಾಫಿ ಕುಡಿಯುತ್ತಾ ರಮಾ ದೇವಿಯ ಮಂಚದ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡರು.

ರಮಾದೇವಿಯು "ಡಾಕ್ಟರೇ! ನಮ್ಮ ಯಜಮಾನರಿಗೆ ನೀವೊಬ್ಬರೇ ಆಪ್ತಸ್ನೇಹಿತರು. ಅವರ ಸ್ವಭಾವವನ್ನು ಚೆನ್ನಾಗಿ ಬಲ್ಲಿರಿ, ನೀವೇ ಹೇಳಿ! ರಾಯರು 'ಚಿತ್ರಕೂಟ'ಕ್ಕೆ ಚಂದಾ ಕೊಡಲು ನಿರಾಕರಿಸಿದ್ದು ಸರಿಯೆ? ಜನನಿಂದೆಗೆ ಕಾರಣವಾಗುವುದಿಲ್ಲವೆ?" ಎಂದು ಕೇಳಿದಳು.

"ರಮಾದೇವಿ! ನೀವು ಬಹಳ ಬುದ್ಧಿವಂತರು. ನಾನು ಶ್ಯಾಮಲಾ ದೇವಿಯನ್ನೂ ಚೆನ್ನಾಗಿ ಬಲ್ಲೆ. ಅವಳಿಗಿಂತ ನೀವೇ ಬುದ್ಧಿವಂತರು. ನನಗೂ ರಂಗರಾಯನಿಗೂ ಸ್ನೇಹವೆಂಬುದು ನಿಜ! ಎಷ್ಟೋ ಬಾರಿ ನನಗೂ ಅವನಿಗೂ ಬದ್ಧದ್ವೇಷ ಬರುವ ಪ್ರಸಂಗಗಳು ಬಂದಿತ್ತು. ಅದೆಲ್ಲಾ ತಮ್ಮಷ್ಟಕ್ಕೆ ತಾವೇ ಸರಿ

ಹೋದುವು. ಅವನ ಮನಸ್ಸು ಒಳ್ಳೆಯದು. ಬಲು ಮೂರ್ಖ. ಅನ್ಯಾಯವಾಗಿ ಶ್ಯಾಮಲಾದೇವಿಯನ್ನು ದ್ವೇಷಿಸುತ್ತಾನೆ. ಆ ಬಡಪಾಯಿ! ಇವನೊಡನೆ ಹೆಣಗಿ ಬೇಸತ್ತು ಓಡಿಹೋದಳು. ಇವನು ದ್ವೇಷಸಾಧನೆ ಬಿಟ್ಟಿಲ್ಲ. ಕಾಂಗ್ರೆಸ್ಸಿನವರನ್ನು ಅನ್ಯಾಯವಾಗಿ ಬೈಯ್ಯುತ್ತಾನೆ. ಊರಿನವರಿಗೆಲ್ಲಾ ದ್ವೇಷಿ! ನನಗೆ ಸಾಕಾಗಿ ಹೋಗಿದೆ. "

" ರಾಯರು ಶ್ಯಾಮಲಾದೇವಿಯನ್ನೇಕೆ ಅಷ್ಟು ದ್ವೇಷಿಸುತ್ತಾರೆ? "

" ಅಯ್ಯೋ! ಅದೆಲ್ಲಾ ನಿಮಗೆ ಗೊತ್ತೇ ಇದೆ. ನನ್ನ ಬಾಯಿಂದ ಕೇಳುವುದರಲ್ಲಿ ನಿಮಗೇನು ಸಂತೋಷ! ರಂಗರಾಯನಾದರೂ ಈ ಊರು ಬಿಡಬೇಕು. ಶ್ಯಾಮಲಾದೇವಿಯಾದರೂ ಈ ಊರಿನಿಂದ ಎಲ್ಲಿಯಾದರೂ ಹೋಗಿಬಿಡಬೇಕು. ಇಲ್ಲದಿದ್ದರೆ ಇಬ್ಬರಿಗೂ ಮರ್ಯಾದೆ ಇಲ್ಲ. ನಮಗೂ ಸುಖವಿಲ್ಲ! "

" ಶ್ಯಾಮಲಾದೇವಿಯು ರಾಯರ ಧರ್ಮಪತ್ನಿ! ಅವರು ಎಂದೆಂದಿಗೂ ಈ ಮನೆಯಲ್ಲಿ ಬಂದಿರುವುದಿಲ್ಲವೆನ್ನುವಿರಾ? "

ಡಾಕ್ಟರು ನಕ್ಕರು. " ನಿಮ್ಮ ಸಾಹಸದಿಂದ ಆದರೆ ಆಗಬೇಕು. ಹಾಗೇನಾದರೂ ಆದರೆ, ನೀವಿಬ್ಬರೂ ರಂಗರಾಯನಿಗೆ ಕಡಿವಾಣವನ್ನು ಹಾಕಿ ಎಳೆಯುತ್ತಿದ್ದರೆ ಅವನೊಬ್ಬ ದೊಡ್ಡ ಮನುಷ್ಯನಾದರೂ ಆಗಬಹುದು. "

" ಈ ಸಮಯದಲ್ಲಿ ನನಗೆ ನೀವು ಒಂದು ಸಹಾಯ ಮಾಡುತ್ತೀರಾ? "

ಡಾಕ್ಟರ್ ಅಪ್ರತಿಭರಾಗಿ " ನಾನು! ನಾನೇನು ಸಹಾಯ ಮಾಡಬೇಕು? " ಎಂದರು.

" ಏನೂ ಇಲ್ಲ! ನನ್ನಲ್ಲಿ ಸ್ವಲ್ಪ ಚಿನ್ನವಿದೆ. ನಿಮ್ಮ ಕೈಗೆ ಕೊಡುತ್ತೇನೆ. ಅದನ್ನು ಮಾರಿ ಆ ಹಣವನ್ನು ರಂಗರಾಯರ ಹಣವೆಂದು ಶ್ಯಾಮಲಾದೇವಿಯರ ಕೈಗೆ ಸೇರಿಸಿಬಿಡಬೇಕು. ಅದು–ರಂಗರಾಯರ ' ಚಿತ್ರಕೂಟ 'ಕ್ಕೆ ಗುಪ್ತವಾಗಿ ಕೊಟ್ಟ ಚಂದಾ ಹಣವೆಂದು ಅವರಿಗೆ ಹೇಳಿ ಒಪ್ಪಿಸಬೇಕು. "

ಡಾಕ್ಟರು ಸ್ವಲ್ಪಹೊತ್ತು ಸ್ಥಂಭೀಭಾವದಿಂದ ಇದ್ದರು.

" ರಮಾದೇವಿ! ನೀವೇ ಆ ಚಿನ್ನವನ್ನು ಶ್ಯಾಮಲಾದೇವಿಯ ಕೈಗೆ

ಕೊಡಬಾರದೇಕೆ ? ಅದೇ ಚೆನ್ನಾಗಿರುತ್ತದೆ. ನೀವು ನನ್ನ ಕೈಗೆ ಕೊಡುವುದು, ನಾನು ಅವರಿಗೆ ಕೊಡುವುದು ಈ ಗುಪ್ತ ವ್ಯಾಪಾರವೇಕೆ? ರಾಜಾರೋಷಾಗಿ ರಮಾದೇವಿ-ರಂಗರಾಯರ ಚಂದಾ ಎಂದು ನೀವೇ ಕೊಟ್ಟುಬಿಡಿ. ಏನಾಗುತ್ತೋ ನೋಡೋಣ ! "

"ಅದೆಲ್ಲಾ ಆಗುಹೋಗದ ಕೆಲಸ ! ನಿಮ್ಮ ರಾಯರು ಕೋಪಾವೇಶದಲ್ಲಿ ನನ್ನನ್ನು ಕೊಂದುಬಿಟ್ಟಾರು ? "

ಡಾಕ್ಟರು ಬಹಳವಾಗಿ ಯೋಚಿಸಿದರು. ಕೊನೆಗೆ 'ರಮಾದೇವಿಯ ಯೋಚನೆಯೇ ಸರಿ !' ಎಂದುಕೊಂಡರು.

ರಮಾದೇವಿಯು ಎದ್ದು ಹೋಗಿ ತನ್ನ ಪೆಟ್ಟಿಗೆ ತೆಗೆದು ಚಿನ್ನದ ಗಟ್ಟಿಯನ್ನು ತಂದು ಡಾಕ್ಟರ ಕೈಗೆ ಕೊಟ್ಟಳು.

"ರಮಾದೇವಿ ! ಈ ಚಿನ್ನವನ್ನೆಲ್ಲಿ ಸಂಪಾದಿಸಿದೆ. ಹೇಗೆ ಮುಚ್ಚಿಟ್ಟಿದ್ದೆ. " ಡಾಕ್ಟರು ಕೇಳಿದರು.

ರಮಾ ನಗುತ್ತಾ "ಇದು ನಾನು ಸಂಪಾದಿಸಿದ ಚಿನ್ನವಲ್ಲ ! ನಮ್ಮ ಸೋದರತ್ತೆ ಮುದುಕಿಯೊಬ್ಬಳಿದ್ದಳು. ಅವಳೇ ನನ್ನನ್ನು ಸಾಕುತ್ತಿದ್ದಳು. ಅವಳು ಮರಣ ಕಾಲದಲ್ಲಿ, ಮುಚ್ಚಿಟ್ಟುಕೊಂಡಿದ್ದ ಈ ಚಿನ್ನದ ಗಟ್ಟಿಯನ್ನು ನನ್ನ ಕೈಗೆ ಕೊಟ್ಟು 'ಇದನ್ನು ಭದ್ರವಾಗಿಟ್ಟುಕೊಂಡಿರು ಮಗು' ಎಂದು ಹೇಳಿ ಪ್ರಾಣ ಬಿಟ್ಟಳು. ಇದೆಲ್ಲಾ ರಂಗರಾಯರಿಗೂ ಗೊತ್ತಿದೆ" ಎಂದಳು.

ಡಾಕ್ಟರು ಒಪ್ಪಿಕೊಂಡರು. ರಮಾದೇವಿಯ ಅಪ್ಪಣೆ ಪಡೆದು ಹೊರಟು ಹೋದರು.

ಅವರು ಚಿನ್ನವನ್ನು ಆ ದಿನವೇ ಬೆಲೆ ಕಟ್ಟಿಸಿ ಮಾರಿದರು. ಮೂರು ಸಾವಿರ ರೂಪಾಯಿಗಳು ಸಿಕ್ಕಿದುವು.

ಆ ಮೊತ್ತವನ್ನು ತೆಗೆದುಕೊಂಡು ಹೋಗಿ 'ಚಿತ್ರಕೂಟ'ದ ನಿಧಿಗೆ ಕೊಟ್ಟರು. ಶ್ರೀ ರಮಾದೇವಿ ರಂಗರಾಯರ ಹೆಸರಿಗೆ ರಸೀದಿಯನ್ನು ಪಡೆದರು.

ಅದೇ ದಿನ ಸಂಧ್ಯಾಕಾಲ ಆ ರಸೀದಿಯನ್ನು ರಮಾದೇವಿಯ ಕೈಗೆ ತಂದುಕೊಟ್ಟರು. ರಮಾದೇವಿಗೆ ತುಂಬ ಸಂತೋಷವಾಯಿತು!

ರಂಗರಾಯನು ಊರಿಗೆ ಹಿಂತಿರುಗಿ ಬಂದನು. ರಮಾದೇವಿಗೆ ಆರೋಗ್ಯ ವಾಗಿತ್ತು ಎಲ್ಲವೂ ಯಥಾಸ್ಥಿತಿಯಲ್ಲಿತ್ತು. ಒಂದೆರಡು ದಿನಗಳಲ್ಲಿಯೇ, ತನ್ನ ವಿಚಾರದಲ್ಲಿ ಊರಿನಲ್ಲೆಲ್ಲಾ ಏನೋ ಗುಸುಗುಂಪಲು ನಡೆಯುತ್ತಿದೆಯೆಂದು ರಂಗರಾಯನಿಗೆ ತಿಳಿಯಿತು. 'ಪ್ರದೀಪ' ಪತ್ರಿಕೆಯ ಸಂಪಾದಕ ಹರೀಂದ್ರ ನಿಂದ ವಿಷಯವೆಲ್ಲಾ ಆಮೂಲಾಗ್ರವಾಗಿ ತಿಳಿಯಿತು. "ರಮಾದೇವಿಯು ಮೂರು ಸಾವಿರ ರೂಪಾಯಿಗಳನ್ನು 'ಚಿತ್ರಕೂಟ'ಕ್ಕೆ ಚಂದಾ ಕೊಟ್ಟಿದ್ದಾಳೆ" ಎಂದು ಹರೀಂದ್ರನು ಹೇಳಿದನು. ರಂಗರಾಯನಿಗೆ ಮೈಯೆಲ್ಲ ಬೆಂಕಿ ಬೆಂಕಿ ಯಾಯಿತು. ಮನೆಗೆ ಬಂದನು. ಮಹಡಿಯ ಮೇಲೆ ಹೋಗಿ ನೋಡಿದನು. ಕತ್ತಲೆ ಕವಿದಿತ್ತು. ರಮಾದೇವಿಯು ಮನೆಯಲ್ಲಿರಲಿಲ್ಲ. ಒಬ್ಬನೇ ಕುಳಿತು ಕುಡಿಯುವುದಕ್ಕೆ ಆರಂಭಿಸಿದನು. ಸ್ವಲ್ಪಹೊತ್ತಿನಲ್ಲಿಯೇ ರಮಾದೇವಿಯು ಮನೆಗೆ ಬಂದು ಕೋಣೆಗೆ ಹೋದಳು. ಅವಳ ಕಾಲು ಸಪ್ಪಳ ಕೇಳಿ ರಂಗ ರಾಯನು "ರಮಾ! ರಮಾ!" ಎಂದು ಕೂಗಿದನು.

ರಮಾದೇವಿಯು ನಗುನಗುತ್ತಾ ಎದುರಿಗೆ ಬಂದು ನಿಂತಳು.

"ಏನು ರಮಾ! ಏನು ಮಾಡಿಬಿಟ್ಟೆ?"

ರಮಾ ಮೌನವಾಗಿ ನಿಂತಿದ್ದಳು.

"ನೀನು 'ಚಿತ್ರಕೂಟ'ಕ್ಕೆ ಹಣ ಕೊಟ್ಟೆಯಾ?"

"ಹೌದು. ಕೊಟ್ಟೆ!"

"ಏಕೆ ಕೊಟ್ಟೆ?"

"ನಿಮಗೋಸ್ಕರ!"

"ಎಷ್ಟು ಹಣ?"

ರಮಾದೇವಿಯು ತನ್ನ ಕೋಣೆಗೆ ಓಡಿ ಹೋಗಿ ತನ್ನ ಪೆಟ್ಟಿಗೆಯಲ್ಲಿಟ್ಟಿದ್ದ ರಸೀದಿಯನ್ನು ತಂದು ರಂಗರಾಯನ ಕೈಲಿ ಕೊಟ್ಟಳು.

"ಮೂರು ಸಾವಿರ ರೂಪಾಯಿಗಳು! ಇಷ್ಟು ಹಣವೆಲ್ಲಿ ಸಿಕ್ಕಿತು?"

" ನನ್ನಲ್ಲಿದ್ದ ಚಿನ್ನವನ್ನು ಮಾರಿ ಕೊಟ್ಟೆ ! "

" ಚಿನ್ನ—ಚಿನ್ನ. ನಿನ್ನಲ್ಲಿ ಚಿನ್ನವೆಲ್ಲಿತ್ತು ? "

" ನಮ್ಮತ್ತೆಯು ನನಗೆ ಕೊಟ್ಟಿದ್ದ ಚಿನ್ನ ! "

" ಓಹೋ ನಿಮ್ಮ ಅತ್ತೆಯ ಚಿನ್ನ ! ಅದನ್ನು ಹೇಗೆ ಮಾರಿದೆ ? "

" ಸರಾಫ್ ಕಟ್ಟೆಯಲ್ಲಿ ಬೆಲೆ ಕಟ್ಟಿಸಿ ಮಾರಿ ' ಚಿತ್ರಕೂಟ 'ಕ್ಕೆ ಹಣ ಕೊಟ್ಟೆ ! "

" ನೀನು ಇಷ್ಟು ಗಂಡುಬೀರಿಯೆಂದು ತಿಳಿದಿರಲಿಲ್ಲ. ಆ ಬೀದಿಯ ಬಸವಿಯರ ಜೊತೆ ಸೇರಿ ಇಷ್ಟು ಗಂಡುಬೀರಿಯಾದೆ. ಈ ಊರಿನಲ್ಲಿ ನನ್ನ ಮರ್ಯಾದೆಯನ್ನು ಮೂರುಕಾಸಿಗೆ ಮಾರಿಬಿಟ್ಟೆ ! ಇನ್ನು ನಾನು ಬದುಕಿದ್ದರೂ ಒಂದೇ, ಸತ್ತರೂ ಒಂದೇ. ನನ್ನ ಹೆಂಡತಿ ಪೇಟೆ ಬೀದಿಯಲ್ಲಿ ಚಿನ್ನ ಮಾರಿ ದುಡ್ಡು ತರುವುದು ! ನನ್ನ ವಿರೋಧಿಗಳಿಗೆ ಆ ಹಣ ಕೊಟ್ಟು ನನಗೆಷ್ಟು ಅಪಖ್ಯಾತಿ ತಂದೆ. "

" ನಾನೇನು ತಪ್ಪು ಮಾಡಿಲ್ಲ ! "

ರಂಗರಾಯನಿಗೆ ಕೋಪ ಬಂತು. ಎದ್ದು ಬಂದು ರಮಾದೇವಿಯ ಕಪಾಲಕ್ಕೆ ಒಂದೇಟು ಕೊಟ್ಟು " ನೀನೇನೂ ತಪ್ಪು ಮಾಡಿಲ್ಲ ! ನಾನೇ ತಪ್ಪು ಮಾಡಿದೆ ಅಲ್ಲವೇ ? " ಎಂದು ಹಲ್ಲು ಕಡಿದನು.

ರಮಾದೇವಿಯು ತತ್ತರಿಸಿ ಕೆಳಗೆ ಬಿದ್ದಳು. ಕ್ಷಣದಲ್ಲಿ ಚೇತರಿಸಿಕೊಂಡು ಎದ್ದು ಸರಸರನೆ ತನ್ನ ಕೋಣೆಗೆ ಹೋಗುತ್ತಿದ್ದಳು.

ರಂಗರಾಯನು ಎದ್ದು ಹೋಗಿ ರಮಾದೇವಿಯನ್ನು ಕೈಹಿಡಿದು ಎಳೆದು " ಎಲ್ಲಿಗೆ ಹೋಗುತ್ತಿ ! ನೀನು ಮನೆ ಬಿಟ್ಟು ಹೊರಡು. ನನ್ನ ಮನೆಯಲ್ಲಿ ನೀನು ಇನ್ನೊಂದು ಕ್ಷಣವೂ ಇರಕೂಡದು " ಎಂದು ಗದ್ದರಿಸಿದನು.

ರಮಾದೇವಿಯು ಅಳುತ್ತಾ " ನಾನೆಲ್ಲಿಗೆ ಹೋಗಲಿ ! " ಎಂದಳು.

" ನೀನು ಆ ಕುಲಘಾತಕಿಯರ ಮನೆಗೇ ಹೋಗು, ಬೀದಿಯ

ಭಿಕಾರಿಯಾಗಿ ಹೋಗು. ನಾನೂ ಈ ಊರಿನಲ್ಲಿರುವುದಿಲ್ಲ. ನಿನ್ನ ಸಹವಾಸ ಸಾಕು" ಎಂದು ರಮಾದೇವಿಯನ್ನು ಮಹಡಿಯ ಮೆಟ್ಟಿಲುಗಳಿಂದ ತಳ್ಳಿದನು. ರಮಾದೇವಿಯು ಹೊರಳುತ್ತ ಕೆಳಗೆ ಬಿದ್ದಳು.

ರಂಗರಾಯನು ದುರುದುರನೆ ನೋಡುತ್ತಿದ್ದನು. ರಮಾದೇವಿಗೆ ಹೆಚ್ಚು ಪೆಟ್ಟಾಗಿರಲಿಲ್ಲ. ಕೈಕಾಲುಗಳು ತರೆದುಹೋಗಿದ್ದುವು. ಅವಳು ಚೇತರಿಸಿಕೊಂಡು ಎದ್ದಳು. ಸ್ವಲ್ಪ ಹೊತ್ತು ಆಲೋಚನೆ ಮಾಡಿದಳು. ಬೀದಿಯ ಬಾಗಿಲ ಕಡೆ ಹೋದಳು: ಬಾಗಿಲು ತೆಗೆದುಕೊಂಡು ಬೀದಿಗೆ ಹೋದಳು. ರಂಗರಾಯನು ಹಸಿದ ಹುಲಿಯಂತೆ ಅವಳನ್ನು ನೋಡುತ್ತಿದ್ದನು. ಅವಳು ಬೀದಿಯಲ್ಲಿ ಸರಸರನೆ ಹೋಗುತ್ತಿದ್ದಳು.

ರಂಗರಾಯನು "ಎಲ್ಲಿ ಹೋಗುತ್ತಾಳೆ! ಎಲ್ಲಿಗಾದರೂ ಹೋಗಲಿ. ಆ ಶ್ಯಾಮಲೆಯ ಜೊತೆಗೇ ಇವಳೂ ಸೇರಿಕೊಳ್ಳುತ್ತಾಳೆ. ಹೋಗಲಿ! ನಾನು ಇನ್ನು ಈ ಊರಿನಲ್ಲಿ ತಲೆ ಎತ್ತಿ ತಿರುಗುವಂತಿಲ್ಲ. ಮರ್ಯಾದೆಯಾಗಿ ಬಾಳುವಂತಿಲ್ಲ! ನಾನೇ ಎಲ್ಲಿಯಾದರೂ ದೇಶಾಂತರ ಹೊರಟುಹೋಗುತ್ತೇನೆ. ಈ ರಾತ್ರಿಯೇ ನಾನೂ ಈ ಊರು ಬಿಟ್ಟು ಹೋಗುತ್ತೇನೆ" ಎಂದುಕೊಂಡನು.

ಮಹಡಿಯ ಮೇಲೆ ಹೋಗಿ ಗಡಿಯಾರವನ್ನು ನೋಡಿದನು. ಹತ್ತೂ ಮುಕ್ಕಾಲು ಗಂಟೆ ಹೊಡೆದಿತ್ತು. ರೈಲು ಹೊರಟುಬಿಟ್ಟಿದೆ, ಎಂದುಕೊಂಡು ಸೋಫಾದ ಮೇಲೆ ಕುಕ್ಕರಿಸಿಬಿಟ್ಟನು. ಮತ್ತೆ ಎದ್ದು ಹೋಗಿ ಒಂದು ಪೆಗ್ ವಿಸ್ಕಿ ಹಾಕಿಕೊಂಡು ಪುನಃ ಉತ್ತೇಜಿತನಾದನು.

"ನಾನು ಊರು ಬಿಟ್ಟು ಹೊರಟುಹೋಗುವುದೇನೋ ಖಂಡಿತ. ಈ ರಮಾ, ಆ ಶ್ಯಾಮಲಾ, ಆ ತಾರಾ ಇವರಿಗೆಲ್ಲಾ ತಕ್ಕ ಶಾಸ್ತಿ ಮಾಡಿ ಈ ಊರು ಬಿಡುತ್ತೇನೆ. ಇವರು ಮೂವರನ್ನೂ ಬೀದಿಯ ಬಸವಿಯರಾಗಿ ಮಾಡಿ, ಈ ಊರು ಬಿಟ್ಟು ಹೋಗುತ್ತೇನೆ.

"ಧರ್ಮಿಷ್ಠರಿಗೆ ನ್ಯಾಯವಂತರಿಗೆ ಕಾಲವಲ್ಲ!"

ಎಂದು ಘಟ್ಟಿಯಾಗಿ ಹೇಳಿ ವಿಕಟವಾದ ನಗುವನ್ನು ನಕ್ಕನು. ತನ್ನ

ಹಾಸಿಗೆಯ ಮೇಲೆ ಹೋಗಿ ಮಲಗಿದನು. ನಿದ್ದೆ ಬರಲಿಲ್ಲವಾದುದರಿಂದ ಹಾಗೆಯೇ ಹಾಸಿಗೆಯ ಮೇಲೆ ಹೊರಳುತ್ತಿದ್ದನು. ಹಾವಿನಂತೆ ಬುಸುಗುಟ್ಟುತ್ತಿದ್ದನು. ಎದ್ದು ಮನೆಯೆಲ್ಲಾ ಓಡಾಡುತ್ತಿದ್ದನು. ಪುನಃ ಹೋಗಿ ಹಾಸಿಗೆಯ ಮೇಲೆ ಮಲಗುತ್ತಿದ್ದನು. ಹೀಗೆಯೇ ರಾತ್ರಿ ಕಳೆಯಿತು.

೨೯

ರಮಾದೇವಿಯು ರಂಗರಾಯನ ಮನೆ ಬಿಟ್ಟು ಹೊರಟು 'ಚಿತ್ರಕೂಟ'ದ ಮುಂದೆ ಹೋಗಿ ನಿಂತಳು. ಆಗ ಆ ಭವನವೆಲ್ಲವೂ ಪ್ರಶಾಂತವಾಗಿದ್ದಿತು. ಆವಳಿಗೆ ಇದ್ದ ನೆರವು ಅದೊಂದೇ! ಶ್ಯಾಮಲಾದೇವಿಯು ಪ್ರೀತಿಯಿಂದ ಆದರಿಸುತ್ತಾಳೆಂದು ಅವಳಿಗೆ ನಂಬುಗೆ ಇತ್ತು. ಆದರೆ ಈ ಹೀನಾವಸ್ಥೆಯಲ್ಲಿ ಶ್ಯಾಮಲಾದೇವಿಗೆ ಮುಖ ತೋರಿಸುವುದು ಹೇಗೆ? ಮನೆಯಿಂದ ಓಡಿ ಬಂದ ಕಾರಣವನ್ನು ಹೇಳುವುದು ಹೇಗೆ? ರಮಾದೇವಿಗೆ ಅದೆಲ್ಲಾ ಕಷ್ಟಕರವಾಗಿ ತೋರಿತು! ಅಲ್ಲಿಂದ ಮುಂದಕ್ಕೆ ಹೊರಟಳು. ಚಾಮುಂಡಿ ಬೆಟ್ಟದ ಕಡೆ ಹೋದಳು. ಸ್ವಲ್ಪ ದೂರದಲ್ಲಿಯೇ ಒಂದು ಕೊಳವು ಸಿಕ್ಕಿತು. ಕೊಳದ ಕಲ್ಲು ಗಳ ಮೇಲೆ ಕುಳಿತುಕೊಂಡಳು. ಮೇಲೆ ಬೆಳುದಿಂಗಳು ಚೆಲ್ಲಿತ್ತು. ಹಿಂದೆ-ಹಿಂದೆ ತಾನು ಬಂದ ದಾರಿಯನ್ನು ನೋಡಿದಳು. ರಂಗರಾಯನು ಬರುತ್ತಾ ನೇನೋ ಎಂದು ಅವಳಿಗೆ ಭ್ರಾಂತಿ! ಇನ್ನು ನನ್ನ ಹಿಂದೆ ಬರಲು 'ಅವನಿ ಗೇನು ಅಧಿಕಾರ!' ಎಂದು ಕ್ರೋಧಾವೇಶವು ಬಂತು! ಹಾಗೆಯೇ ಕುಳಿತು ಕೊಂಡು ತನ್ನ ಪೂರ್ವ ಚರಿತ್ರೆಯನ್ನೆಲ್ಲಾ ಯೋಚಿಸಿದಳು. 'ತಪ್ಪು ನನ್ನದೋ? ರಂಗರಾಯನದೋ? ನನ್ನದೇ ತಪ್ಪು! ಅವನ ಐಶ್ವರ್ಯಕ್ಕೆ ಮರುಳಾಗಿ ನಾನೇ ಅವನ ಪತ್ನಿಯಾಗಲು ಒಪ್ಪಲಿಲ್ಲವೆ?' ಎಂದುಕೊಂಡಳು. 'ಮುಂದೇನು ಮಾಡಬೇಕು. ಊರು ಬಿಟ್ಟು ಹೊರಟು ಹೋಗಬೇಕು. ಎಲ್ಲಿಗೆ ಹೋಗು ವುದು. ಎಲ್ಲಿ ಹೋದರೂ ಈ ನವತಾರುಣ್ಯ, ಈ ಹಾಳು ರೂಪ ಅಡ್ಡಿ! ಎಲ್ಲಿಗೂ ಹೋಗಲಾರೆ. ಶ್ಯಾಮಲಾದೇವಿಯ ಮನೆಗೆ ಹೋಗಬಹುದು. ಈ ಅಪ ಮಾನದ ಹೊರೆ ಹೊತ್ತು ಅವಳ ಮುಂದೆ ಹೇಗೆ ಹೋಗಲಿ! ಅವಳಿಗೂ ಇದೇ

ಶಾಸ್ತಿ ಆಗಿರಬಹುದು. ಆದರೆ ಅವಳಿಗೆ ತಾಯಿಯ ಮನೆ ಇತ್ತು! ಅವಳು ಪ್ರಪಂಚವನ್ನು ಗೆದ್ದುಬಿಟ್ಟಿದ್ದಾಳೆ. ಹೀಗೆ ಅನೇಕ ಯೋಚನೆಗಳನ್ನು ಮಾಡಿದಳು. ಯಾವುದೂ ತೋರಲಿಲ್ಲ. ಬೆಳಕು ಹರಿಯುವ ಹೊತ್ತಾಗುತ್ತ ಬಂತು. ರಮಾದೇವಿಯ ಮನಸ್ಸು ಚಡಪಡಿಸತೊಡಗಿತು.

'ಬೆಳಕು ಹರಿಯಕೂಡದು. ಸೂರ್ಯನು ಹುಟ್ಟಕೂಡದು. ಈ ಊರಿನಲ್ಲಿ ನನ್ನನ್ನು ಯಾರೂ ನೋಡಕೂಡದು. ಈ ಜನ ಏನು ಮಾಡುತ್ತಾರೆ. ಪುನಃ ನನ್ನನ್ನು ಹಿಡಿದುಕೊಂಡು ಹೋಗಿ ಆ ರಂಗರಾಯನ ಬೋನಿನಲ್ಲಿ ಕೂಡುತ್ತಾರೆ. ಆ ಮನೆಗೆ ಪುನಃ ನಾನು ಕಾಲಿಡುವುದಿಲ್ಲ' ಎಂದು ನಿಶ್ಚಯ ಮಾಡಿದಳು. ದುಃಖವು ಉಕ್ಕಿ ಉಕ್ಕಿ ಬಂದಿತು. ಏನೂ ತೋರದೆ ಹೋಯಿತು. ಎದ್ದು ನಿಂತಳು. 'ದೇವರೇ ಈ ಜನ್ಮ ಸಾಕು, ಎನ್ನಿಸಿತು.' ಸೆರಗನ್ನು ಬಿಗಿಯಾಗಿ ಸೊಂಟಕ್ಕೆ ಕಟ್ಟಿಕೊಂಡಳು. ಆ ಕೊಳದಲ್ಲಿ 'ದುಧುಂ' ಎಂದು ಹಾರಿದಳು. ಒಂದೆರಡು ನಿಮಿಷ ಒದ್ದಾಡಿ ಮುಳುಗೇಬಿಟ್ಟಳು!

ಎದುರುಗಡೆ ಮಂಟಪದಲ್ಲಿ ಕೆಲವು ಮಂದಿ ಗೋಸಾಯಿಗಳು ಬೆಂಕಿ ಹಾಕಿಕೊಂಡು, ಮಾತನಾಡುತ್ತಾ ಕುಳಿತಿದ್ದರು. ಒಬ್ಬರಿಗೊಬ್ಬರು ಭಂಗಿಯ ಚಿಲುಮೆಯನ್ನು ಕೊಡುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ಅವರಿಗೆ ದೊಡ್ಡ ಶಬ್ದವು ಕೇಳಿಸಿತು. ಕೊಳದ ಸಮೀಪಕ್ಕೆ ಓಡಿಬಂದರು. ಯಾರೋ ಬಂದು ಕೊಳದಲ್ಲಿ ಬಿದ್ದಿದಾರೆಂದು ಅವರಿಗೆ ಗೊತ್ತಾಯಿತು. ನೀರಿಗೆ ಒಬ್ಬನು ಹಾರಿದನು. ಇನ್ನೊಬ್ಬನೂ ಹಾರಿದನು. ಇಬ್ಬರೂ ಸೇರಿ ರಮಾದೇವಿಯನ್ನೆತ್ತಿಕೊಂಡು ಬಂದು ಚಪ್ಪಡಿಯ ಮೇಲೆ ಮಲಗಿಸಿದರು. ಅವರಲ್ಲೊಬ್ಬ ಹೊಟ್ಟೆಯ ಮೇಲೆ ಪಾದವನ್ನಿಟ್ಟು ಅದುಮಿದನು. ಸ್ವಲ್ಪಹೊತ್ತು ಅವರಿಬ್ಬರೂ ಕಣ್ಣಿನಲ್ಲಿ ಕಣ್ಣಿಟ್ಟು ನೋಡಿದರು. ಒಬ್ಬ ಆಕೆಯ ಮುಖದ ಹತ್ತಿರ ಮುಖವಿಟ್ಟು ನೋಡಿದನು. "ಶಿವಾ! ಶಿವಾ! ಜೀವವಿದೆ" ಎಂದನು. ಮತ್ತೊಬ್ಬನು ತಾವಿದ್ದ ಮಂಟಪಕ್ಕೆ ಓಡಿ ಹೋಗಿ ತನ್ನ ಚೀಲದಲ್ಲಿ ಏನೋ ಒಂದು ಔಷಧಿಯನ್ನು ತಂದು ನೀರಿನಲ್ಲಿ ತೇದು ಅವಳ ಕಣ್ಣಿಗೆ ಹಾಕಿದನು. ಮೂಗುಸೊಳ್ಳೆಗಳಲ್ಲಿ ಸುರಿದನು. ಒಂದು ಬಿದಿರು ಚಕ್ಕೆಯನ್ನು ಹಾಕಿ ಬಾಯಿ ಬಿಡಿಸಿ ಆ ಔಷಧಿಯನ್ನು ಬಾಯಿಗೂ ಹಾಕಿದನು. ಕ್ಷಣ

ಹೊತ್ತು ನಿರೀಕ್ಷಿಸಿ 'ಔಷಧಿ·ದಕ್ಕಿದೆ' ಎಂದನು. ಅವರಿಬ್ಬರೂ ಚಿಲುಮೆಯನ್ನು ಸೇದುತ್ತಾ ಪಕ್ಕದಲ್ಲಿ ಕುಳಿತುಕೊಂಡರು.

ಆ ಗೋಸಾಯಿಯು "ನಾಲ್ಕು ಗಂಟೆ ನೀರಿನಲ್ಲಿ ಮುಳುಗಿದ್ದವರನ್ನೂ ಬದುಕಿಸಬಲ್ಲೆ!" ಎಂದು ಹೇಳಿದನು.

ಹಾವು ಕಚ್ಚಿದವರನ್ನು ಬದುಕಿಸಿದ ಕಥೆ, ನೀರಿನಲ್ಲಿ ಮುಳುಗಿದವರನ್ನು ಬದುಕಿಸಿದ ಕಥೆ, ಇಂಥ ಕಥೆಗಳನ್ನೆಷ್ಟೋ ಅವರಿಬ್ಬರೂ ಹೇಳಿಕೊಂಡರು.

ಪ್ರಾತಃಕಾಲ ಹತ್ತುಗಂಟೆಯ ಸಮಯವಾಗಿರಬಹುದು. ರಮಾದೇವಿಯು ಕಣ್ಣು ಬಿಟ್ಟು ನೋಡಿದಳು. ಪುನಃ ಕಣ್ಣು ಮುಚ್ಚಿದಳು. ಆವಳಿಗೆ ಪೂರಾ ಪ್ರಜ್ಞೆ ಬಂದಿರಲಿಲ್ಲ. ಅರ್ಧ ಅರ್ಧ ಜ್ಞಾನವು ಬಂದಿತ್ತು.

ಗೋಸಾಯಿಯು "ಯಾರಮ್ಮಾ! ಎಲ್ಲಿಂದ ಬಂದೆ? ಏಕೆ ಕೊಳದಲ್ಲಿ ಹಾರಿದೆ?" ಎಂದು ಕೇಳಿದನು. ರಮಾ ಏನೋ ಗೊಣಗಿದಳು. ಅವರಿಗೆ ಅದು ಅರ್ಥವಾಗಲಿಲ್ಲ.

ಬೆಳಕು ಹರಿಯುತ್ತಲೇ ರಂಗರಾಯನು ಡಾಕ್ಟರಿಗೆ ಫೋನ್ ಮಾಡಿದನು; "ಮನೆಗೆ ಬಾ! ನನ್ನ ಭವಿಷ್ಯವೆಲ್ಲವೂ ಪೂರ್ತಿಯಾಗಿ ಹೋಗಿದೆ" ಎಂದು ಗಾಬರಿಯಿಂದ ಹೇಳಿದನು.

ಡಾಕ್ಟರು ಬಟ್ಟೆ ಹಾಕಿಕೊಂಡು, ತನ್ನ ಕಾರಿನಲ್ಲಿ ಕುಳಿತು ರಂಗರಾಯನ ಮನೆಗೆ ಬಂದರು.

ರಂಗರಾಯನು ವಿಹ್ವಲನಾಗಿ ರಾತ್ರಿ ನಡೆದ ಸಮಾಚಾರವನ್ನೆಲ್ಲಾ ಅರ್ಧ ಅರ್ಧವಾಗಿ ಹೇಳಿದನು.

ಡಾಕ್ಟರಿಗೆ ಪೂರ್ತಿಯಾಗಿ ಅರ್ಥವಾಯಿತು. ಈ ಘಟನೆಯಲ್ಲಿ ತಮ್ಮ ಪಾತ್ರವೂ ಸ್ವಲ್ಪ ಇದೆಯೆಂದು ಅವರಿಗೆ ಭಾಸವಾಯಿತು. "ಇರಲಿ! ನನ್ನದೇನೂ ತಪ್ಪಿಲ್ಲ. ನೋಡೋಣ" ಎಂದುಕೊಂಡರು.

ಡಾಕ್ಟರು "ಸರಿ! ಇಷ್ಟೊಂದು ಅನಾಹುತವಾಗುತ್ತದೆಂದು ನಾನು ಭಾವಿಸಿರಲಿಲ್ಲ. ಏನೋ ಸ್ವಲ್ಪ ಒಳಗೊಳಗೇ ಗಲಾಟೆಯಾಗಬಹುದೆಂದು

ಊಹಿಸಿದ್ದೆ. ಇದು ಇಷ್ಟು ವಿಪರೀತಕ್ಕಿಟ್ಟುಕೊಂಡಿತು " ಎಂದನು.

ರಂಗರಾಯನು " ಅದೆಲ್ಲಾ ಸರಿ. ಈಗೇನು ಮಾಡಬೇಕು. ?" ಎಂದನು.

ಡಾಕ್ಟರು " ಅಯ್ಯೋ! ನೀನು ಹೇಳಿದ ಮಾತನ್ನು ಕೇಳುವುದುಂಟೆ. ಹಾಗಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ಶ್ಯಾಮಲಾದೇವಿಯನ್ನೇ ಸರಿಪಡಿಸಿ ಕರೆತರಬಹುದಿತ್ತು. ಈಗ ಅದೆಲ್ಲಾ ಪ್ರಯೋಜನವಿಲ್ಲ. ರಮಾದೇವಿಯನ್ನು ಒಳ್ಳೆಯ ಮಾತನಾಡಿ ಮನೆಗೆ ಕರೆತರಬೇಕು. ಗೌರವದಿಂದ ಬದುಕಬೇಕು. ಅದೇ ನಾನು ಹೇಳುವ ಮಾತು. "

" ಅದೊಂದೂ ಪ್ರಯೋಜನವಿಲ್ಲ. ಇದು ಇಂದಿನ ಕಥೆಯಲ್ಲ. ಒಂದು ವರ್ಷದ ಮೇಲಾಯಿತು. ಎಂದು ರಮಾದೇವಿಗೂ ಶ್ಯಾಮಲಾದೇವಿಗೂ ಭೇಟಿಯಾಯಿತೋ ಅಂದೇ ನನ್ನ ಜೀವನದಲ್ಲಿ ಒಂದು ತೊಟ್ಟು ವಿಷ ಬಿದ್ದಿತು. ಒಂದು ವರ್ಷದಿಂದ ನಾನು ಪಟ್ಟ ಪಾಡನ್ನು ನೀನೇನು ಬಲ್ಲೆ? ನಾನು ಈ ಪ್ರಪಂಚವನ್ನು ಅನುಭವದಿಂದ ಚೆನ್ನಾಗಿ ಅರಿತಿದ್ದೇನೆ. ಮಾನವನು ಹೆಂಗಸನ್ನು ಅಪೇಕ್ಷಿಸುತ್ತಾನೆ. ಸಮಾಜದಲ್ಲಿ ಮದುವೆಯೆಂಬ ಶಾಸ್ತ್ರ ಒಂದಿದೆ. ಆ ಶಾಸ್ತ್ರವಾದ ಮೇಲೆ ಅವಳು ಹೇಗೆ ಹೇಗೆ ಹೋಗುತ್ತಿದ್ದರೆ ಹಾಗೆ ಹಾಗೆ ಅವಳ ಹಿಂದೆ ಹಿಂದೆ ಹೋಗುವುದೇ ಗೃಹಸ್ಥಾಶ್ರಮ. ಈ ಪಾಡು ನನಗೆ ಸಾಕಯ್ಯಾ. ನಾನು ಇನ್ನು ಈ ಊರಿನಲ್ಲಿರುವುದಿಲ್ಲ, ಎಲ್ಲಿಯಾದರೂ ಹೊರಟುಹೋಗುತ್ತೇನೆ. ನಾನು ಈ ನನ್ನ ಜೀವಮಾನದಲ್ಲಿ ಎರಡು ತಪ್ಪು ಮಾಡಿದ್ದೇನೆ. ಅದು ನಾನು ಮಾಡಿಕೊಂಡ ಎರಡು ಮದುವೆಗಳು. ದೇವರು ನನಗೆ ಯಥೇಚ್ಛ ಐಶ್ವರ್ಯ ಕೊಟ್ಟಿದ್ದಾನೆ. ಅವರಿಬ್ಬರಿಗೂ ಸ್ವಲ್ಪ ಸ್ವಲ್ಪ ಜೀವನಕ್ಕೆ ಕೊಟ್ಟು ಒಂದು ವಿಲ್ಲು ಮಾಡಿಬಿಡುತ್ತೇನೆ. ಆಫೀಸನ್ನು ಇಂದೇ ಮುಚ್ಚಿಬಿಡುತ್ತೇನೆ! "

" ಅದೆಲ್ಲಾ ಸರಿ! ಅದಕ್ಕೆ ನಾನೇನು ಮಾಡಬೇಕಾಗಿದೆ ? "

" ಏನೂ ಇಲ್ಲ. ಯಾರಲ್ಲಾದರೂ ನನ್ನ ಮನಸ್ಸಿನ ದುಗುಡವನ್ನು ಹೇಳಿಕೊಳ್ಳಬೇಕು. "

ಅವರಿಬ್ಬರೂ ಹಾಗೆಯೇ ಬಹಳ ಹೊತ್ತು ಮಾತನಾಡುತ್ತಿದ್ದರು.

ಡಾಕ್ಟರು ಅಪ್ಪಣೆಯನ್ನು ಪಡೆದು ಹೊರಟುಹೋದರು.

ರಂಗರಾಯನು ಹಾಗೆಯೇ ಕುಳಿತು ಯೋಚಿಸುತ್ತಿದ್ದನು. ಆ ದಿನವೆಲ್ಲಾ ಊಟ ಮಾಡಲಿಲ್ಲ. ಒಂದೆರಡು ಬಾರಿ ಪಾನ ಮಾಡಿದ್ದನು. ಕತ್ತಲು ಕವಿಯಿತು. ಕಾರಿನಲ್ಲಿ ಕುಳಿತು ತನ್ನ ಆಫೀಸಿಗೆ ಹೋದನು ಅಲ್ಲಿ ತನ್ನ ಕೋಣೆಗೆ ಹೋಗಿ, ಪತ್ರಿಕೆಗಳನ್ನು ತರಿಸಿ ಓದಿದನು.

ಪತ್ರಿಕೆಗಳಲ್ಲಿ ರಮಾದೇವಿಯ ವಿಚಾರ ಸೂಕ್ಷ್ಮವಾಗಿ ಬಂದಿತ್ತು. ' ಒಬ್ಬ ತರುಣಿ ಬೆಟ್ಟದ ಕಿಬ್ಬಿಯ ಕೆರೆಯಲ್ಲಿ ಬಿದ್ದು ಆತ್ಮಹತ್ಯ ಪ್ರಯತ್ನ ಮಾಡಿದಳು. ಯಾರೋ ದೊಡ್ಡ ಮನುಷ್ಯರ ಮನೆಯ ಹೆಂಗಸು, ಕುಲಸ್ತ್ರೀ. ಬದುಕಿಕೊಂಡಿದ್ದಾಳೆ. ಇನ್ನೂ ಜ್ಞಾನ ಬಂದಿಲ್ಲ. ಪೋಲೀಸರು ತನಿಖೆ ಕ್ರಮ ನಡಸುತ್ತಿದ್ದಾರೆ ! '—ಇಷ್ಟೇ ಪತ್ರಿಕೆಗಳಲ್ಲಿದ್ದ ಸಮಾಚಾರ.

ಆದರೆ ರಂಗರಾಯನಿಗೆ ಆ ದೃಶ್ಯ ಕಣ್ಣಿಗೆ ಕಟ್ಟಿದಂತಾಯಿತು. ಸ್ವಲ್ಪ ಹೊತ್ತು ನಿರ್ವಿಣ್ಣನಾಗಿ ಕುಳಿತಿದ್ದನು. ಮನಸ್ಸಿಗೆ ಗಾಬರಿಯಾಯಿತು. ರಮಾದೇವಿಯು ಆತ್ಮಹತ್ಯೆ ಮಾಡಿಕೊಂಡಳೆಂಬ ಗಾಬರಿಯಲ್ಲ. ತನ್ನ ಕಥೆಯೆಲ್ಲಾ ಚಿತ್ರವಿಚಿತ್ರವಾಗಿ ಜನರ ಬಾಯಿಯಲ್ಲಿ ಬರುತ್ತದಲ್ಲಾ ಎಂಬ ಗಾಬರಿ.

ಸ್ವಲ್ಪ ಹೊತ್ತಾದ ಮೇಲೆ ರಂಗರಾಯನು ಡಾಕ್ಟರ ಮನೆಗೆ ಹೋದನು. ಡಾಕ್ಟರೊಂದಿಗೆ ಮನೆಗೆ ಹೋಗಿ ತನ್ನ ಕೋಣೆಯಲ್ಲಿ ಕುಳಿತನು.

" ಡಾಕ್ಟರ್ ಸಮಾಚಾರವೆಲ್ಲಾ ತಿಳಿಯಿತೋ ? "

" ತಿಳಿಯಿತು. "

" ಏನು ತಿಳಿದುಕೊಂಡೆ ? "

" ರಮಾದೇವಿಯು ನೀರಿನಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಪಟ್ಟಳು. ಸಾಯುವಷ್ಟರಲ್ಲಿ ಯಾರೋ ಮೇಲಕ್ಕೆತ್ತಿ ಹಾಕಿದರು. ಜೀವ ಉಳಿದುಕೊಂಡಿತು. ಇನ್ನೂ ಜ್ಞಾನ ಬಂದಿಲ್ಲ. ಇಷ್ಟೇ ವಿಷಯ. "

" ಅವಳೆಲ್ಲಿದ್ದಾಳೆಂಬುದನ್ನು ತಿಳಿದುಕೊಳ್ಳಬೇಕು. "

" ಅದಕ್ಕೇನು ಕಷ್ಟ. ಪೋಲೀಸ್ ಅಧಿಕಾರಿಗಳಿಗೆ ಫೋನ್ ಮಾಡು, ಎಲ್ಲವೂ ತಿಳಿಯುತ್ತದೆ. "

" ನಾನು ಮಾಡುವುದಿಲ್ಲ. ನೀನೇ ಮಾಡಿ ತಿಳಿದುಕೋ. ನಿನಗೇನೂ ಭಯವಿಲ್ಲವಷ್ಟೆ ? "

" ನನಗೂ ಭಯವಿಲ್ಲ, ನಿನಗೂ ಭಯವಿಲ್ಲ. ನೀನು ಒಂದು ಗಂಟೆಯ ಹೊತ್ತು ಇಲ್ಲಿಯೇ ಇರು. ನಾನು ಎಲ್ಲವನ್ನೂ ತಿಳಿದುಕೊಂಡು ಬರುತ್ತೇನೆ "

ಡಾಕ್ಟರ್, ರಂಗರಾಯನ ಮನೆಯಿಂದ ಹೊರಟು ಕಾಲು ನಡಗೆಯಲ್ಲಿಯೇ ತಮ್ಮ ಮನೆ ಸೇರಿದರು. ಅಲ್ಲಿಂದ ಪೋಲೀಸ್ ಅಧಿಕಾರಿಗಳಿಗೆ ಫೋನ್ ಮಾಡಿದರು. ಪೋಲೀಸ್ ಅಧಿಕಾರಿಯು ಡಾಕ್ಟರ ಸ್ನೇಹಿತ. " ಏನಯ್ಯಾ! ಮಾಧವ ರಾವ್, ಏನು ಸಮಾಚಾರ ? " ಎಂದು ಫೋನ್‌ನಲ್ಲಿ ಕೇಳಿದರು.

ಪೋಲೀಸ್ ಅಧಿಕಾರಿಯು " ಸಮಾಚಾರವೆ? ಇವತ್ತೆಲ್ಲಾ ಮನೆಗೇ ಹೋಗಿಲ್ಲ ! " ಎಂದು ಹೇಳಿದನು.

" ಏನಯ್ಯಾ ! ಅಷ್ಟು ಸಡಗರ ? "

" ನಿನಗೆ ಗೊತ್ತಿಲ್ಲವೇ ಆ ಕಥೆ! ಆ ನೀರಿನಲ್ಲಿ ಬಿದ್ದ ಹುಡುಗಿ ರಮಾ ದೇವಿ, ರಂಗರಾಯನ ಹೆಂಡತಿ ! "

" ಏಕೆ ನೀರಿನಲ್ಲಿ ಬಿದ್ದಳು ? "

" ಅದಿನ್ನೂ ತಿಳಿದಿಲ್ಲ. ಅವಳಿಗಿನ್ನೂ ಪೂರ್ತಿಯಾಗಿ ಜ್ಞಾನ ಬಂದಿಲ್ಲ ಅವಳು ಹೇಳುವುದೂ ಇಲ್ಲ. ಗೊತ್ತಾಗುತ್ತದೆ ನಾಳೆಯೋ ನಾಡಿದ್ದೋ ಈ ದೊಡ್ಡ ಮನುಷ್ಯರ ಮನೆಯ ಕಥೆಗಳೆಲ್ಲಾ ಗೊತ್ತೇ ಇದೆಯಲ್ಲಾ. "

" ಸರಿ ! ಅವಳೆಲ್ಲಿದ್ದಾಳೆ. "

" ಅವಳು ರಂಗರಾಯರ ಹೆಂಡತಿಯೆಂದು ತಿಳಿಯುತ್ತಲೇ ಅವ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕೆಂದುಕೊಂಡೆವು. ಅವಳನ್ನು ಮೂರು ನಾಲ್ಕು ಬಾರಿ 'ಮನೆಗೆ ಹೋಗುತ್ತೀಯಾ?' ಎಂದು ಕೇಳಿದೆವು. ಅವಳ ' ಇಲ್ಲ—ಇಲ್ಲ, ಕೊಲ್ಲುತ್ತಾರೆ ! ' ಎಂದು ಅಸ್ಪಷ್ಟವಾಗಿ ಹೇಳಿದಳು. ಅದನ್ನೆಲ್ಲ ರಿಕಾರ್ಡು ಮಾಡಿಕೊಂಡಿಲ್ಲ. ಏನೋ ಇದೆ ! ಈಗ ಸಂಜೆಯಾದ ಮೇ ಕಾಂಗ್ರೆಸ್ ಸೆಕ್ರೆಟರಿ ನಾರಾಯಣರಾಯರು ಬಂದು ವಿಚಾರಿಸಿದರು. ಅ ರೊಡನೆ ಕಳುಹಿಸಿಕೊಟ್ಟೆವು. ಈಗ ಅವಳು ' ಚಿತ್ರಕೂಟ 'ದ ವನಿತಾಶ್ರಮ

ದಲ್ಲಿದ್ದಾಳೆ. ”

“ ನಾನು ಹೋಗಿ ನೋಡಲೇನಯ್ಯಾ ? ”

“ ನೋಡು ! ಅದಕ್ಕೇನಡ್ಡಿಯಿದೆ. ಡಾಕ್ಟರಿಗೆ ಅದೊಂದು ದೊಡ್ಡ ಪ್ರಿವಿಲೇಜು. ”

ಡಾಕ್ಟರು ಫೋನನ್ನು ಕೆಳಗಿಟ್ಟು ತಕ್ಷಣವೇ ತಮ್ಮ ಕಾರಿನಲ್ಲಿ ಕುಳಿತು ವನಿತಾಶ್ರಮಕ್ಕೆ ಹೋದರು.

ವನಿತಾಶ್ರಮದಲ್ಲಿ ಒಂದು ಮಂಚದ ಮೇಲೆ ರಮಾದೇವಿಯನ್ನು ಮಲಗಿಸಿದ್ದರು. ಪಕ್ಕದಲ್ಲಿ ಶ್ಯಾಮಲಾ—ತಾರಾ ಇಬ್ಬರೂ ಕುಳಿತಿದ್ದರು. ಮತ್ತಾರೂ ಇರಲಿಲ್ಲ. ಡಾಕ್ಟರು ಒಳಗೆ ನಿಧಾನವಾಗಿ ಹೋದರು. ಮೆಲ್ಲನೆಯ ದನಿಯಿಂದ “ ರಮಾದೇವಿ ಹೇಗಿದಾರೆ ? ” ಎಂದು ಕೇಳಿದರು.

ಶ್ಯಾಮಲಾ “ ಬನ್ನಿ ಡಾಕ್ಟರೇ ! ನೀವೇ ನೋಡಿ ! ಬದುಕುತ್ತಾಳೋ ಇಲ್ಲವೋ ಹೇಳಿ. ಅವಳಿಗೆ ಸರಿಯಾಗಿ ಜ್ಞಾನ ಬಂದಿಲ್ಲ. ಏನೇನೋ ಮಾತನಾಡುತ್ತಾಳೆ. ಅದೆಲ್ಲಾ ಅರ್ಥವಾಗುವುದಿಲ್ಲ ” ಎಂದಳು.

ಡಾಕ್ಟರು ಕೈಮುಟ್ಟಿ ನೋಡಿದರು. ಜ್ವರ ಇತ್ತು ! ಶರೀರವನ್ನೆಲ್ಲಾ ಪರೀಕ್ಷಿಸಿದರು.

“ ಪಕ್ಕೆಗೆ ಏಟು ತಗುಲಿದೆ. ಎಲ್ಲಯೋ ಕಲ್ಲು ತಗುಲಿರಬೇಕು ” ಎಂದರು. ತಮ್ಮ ಚರ್ಮದ ಬ್ಯಾಗಿನಿಂದ ಇಂಜೆಕ್ಷನ್ನಿನ ಸಲಕರಣೆಗಳನ್ನು ತೆಗೆದು ಒಂದು ಇಂಜಕ್ಷನ್ ಕೊಟ್ಟು “ ಮನೆಗೆ ಹೋಗಿ ಔಷಧಿ ಕಳಿಸುತ್ತೇನೆ. ಎರಡೆರಡು ಗಂಟೆಗೆ ಒಂದಾವರ್ತಿ ಕೊಡಿ ! ಈ ರಮಾದೇವಿ ! ಮಾನವಂತಳಾದ ಹುಡುಗಿ ! ಇವಳೇಕೆ ಮನೆ ಬಿಟ್ಟು ಹೋದಳೋ ! ಏಕೆ ಆತ್ಮಹತ್ಯ ಮಾಡಿಕೊಳ್ಳಲು ಹೊರಟಳೋ ಒಂದೂ ಗೊತ್ತಾಗುವುದಿಲ್ಲ. ಆ ರಂಗರಾಯನು ಹುಚ್ಚು ಮನುಷ್ಯ ! ಅವನ ಸಹವಾಸ ಕಷ್ಟ ! ” ಎಂದು ಡಾಕ್ಟರು ಹೇಳಿದರು.

“ ಹೌದು. ಅದೊಂದೂ ಗೊತ್ತಾಗುವುದಿಲ್ಲ. ಆ ಮನೆಯಲ್ಲಿ ಪ್ರತಿದಿನ ಇಂಥಾ ಗಂಡಾಂತರಗಳಿದ್ದೇ ಇವೆ. ಏನೋ ಮನಸ್ಸು ರೋಸಿ ಹೋಗಿ ಹೊರಟುಬಿಟ್ಟಿದ್ದಾಳೆ. ಡಾಕ್ಟರೇ ! ಇವಳು ಬದುಕುತ್ತಾಳೆಯೆ ? ”

“ ಬದುಕದೇ ಏನು ! ಆ ಪೆಟ್ಟು ಎದೆಗೆ ಬಿದ್ದಿದ್ದರೆ ಹೆಣವೇ ಕೈಗೆ ಸಿಕ್ಕುತ್ತಿತ್ತು. ಈಗೇನೂ ಬಾಧಕವಿಲ್ಲ ನಾಲ್ಕಾರು ದಿನಗಳಲ್ಲಿ ಸರಿಹೋಗುತ್ತೆ ” ಎಂದು ಹೇಳಿ ಡಾಕ್ಟರು ಅಲ್ಲಿಂದ ಹೊರಟರು.

ರಂಗರಾಯನ ಮನೆಗೆ ಹೋದಾಗ ರಂಗರಾಯನು ಮಹಡಿಯ ಮೇಲೆ ಕುಳಿತಿದ್ದನು. ಡಾಕ್ಟರು ಮಹಡಿಯ ಮೆಟ್ಟಲುಗಳನ್ನು ಹತ್ತಿ ಹೋಗಿ ರಂಗರಾಯನ ಪಕ್ಕದಲ್ಲಿ ಕುಳಿತುಕೊಂಡರು.

ರಂಗರಾಯನು “ ಏನಯ್ಯಾ ! ಸಮಾಚಾರವೇನಾದರೂ ತಿಳಿಯಿತೇ ?” ಎಂದು ಕೇಳಿದನು.

“ ಎಲ್ಲವೂ ತಿಳಿಯಿತು ” ಎಂದು ಮೊದಲಿನಿಂದ ಆರಂಭಿಸಿ ವನಿತಾಶ್ರಮದಲ್ಲಿ ತಾನು ನೋಡಿದ ವರೆಗೆ ಡಾಕ್ಟರ್ ಕಥೆಯನ್ನು ಹೇಳಿದರು.

“ ಅವಳ ಆತ್ಮಹತ್ಯ ಪ್ರಯತ್ನದ ಕಾರಣ ಮಾತ್ರ ಹೊರಬೀಳಲಿಲ್ಲ. ಅವಳಿಗಿನ್ನೂ ಸರಿಯಾಗಿ ಜ್ಞಾನ ಬಂದಿಲ್ಲ. ಜ್ಞಾನ ಬಂದರೂ ಪರವಾ ಇಲ್ಲ. ಅದನ್ನೆಲ್ಲಾ ಮುಚ್ಚಿಬಿಡಬಹುದು. ”

“ ಮುಚ್ಚುವುದೇನಿದೆ. ನಾನೇನು ಹೊಡೆಯಲಿಲ್ಲ ಬಡಿಯಲಿಲ್ಲ. ನನಗೇನು ಭಯ. ಕೆರೆಯ ನೀರು ಕೆರೆಯನ್ನೇ ಸೇರಿತು. ಅವಳೂ ‘ ಚಿತ್ರಕೂಟ ’ ಸೇರಿದಳು. ಹಾಳಾಗಿ ಹೋಗಲಿ ನನಗೇನು ? ”

ಡಾಕ್ಟರು ರಂಗರಾಯನನ್ನು ಸಮಾಧಾನಗೊಳಿಸಿ ಮನೆಗೆ ಹೊರಟು ಹೋದರು.

ರಮಾದೇವಿಯು ಸ್ವಸ್ಥವಾಗುವುದಕ್ಕೆ ಹತ್ತು ಹನ್ನೆರಡು ದಿನಗಳಾದುವು. ರಂಗರಾಯನು ಊರು ಬಿಟ್ಟು ಹೊರಟು ಹೋಗಬೇಕೆಂಬುದೇನೋ ಸಿದ್ಧಾಂತ ಮಾಡಿಕೊಂಡಿದ್ದನು. ಆದರೆ ಅದರ ಭಾರವನ್ನು ಅಷ್ಟು ಬೇಗ ಮುಗಿಸಿಬಿಡುವುದಕ್ಕಾಗುತ್ತದೆಯೇ ? ಎಲ್ಲವನ್ನೂ ಒಂದು ವಿಧವಾಗಿ ಮುಗಿಸುವುದಕ್ಕೆ ದಿನದಿನವೂ ತಳ್ಳುತ್ತಿತ್ತು.

ಪ್ರತಿದಿನವೂ ಸ್ವಲ್ಪ ಕಾಲವನ್ನಾದರೂ ಡಾಕ್ಟರೊಡನೆ ಕಳೆಯುತ್ತಿದ್ದನು. ಅವರಿಬ್ಬರೂ ಸೇರಿದಾಗ ಬೇಡಬೇಡವೆಂದರೂ ರಮಾದೇವಿಯ ಮಾತು ಬಂದೇ

ಬಿಡುತ್ತಿತ್ತು.

ರಂಗರಾಯನು "ಸುಬ್ಬರಾವ್! ಈ ರಮಾದೇವಿಯದು ಅಷ್ಟೇನೂ ತಪ್ಪಿಲ್ಲ. ಆ ಶ್ಯಾಮಲಾ ಬಲು ಕೆಟ್ಟ ಹೆಂಗಸು. ಇವಳಿಗೆ ಮಂಕು ಬೂದಿ ಹಾಕಿದಳು. ಅಷ್ಟು ಹಣವನ್ನೂ ತೆಗೆದುಕೊಂಡು ಹೋಗಿ ಇವಳು ಕೊಟ್ಟು ಬಿಟ್ಟಳು. ನಾನು ಪ್ರಶ್ನೆ ಮಾಡಿದಾಗಲೂ ಇವಳೇನೂ ಸುಳ್ಳು ಹೇಳಲಿಲ್ಲ. ನಿಜವನ್ನೇ ನುಡಿದಳು. ನನಗೇನೋ ಸ್ವಲ್ಪ ಅವಮಾನವಾದಂತೆಯೇ ಆಯಿತು. ಸ್ವಲ್ಪ ಬುದ್ಧಿಯ ಮಾತುಗಳನ್ನು ಹೇಳಿದೆ. ಕೋಪಿಸಿಕೊಂಡು ಮನೆ ಬಿಟ್ಟು ಹೊರಟೇ ಹೋದಳು. ಅವಳ ಹಿಂದೆ ಹಿಂದೆಯೇ ಹೋದೆ. 'ಚಿತ್ರಕೂಟ'ಕ್ಕೆ ಹೋಗುತ್ತಿದ್ದಳು. ಹೋಗಲಿ ಎಂದುಕೊಂಡು ಸುಮ್ಮನಿದ್ದೆ ಆಮೇಲೆ ಇಂಥಾ ಪ್ರಮಾದವನ್ನು ಮಾಡುತ್ತಾಳೆಂದು ನಾನೆಂದೂ ಭಾವಿಸಿರಲಿಲ್ಲ. ನನಗೆ ತಲೆ ಎತ್ತದಂತೆ ಅವಮಾನ ಮಾಡಿಬಿಟ್ಟಳು. ಎಂಥಹ ಮೂರ್ಖ ಹೆಣ್ಣು? ಎಷ್ಟು ಪ್ರಮಾದವಾಗಿ ಹೋಯಿತು!"

ಡಾಕ್ಟರು ನಗುತ್ತಾ "ಅದೆಲ್ಲಾ ಉಪಯೋಗವಿಲ್ಲದ ಮಾತು. ನಿನಗೆ ಹೆಣ್ಣಿನ ಚಪಲ. ಕೋಪ ಬಂತು ಬೇಡವೆಂದೆ. ತಿರುಗಿ ಮನಸ್ಸು ಅತ್ತಕಡೆಯೇ ಎಳೆಯುತ್ತಿದೆ. ಇದೊಂದೂ ನಡೆಯುವುದಿಲ್ಲವಯ್ಯಾ. ಈ ಕಾಲದ ಹೆಂಗಸರು ಸಾಮಾನ್ಯರಲ್ಲ. ಯಾವುದಕ್ಕೂ ಅಂಜುವವರಲ್ಲ. ನೀನು ನೇರವಾಗಿ ವನಿತಾ ಶ್ರಮಕ್ಕೆ ಹೋಗು. ರಮಾದೇವಿಯಲ್ಲಿ ಕ್ಷಮಾಪ್ರಾರ್ಥನೆ ಮಾಡಿಕೋ. ಸುಮ್ಮನೆ ಮನೆಗೆ ಕರೆದುಕೊಂಡು ಬಾ ಎಲ್ಲವೂ ಸರಿಹೋಗುತ್ತದೆ" ಎಂದರು.

"ಏನು ಮಾತನಾಡುತ್ತೀಯೆ ಡಾಕ್ಟರ್? ನನಗೇನೂ ಮಾನ ಮರ್ಯಾದೆ ಗಳಿಲ್ಲವೆಂದುಕೊಂಡಿದ್ದೀಯಾ? ಜನ ಏನೆಂದುಕೊಂಡಾರು?"

"ಜನಕ್ಕೇನು ಹೀಗೂ ಅಂದುಕೊಳ್ಳುತ್ತಾರೆ. ಹಾಗೂ ಅಂದುಕೊಳ್ಳು ತ್ತಾರೆ. ಎರಡು ದಿವಸ ಕಳೆದುಹೋದರೆ ಇದನ್ನೆಲ್ಲಾ ಮರೆತುಬಿಡುತ್ತಾರೆ. ಅಷ್ಟೇ ಪ್ರಪಂಚ. ನೀನು ಏನಾದರೂ ಮಾಡಿ ರಮಾದೇವಿಯನ್ನು ಮನೆಗೆ ಕರೆದುಕೊಂಡು ಬಾ."

ಡಾಕ್ಟರು ಹೊರಟುಹೋದ ಮೇಲೆ ರಂಗರಾಯನು ಬಹಳ ಹೊತ್ತು

ಯೋಚಿಸಿದನು. “ ಸುಬ್ಬರಾವ್ ಬಹಳ ಬುದ್ಧಿವಂತ. ಸಮಯಕ್ಕೆ ಸರಿಯಾದ ಸಲಹೆ ಹೇಳುತ್ತಾನೆ. ಮನಶ್ಶಾಸ್ತ್ರವನ್ನು ಚೆನ್ನಾಗಿ ಅರಿತಿದ್ದಾನೆ. ರಮಾದೇವಿಯದೇನು ತಪ್ಪಿದೆ ಏನೋ ಕೆಟ್ಟ ಗಳಿಗೆ, ನಾನೂ ದುಡುಕಿದೆ. ಅವಳೂ ದುಡುಕಿದಳು. ಪ್ರಮಾದವಾಗಿ ಹೋಯಿತು. ನಾಳೆ ಹೋಗಿ ನಾನೇ ಅವಳನ್ನು ಮನೆಗೆ ಕರೆತರುತ್ತೇನೆ. ” ಎಂದುಕೊಂಡನು.

ಪ್ರಾತಃಕಾಲವೆದ್ದು ಸ್ನಾನಮಾಡಿ ಬಟ್ಟೆಗಳನ್ನು ಹಾಕಿಕೊಂಡು ಕಾರಿನಲ್ಲಿ ಕುಳಿತುಕೊಂಡು ವನಿತಾಶ್ರಮಕ್ಕೆ ಹೊರಟನು. ಕಾಲುನಡಗೆಯಲ್ಲಿಯೇ ‘ ಚಿತ್ರಕೂಟ ’ಕ್ಕೆ ಹೋಗಿ ಬರಬಹುದಾಗಿತ್ತು. ಆದರೆ ರಮಾದೇವಿಯನ್ನು ಕರೆದುಕೊಂಡು ಬರಬೇಕು ; ಅದಕ್ಕಾಗಿ ಕಾರ್ ತೆಗೆದುಕೊಂಡು ಹೋದನು. ಕಾರನ್ನು ರಸ್ತೆಯಲ್ಲಿಯೇ ನಿಲ್ಲಿಸಿ ತಾನು ಇಳಿದು ಹೋದನು.

ವನಿತಾಶ್ರಮದ ಬಾಗಿಲಿನಲ್ಲಿ ಕಾವಲುಗಾರರಿದ್ದರು. ರಂಗರಾಯನು ಅವರನ್ನು ಕುರಿತು “ ಇಲ್ಲಿ ರಮಾದೇವಿಯೆಂಬುವರಿದ್ದಾರೆಯೇ ? ” ಎಂದು ಕೇಳಿದನು.

“ ಇದ್ದಾರೆ ಬುದ್ದಿ ” ಎಂದು ವಿನಯದಿಂದ ಆ ಕಾವಲಿನವರು ಉತ್ತರ ಕೊಟ್ಟರು.

“ ಒಳಗೆ ಹೋಗಿ ಅವರನ್ನು ಕಂಡು ಬರಬೇಕು. ”

“ ಅದಾಗದು ಬುದ್ದಿ, ದೊಡ್ಡಮ್ಮಾವರು ಬರಬೇಕು. ಅವರ ಅಪ್ಪಣೆಯಾಗಬೇಕು. ಅವರಿಲ್ಲದ ಸಮಯದಲ್ಲಿ ಯಾರನ್ನೂ ಒಳಗೆ ಬಿಡುವುದಿಲ್ಲ. ”

ರಂಗರಾಯನಿಗೆ ಸ್ವಲ್ಪ ಕೋಪ ಬಂತು. “ ಕ್ಷಮಿಸಿ ಬುದ್ದಿ. ಇಲ್ಲಿಯ ರೂಲಿಸ್ ಹಾಗಿದೆ” ಎಂದು ಕಾವಲುಗಾರ ಹೇಳಿದನು.

ರಂಗರಾಯನು ಹಾಗೆಯೇ ಸಮಾಧಾನ ಮಾಡಿಕೊಂಡು ಹಿಂತಿರುಗಿ ಹೋಗಿ ಕಾರಿನಲ್ಲಿ ಕುಳಿತುಕೊಂಡನು.

ರಂಗರಾಯನ ಮನಸ್ಸು ತಳಮಳಿಸಿತು. “ ನನ್ನ ಹೆಂಡತಿಯನ್ನು ನೋಡುವುದಕ್ಕೆ ನನಗಿಷ್ಟು ಅಡ್ಡಿಯೇ ? ಪೋಲಿಸಿಗೆ ಅರ್ಜಿಕೊಟ್ಟರೇನಾಗುತ್ತದೆ ” ಎಂದು ಆಲೋಚಿಸಿದನು. ಅದು ಇನ್ನೂ ಆಭಾಸಕ್ಕೆ ಇಟ್ಟುಕೊಳ್ಳಬ

ಹುದು. ಉಪಾಯವಾಗಿ ರಮಾದೇವಿಯನ್ನು ಮನೆಗೆ ಕರೆದುಕೊಂಡು ಹೋಗಬೇಕು. ಆಮೇಲೆ ಇವರಿಗೆ ತಕ್ಕ ಪ್ರತೀಕಾರ ಮಾಡಬೇಕು, ಎಂದು ಕೊಂಡನು.

ಅಷ್ಟರಲ್ಲಿ ಶ್ಯಾಮಲಾದೇವಿಯು ಆಶ್ರಮಕ್ಕೆ ಕಾಲು ನಡಗೆಯಿಂದಲೇ ಬಂದಳು. "ಬಾಗಿಲಲ್ಲಿ ಕಾರೊಂದು ಕಾದಿದೆ. ಯಾರಿರಬಹುದು," ಎಂದು ಯೋಚಿಸುತ್ತಾ ಆಶ್ರಮದೊಳಗೆ ಹೋದಳು. ರಮಾದೇವಿಯನ್ನು ಕಂಡು ಮಾತನಾಡಿಸಿದಳು. ರಮಾದೇವಿಯು, "ರಂಗರಾಯರು ಬಂದು ನಿಮ್ಮ ಭೇಟಿಗಾಗಿ ಕಾದಿದ್ದಾರೆ" ಎಂದು ಹೇಳಿದಳು. ಶ್ಯಾಮಲಾದೇವಿಗೆ ಮನಸ್ಸು ತಲ್ಲಣಿಸಿತು. "ನನಗೇನು ಭಯ" ಎಂದು ಧೈರ್ಯ ತಂದುಕೊಂಡಳು.

"ಯಾತಕ್ಕಾಗಿ ಬಂದಿದ್ದಾರೆ ರಮಾ?"

"ನಿಮ್ಮ ಭೇಟಿ ಮಾಡುವುದಕ್ಕೆ!"

"ಅಲ್ಲ ಬಹುಶಃ ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ಬಂದಿರ ಬಹುದು."

"ಶ್ಯಾಮಲಾದೇವಿ, ನನ್ನದೊಂದು ಮಾತಿದೆ. ನಾನು ನಿಮ್ಮ ಆಶ್ರ ಮಕ್ಕೆ ನಾನಾಗಿ ಬರಲಿಲ್ಲ. ನೀವೇ ಕರೆತಂದಿರಿ. ಈಗ ನನ್ನನ್ನು ಅವರೊ ಡನೆ ಕಳುಹಿಸ ಕೂಡದು. ಈ ಮಾತು ಸೆರಗಿನಲ್ಲಿ ಗಂಟು ಹಾಕಿಟ್ಟುಕೊಳ್ಳಿ!"

ಶ್ಯಾಮಲಾ ಕಾವಲುಗಾರನನ್ನು ಕರೆದು "ಆ ಕಾರಿನಲ್ಲಿ ಕಾದು ಕುಳಿತಿ ರುವ ದೊಡ್ಡ ಮನುಷ್ಯರನ್ನು ಕರತಂದು ಆಫೀಸಿನಲ್ಲಿ ಕೂಡಿಸು. ನಾನು ಬರು ತ್ತೇನೆ" ಎಂದು ಹೇಳಿದಳು. ಕಾವಲುಗಾರನು ಓಡಿಹೋಗಿ ರಂಗರಾಯ ನನ್ನು ಕರತಂದು ಆಫೀಸುರೂಮಿನಲ್ಲಿ ಕೂಡಿಸಿದನು.

ಶ್ಯಾಮಲಾದೇವಿಗೆ ಬಲು ಕಷ್ಟಕ್ಕೆ ಬಂದಿತು. ಬಂದಿರುವವನು ತನ್ನ ಪತಿ! ರಮಾದೇವಿಯೂ ಅವನ ಹೆಂಡತಿ! ಅವಳು ಗೃಹತ್ಯಾಗ ಮಾಡಿದ್ದಾಳೆ. ಅವನಿಗೆ ಏನು ಹೇಳಬೇಕು, ಎಂದು ಮನಸ್ಸು ಬಡಿದುಕೊಳ್ಳಲಾರಂಭಿಸಿತು. "ಇರಲಿ. ನನಗೇನು ಸಂಬಂಧ. ರಮಾದೇವಿಯು ಇಲ್ಲಿರಬೇಕೆಂಬ ಆಕಾಂಕ್ಷೆ ನನಗಿಲ್ಲ. ಅವನು ಕರದೊಯ್ದರೆ ಕರದೊಯ್ಯಲಿ!" ಎಂದುಕೊಳ್ಳುತ್ತಾ

ದಿಟ್ಟತನದಿಂದ ಬಂದು ಆಫೀಸುರೂಮಿನ ಒಂದು ಕಡೆಯಲ್ಲಿ ನಿಂತುಕೊಂಡಳು

ರಂಗರಾಯನು ತಲೆ ಎತ್ತಿ ನೋಡಿದನು. ಅವನಿಗೆ ಏನು ಮಾತನಾ
ಬೇಕೋ ಹೊಳೆಯಲಿಲ್ಲ. ಯಾರು ಮೊದಲು ಮಾತಿಗೆ ಆರಂಭಮಾಡಬೇಕು
ಎರಡು ಮೂರು ನಿಮಿಷಗಳು ಹಾಗೇ ಕಳೆದುವು.

ರಂಗರಾಯನು "ಶ್ಯಾಮಲಾ, ನಿನ್ನನ್ನು ನೋಡಿ ಬಹಳ ದಿವಸಗಳ
ದುವು. ನಿನ್ನೊಡನೆ ಉಪಚಾರ, ಮುಚ್ಚುಮರೆ ಯಾವುದೂ ಇಲ್ಲ. ನಾನ
ರಮಾದೇವಿಯನ್ನು ಮನೆಗೆ ಕರದೊಯ್ಯಲು ಬಂದಿದ್ದೇನೆ. ದಯವಿಟ್ಟು ಕಳಿ
ಕೊಡು" ಎಂದನು.

ಶ್ಯಾಮಲಾ "ರಮಾದೇವಿಯು ಬಹಳ ನೊಂದಿದ್ದಾಳೆ. ಅವಳೇ
ಮನೆ ಬಿಟ್ಟು ಬಂದಳೋ ನಾನರಿಯೆ! ಅವಳೂ ನನ್ನಂತೆ ಹೆಂಗಸು. ಅವಳ
ನಾಚುತ್ತಾಳೆಂದು ನಾನು ಇನ್ನೂ ಅವಳ ಕಥೆಯನ್ನು ಕೇಳಿಲ್ಲ. ಅವಳ ಕ
ಯೆಲ್ಲಾ ನಿಮಗೆ ತಿಳಿದೇ ಇದೆ. ಪೋಲೀಸು ಸ್ಟೇಷನ್‌ನಲ್ಲಿದ್ದಳು. ನಮ
ವರ್ತಮಾನ ಬಂತು. ನಾವು ಹೋಗಿ ಕರೆತಂದು ಉಪಚರಿಸಿದೆವು. ಈ
ಆರೋಗ್ಯವಾಗಿದಾಳೆ. ಮನೆಗೆ ಹೋಗೆಂದು ನಾಲ್ಕಾರು ಬಾರಿ ಹೇಳಿದೆ
ಏಕೋ ಅವಳು ಒಪ್ಪಲಿಲ್ಲ. ಆದ್ದರಿಂದ ಇಲ್ಲಿಂದ ಮತ್ತೆಲ್ಲಿಗಾದರೂ ಓಡಿಹೋ
ಬಹುದೆಂದು ನಾವು ಬಲಾತ್ಕಾರ ಮಾಡಲೂ ಇಲ್ಲ. ಬಲಾತ್ಕಾರ ಮಾಡುವುದ
ನ್ಯಾಯವೂ ಅಲ್ಲ!" ಎಂದಳು.

"ಶ್ಯಾಮಲಾ, ನಿನಗೆಲ್ಲಾ ತಿಳಿದೇ ಇದೆ. ನಾನು ಬಹಳ ಮುಂಗೋಪಿ
ಅದರಿಂದ ಅವಳು ಮನೆ ಬಿಟ್ಟು ಹೋದಳು. ಮೂರ್ಖಸ್ತ್ರೀಯಂತೆ ಆತ್ಮಹತ
ಮಾಡಿಕೊಳ್ಳಲು ಹೊರಟು ನನಗಿಷ್ಟು ಅಪಮಾನ ಮಾಡಿಬಿಟ್ಟಳು. ನಾನ
ಅವಳನ್ನು ಕ್ಷಮಿಸುತ್ತೇನೆ. ಅವಳನ್ನು ನನ್ನೊಡನೆ ಕಳಿಸಿ ಕೊಡು. ಅವಳ
ನಿನ್ನ ಮಾತು ಕೇಳುತ್ತಾಳೆ."

"ಊರೆಲ್ಲಾ ಸಮಾಚಾರ ತಿಳಿದಿತ್ತು. ನಿಮಗೂ ಸಮಾಚಾರ ಗೊತ್ತಿತ್ತು
ನೀವೇ ಪೋಲೀಸು ಸ್ಟೇಷನ್ನಿಗೆ ಹೋಗಿ ಅವಳನ್ನು ಮನೆಗೆ ಕರೆದುಕೊಂಡ
ಹೋಗಿದ್ದರೆ ಎಷ್ಟು ಚೆನ್ನಾಗಿತ್ತು?"

" ರಮಾದೇವಿಯು ಆ ಸ್ಥಿತೀಯಲ್ಲಿರುವಾಗ ನಮ್ಮಂಥಹ ಗೌರವಸ್ಥರು ಪೋಲೀಸು ಸ್ಟೇಷನ್ನಿಗೆ ಹೋಗಿ ನನ್ನ ಹೆಂಡತಿಯೆಂದು ಹೇಳಿಕೊಳ್ಳಲು ನಾಚಿಕೆಯಿಂದ ನಾನು ಅಲ್ಲಿಗೆ ಹೊಗಲಿಲ್ಲ."

" ನೀವು ಅಲ್ಲಿಗೆ ಹೋಗದಿದ್ದರೇನು ? ಎಲ್ಲರಿಗೂ ಅವಳು ನಿಮ್ಮ ಪತ್ನಿಯೆಂಬುದು ಪ್ರಸಿದ್ಧವಾಗಿರಲಿಲ್ಲವೇ? ನಾನು ನಿಮ್ಮೊಡನೆ ಚರ್ಚೆ ಮಾಡುವುದಿಲ್ಲ. ರಮಾದೇವಿಯು ವಿದ್ಯಾವತಿ. ವಯಸ್ಸಾಗಿದೆ. ಅವಳು ನಿಮ್ಮೊಡನೆ ಬರಲೊಪ್ಪುವುದಿಲ್ಲ. ನಾನೇನು ಮಾಡಲಿ! "

ರಂಗರಾಯನು ಸ್ವಲ್ಪ ಹೊತ್ತು ಮೌನವಾಗಿದ್ದನು.

" ಶ್ಯಾಮಲಾ, ರಮಾದೇವಿಯನ್ನು ಒಮ್ಮೆ ನನ್ನ ಎದುರಿನಲ್ಲಿ ಕರೆತಂದು ಭೇಟಿ ಮಾಡಿಸು. ನಾನೇ ಅವಳನ್ನು ಪ್ರಾರ್ಥಿಸುತ್ತೇನೆ. ನನ್ನ ಎದುರಿನಲ್ಲಿ ನನ್ನ ಮನೆಗೆ ಬರುವುದಿಲ್ಲವೆಂದು ಹೇಳುವಷ್ಟು ದಿಟ್ಟತನವು ಅವಳಿಗೆ ಬರಲಾರದು."

ಶ್ಯಾಮಲಾದೇವಿಯು ಒಳಗೆ ಹೋಗಿ ಸ್ವಲ್ಪ ಹೊತ್ತಿನಲ್ಲಿ ರಮಾದೇವಿಯನ್ನು ಕರೆತಂದು ರಂಗರಾಯನ ಎದುರಿನಲ್ಲಿ ಕುರ್ಚಿಯ ಮೇಲೆ ಕುಳ್ಳಿರಿಸಿದಳು.

" ರಮಾ, ನಿನ್ನ ಅಪರಾಧಗಳನ್ನೆಲ್ಲಾ ಕ್ಷಮಿಸಿದ್ದೇನೆ. ನೀನು ಮನೆಗೆ ಬಾ! ಅದು ನಮ್ಮಿಬ್ಬರಿಗೂ ಮರ್ಯಾದೆ."

" ನೀವು ನನ್ನನ್ನು ಮರೆತು ಬಿಡಿರಿ! ನಾನೇನೂ ತಪ್ಪು ಮಾಡಿಲ್ಲ. ನಿಮ್ಮ ಮನೆಗೆ ನಾನು ಬರುವುದಿಲ್ಲ."

" ರಮಾ, ನಾವಿಲ್ಲಿ ಮಾತನಾಡುವುದು ಚಂದಲ್ಲ! ಈ ಶ್ಯಾಮಲಾದೇವಿಯೂ ನಿನ್ನಂತೆ ನನ್ನ ಧರ್ಮಪತ್ನಿ! ನೀನೂ ನನ್ನ ಸಹಧರ್ಮಿಣಿ! ನೀವಿಬ್ಬರೂ ನನ್ನ ಜೊತೆಯಲ್ಲಿ ನಮ್ಮ ಮನೆಗೆ ಬನ್ನಿ! ನಾನು ಒಂದು ವಿಲ್ ಮಾಡಿಟ್ಟಿದ್ದೇನೆ. ನನ್ನ ಸಮಸ್ತ ಆಸ್ತಿಯನ್ನೂ ನಿಮ್ಮಿಬ್ಬರಿಗೂ ಸಮ ಸಮವಾಗಿ ಹಂಚಿಬಿಟ್ಟಿದ್ದೇನೆ. ನಾನೇ ಊರು ಬಿಟ್ಟು ಹೊರಟು ಹೋಗುತ್ತೇನೆ. ಆ ಮೇಲೆ ನೀವಿಬ್ಬರೂ ಸ್ವತಂತ್ರರು. ನನ್ನ ಬದುಕು, ಬಾಳು ನನ್ನ ಪುರಾಣ

ಅಲ್ಲಿಗೆ ಮುಗಿಯುತ್ತದೆ." ಎಂದು ಹೇಳಿದನು.

ಈ ಮಾತುಗಳನ್ನು ಆಡುವಾಗ ಅವನ ಕಂಠವು ಗದ್ಗದಿತವಾಗಿತ್ತು ಕಣ್ಣುಗಳಲ್ಲಿ ಜಲವು ತುಂಬಿತ್ತು. ಶ್ಯಾಮಲಾದೇವಿಯು ಮನಸ್ಸಿನಲ್ಲಿಯೆ ಮರುಕ ಪಟ್ಟಳು.

ರಮಾದೇವಿಯು ನಿರಾಶೆಯ ನಗುವನ್ನು ನಕ್ಕು "ನಿಮ್ಮ ಐಶ್ವರ್ಯ ಮೇಲೆ ನನಗೇನು ಅಧಿಕಾರ? ನಿಮ್ಮಿಂದ ಒಂದು ಕಾಸನ್ನೂ ನಾನು ಅಪೇ ಸುವವಳಲ್ಲ. ನಾನು ನಿಮ್ಮ ಮನೆಗೆ ಬರತಕ್ಕವಳಲ್ಲ. ನಾನು ಸತ್ತು ಹೋಗಿದ್ದ ಹಾಗೆಯೇ ಸತ್ತು ಹೋಗಿದ್ದರೆ ನೀವು ಮನೆಗೆ ಕರೆದುಕೊಂಡು ಹೋಗುತ್ತಿ ರೇನು? ಈಗಲೂ ಅಷ್ಟೆ! ನಿಮ್ಮ ಭಾಗಕ್ಕೆ ನಾನು ಸತ್ತಂತೆಯೇ! ಈ ಪ್ರಪ ಚಕ್ಕೂ ನಾನು ಸತ್ತಂತೆಯೇ! ನನ್ನ ಗೋಜಿಗೇ ಬರಬೇಡಿರಿ. ಇದು ಖಂಡಿ ವಾದ ಮಾತು!" ಎಂದು ಹೇಳಿದಳು.

ಶ್ಯಾಮಲಾದೇವಿಯು ರಮಾದೇವಿಯ ಮಾತನ್ನು ಕೇಳುತ್ತ ಸುಮ್ಮ ನಿಂತಿದ್ದಳು.

ರಂಗರಾಯನು ಎದ್ದು ನಿಂತನು. "ಶ್ಯಾಮಲಾ ನೀನೇನು ಹೇಳುವೆ? ಎಂದು ಕೇಳಿದನು.

"ನಾನು ಏನನ್ನು ತಾನೆ ಹೇಳಬೇಕು. ನಿಮ್ಮ ವಿಲ್ ನನಗೆ ಬೇಡ ರಮಾದೇವಿಯ ಮಾತನ್ನು ಅವಳೇ ಹೇಳಿದಳು."

ರಂಗರಾಯನು ಕೋಪದಿಂದ "ನೀವಿಬ್ಬರೂ ಮಸಲತ್ತು ಮಾಡಿದ್ದೀ ನಿಮಗೆ ತಕ್ಕ ಪ್ರತೀಕಾರ ಮಾಡುತ್ತೇನೆ. ನಿಮ್ಮಂತಹ ಪತಿಯನ್ನು ವಂಚಿ ಸ್ವೇಚ್ಛಾಚಾರಿಣಿಯರಾದ ಸ್ತ್ರೀಯರು ಈ ಭೂಮಿಯ ಮೇಲೆ ಇರಲೇ ಕೂಡದು ನೀವು ಈ ಆಶ್ರಮ, ಪಾಠಶಾಲೆಗಳನ್ನು ನಡಸುವುದು ದೇಶಕ್ಕೆ ಹಾನಿ ನಿಮಗೆ ಚೆನ್ನಾಗಿ ಅಪಮಾನ ಮಾಡಿಸುತ್ತೇನೆ, ಈ 'ಚಿತ್ರಕೂಟ'ವು ಮಣ್ ಪಾಲಾಗುವಂತೆ ಮಾಡುತ್ತೇನೆ." ಎಂದು ಕೋಪದಿಂದ ಹೇಳಿದನು.

ರಮಾದೇವಿಯ ಕಡೆ, ಬಿರುಗಣ್ಣಿನಿಂದ ನೋಡುತ್ತಾ "ರಮಾ, ನೆನ ರಲಿ! ರಂಗರಾಯನು ಎಂಥವನೆಂಬುದನ್ನು ನೋಡುತ್ತಿ!" ಎಂದನು.

ರಂಗರಾಯನು ಪುನಃ “ ರಮಾ, ನೀನು ಆತ್ಮಹತ್ಯ ಮಾಡಿಕೊಂಡಿದ್ದು ಸರಿ! ನಿನ್ನ ಪಾಪಕ್ಕೆ ಅದು ತಕ್ಕ ಪ್ರಾಯಶ್ಚಿತ್ತ. ಸತ್ತು ಹೋಗಿದ್ದರೆ ಬಹಳ ಚೆನ್ನಾಗಿತ್ತು. ಪಾಪಶೇಷದಿಂದ ಬದುಕಿಕೊಂಡೆ! ಅದರಿಂದಲೇ ನನಗಿಷ್ಟು ಅಪಮಾನ! ಮೊದಲಿನಿಂದಲೂ, ಈ ದುಷ್ಟ ಹೆಂಗಸರ ಜೊತೆ ಸೇರಿ ಕೆಟ್ಟೆ! ನನ್ನನ್ನು ಅವಮಾನಕ್ಕೆ ಗುರಿ ಮಾಡಿದೆ. ಇದಕ್ಕೆ ಪ್ರತೀಕಾರವಿದೆ. ಪ್ರಾಯಶ್ಚಿತ್ತವಿದೆ. ಇಲ್ಲವೆಂದುಕೊಳ್ಳಬೇಡ!” ಎಂದು ಹೇಳಿದನು.

ಶ್ಯಾಮಲಾದೇವಿಯ ಕಡೆ ಕೈತೋರಿಸಿ, “ ಶ್ಯಾಮಲಾ, ಇದೆಲ್ಲಾ ನಿನ್ನ ಅಪರಾಧ! ನೀನು ಮೊದಲಿನಿಂದಲೂ ಕುಲಟೆ! ಜಾರಿಣಿ! ನನಗೆ ನಿನ್ನ ಮೇಲೆ ಏನೂ ಅಧಿಕಾರವಿಲ್ಲವೆಂದು ತಿಳಿದುಕೊಂಡಿದ್ದೀಯೆ. ನನಗೆ ಅಧಿಕಾರವಿದೆ. ಅದನ್ನು ತೋರಿಸುತ್ತೇನೆ. ನನ್ನ ಮಾನ ಹೋಯಿತು. ಪ್ರಾಣದ ಮೇಲೆ ಆಸೆಯಿಲ್ಲ ಇದೆಲ್ಲಾ ನಿನ್ನಿಂದ! ಇದಕ್ಕೆ ತಕ್ಕ ಪ್ರತೀಕಾರ ಉಂಟು! ಇನ್ನು ನನಗೆ ಪಶ್ಚಾತ್ತಾಪ ಪಡುವುದಕ್ಕೆ ಕೂಡ ಸಮಯವಿಲ್ಲ. ಇದೇ ಕಡೆ!” ಎಂದು ಹೇಳುತ್ತಾ ಕೋಣೆಯನ್ನು ಬಿಟ್ಟು ಹೊರಟು ಹೋದನು.

ರಮಾ ಶ್ಯಾಮಲಾ ಅವರಿಬ್ಬರಿಗೂ ವಿಶೇಷ ಮನನೊಂದು ಆಶ್ರಮದೊಳಗೆ ಹೊರಟು ಹೋದರು.

ರಂಗರಾಯನು ಮನೆಗೆ ಬಂದು ಮಹಡಿಯ ಮೇಲೆ ಹೋಗಿ, ತನ್ನ ಕೋಣೆಯಲ್ಲಿ ಕುಳಿತುಕೊಂಡನು. “ ನಾನೇಕೆ ಆ ‘ ಚಿತ್ರಕೂಟ’ಕ್ಕೆ ಹೋದೆ ” ಎಂದು ವ್ಯಥೆ ಉಂಟಾಯಿತು.

ಬಹಳ ಹೊತ್ತು ಯೋಚನೆ ಮಾಡಿದನು. ಕೊನೆಗೆ “ ನಾನು ಹೋಗಿ ಅವರೊಡನೆ ಮಾತನಾಡಿದ್ದು ಒಳ್ಳೆಯದಾಯಿತು. ನಾನೇ ಹೋಗಿ ಕರೆದೆ! ಪ್ರಾರ್ಥನೆ ಮಾಡಿದೆ. ಅವರು ನಿರಾಕರಿಸಿದರು. ಇನ್ನು ನನ್ನ ತಪ್ಪೇನಿದೆ? ” ಎಂದುಕೊಂಡನು.

ಶ್ಯಾಮಲಾ ಮತ್ತು ರಮಾದೇವಿಯರ ಮಾತುಗಳನ್ನೆಲ್ಲಾ ಜ್ಞಾಪಿಸಿಕೊಂಡನು. “ ಶ್ಯಾಮಲಾ ಮೊದಲಿನಿಂದಲೂ ವ್ಯಭಿಚಾರಿಣಿ! ಅವಳು ವಾಸುದೇವನ ಪ್ರಣಯಿನಿ! ಅದರಲ್ಲಿ ಸಂದೇಹವೇನಿದೆ? ಅವಳ ಸಹವಾಸ

ದಿಂದಲೇ ಈ ರಮಾದೇವಿಯು ಕೆಟ್ಟು ಹೋದಳು. ನಾನೇನೋ ಅವರನ್ನು ಮನೆಗೆ ಬರುವಂತೆ ಕರೆದೆ. ಅವರು ಬಂದುಬಿಟ್ಟಿದ್ದರೆ ಅಂಥಾ ಜಾರಿಣಿಯ ರನ್ನು ನಾನು ಮನೆಯಲ್ಲಿಟ್ಟುಕೊಳ್ಳುತ್ತಿದ್ದೆನೇ ? ಅವರೊಡನೆ ಸಂಸಾರ ಮಾಡು ತ್ತಿದ್ದೆನೇ ! ಇಲ್ಲ. ಅವರಿಬ್ಬರಿಂದಲೂ, ನನಗೆ ಬಹಳ ಅಪಮಾನವಾಗಿದೆ. ಈ ಅಪಮಾನವನ್ನು ಸಹಿಸಲಾರೆ. ಇದಕ್ಕೆ ತಕ್ಕ ಪ್ರತೀಕಾರ ಮಾಡಬೇಕು."

"ಏನು ಪ್ರತೀಕಾರ ಮಾಡಬೇಕು ?" — ಏನೂ ತೋರದಾಯಿತು. "ಅವರಿಬ್ಬರನ್ನೂ ಜೀವದಿಂದ ಬಿಡಕೂಡದು. ಈಗ ಅವರಾದರೂ ಸಾಯ ಬೇಕು, ನಾನಾದರೂ ಸಾಯಲೇಬೇಕು. ಬದುಕಿರುವ ವರೆಗೆ ಈ ಅಪಮಾನ ವನ್ನು ಭುಜಿಸಲೇಬೇಕಾಗಿದೆ. ಇನ್ನೇಕೆ ಬದುಕಿರಲಿ ! ಬದುಕಿ ಮಾಡಬೇಕಾ ದ್ದೇನಿದೆ. ಎಲ್ಲವೂ ಶೂನ್ಯ !" ಎಂದುಕೊಂಡನು.

ರಂಗರಾಯನು ಹಗಲೂ ರಾತ್ರಿ ಅದೇ ಚಿಂತೆಯಲ್ಲಿ ಮಗ್ನನಾದನು. ಈ ಪ್ರಪಂಚದಲ್ಲಿ ಅವನಿಗೆ ಮತ್ತಾವುದೂ ತೋರುತ್ತಿರಲಿಲ್ಲ. ರಮಾದೇವಿ ಶ್ಯಾಮಲಾದೇವಿಯರು ತನಗೆ ಬಹಳ ಅನ್ಯಾಯ ಮಾಡಿದ್ದಾರೆ. ಈ ಲೋಕ ದಲ್ಲಿ ಅವರನ್ನು ದಂಡಿಸುವವರಾರೂ ಇಲ್ಲ. ತಾನೇ ಶಿಕ್ಷೆ ಮಾಡಬೇಕು, ಎಂಪು ನಿಶ್ಚಯ ಮಾಡಿಕೊಂಡನು.

ಶ್ಯಾಮಲಾದೇವಿಯಿಂದಲೇ ಇಷ್ಟು ಅನರ್ಥ. ಅವಳನ್ನು ಅಪಮಾನ ಗೊಳಿಸಬೇಕು. ದಂಡಿಸಬೇಕು. ಅಥವಾ ಕೊಲೆಮಾಡಿ ಬಿಡಬೇಕು, ಎಂಬುದು ರಂಗರಾಯನ ಮನಸ್ಸಿನಲ್ಲಿ ತಳಮಳಿಸ ಹತ್ತಿತು.

ರಂಗರಾಯನು 'ಚಿತ್ರಕೂಟ'ದ ಸುತ್ತಲೂ ಅಲೆಯಲಾರಂಭಿಸಿದನು.

ರಂಗರಾಯನು ಎರಡು ಮೂರಾವರ್ತಿ ಆಶ್ರಮದ ಸುತ್ತಮುತ್ತಲೂ ಸುಳಿದಾಡುವುದನ್ನು ಶ್ಯಾಮಲಾದೇವಿಯು ನೋಡಿದಳು.

ಇವನು ರಮಾದೇವಿಯ ಮೇಲೆ ಏನೋ ಮಸಲತ್ತು ನಡಸುತ್ತಿದ್ದಾ ನೆಂದು ಶ್ಯಾಮಲಾದೇವಿಗೆ ಸಂದೇಹ ಬಂದಿತು.

"ಈ ರಮಾದೇವಿಯನ್ನು ಎಲ್ಲಿಗಾದರೂ ಕಳುಹಿಸಿಬಿಡಬೇಕು. ಇವಳಿಂದ ಈ ಆಶ್ರಮಕ್ಕೆ ಏನು ತೊಂದರೆ ಬರುತ್ತದೋ" ಎಂದು ಆಕೆ ಚಿಂತಿಸುತ್ತಿದ್ದಳು.

"ಈ ರಮಾದೇವಿಯ ಮನಸ್ಸು ಬಹಳ ಕೆಟ್ಟುಹೋಗಿದೆ. ಅವಳು ಪುನಃ ಆತ್ಮಹತ್ಯ ಮಾಡಿಕೊಂಡರೂ ಮಾಡಿಕೊಳ್ಳಬಹುದು. ಅವಳನ್ನು ಸೂಕ್ಷ್ಮವಾಗಿ ನೋಡಿಕೊಳ್ಳಬೇಕು" ಎಂದುಕೊಳ್ಳುತ್ತಿದ್ದಳು.

ಶ್ಯಾಮಲಾದೇವಿಯು ಸಂಧ್ಯಾಕಾಲದ ವರೆಗೆ ಆಶ್ರಮದಲ್ಲಿದ್ದು, ನಾರಾಯಣರಾಯನ ಮನೆಗೆ ಹೋಗುತ್ತಿದ್ದಳು. ಒಂದೊಂದು ದಿನ ರಂಗರಾಯನು ಅವಳನ್ನು ಅನುಸರಿಸಿ ಬರುತ್ತಿದ್ದನು. ಅವನು ಶ್ಯಾಮಲಾದೇವಿಯನ್ನು ಮಾತನಾಡಿಸುತ್ತಿರಲಿಲ್ಲ.

"ಇವನೇಕೆ ನನ್ನ ಹಿಂದೆ ಬರುತ್ತಾನೆ? ಮತ್ತೇನೂ ಇಲ್ಲ. ರಮಾದೇವಿಯನ್ನು ತನ್ನ ಮನೆಗೆ ಕಳುಹಿಸಿಕೊಡಬೇಕೆಂದು ಕೇಳುವುದಕ್ಕೆ ಬರುತ್ತಾನೆ" ಎಂದುಕೊಳ್ಳುತ್ತಿದ್ದಳು.

ಒಂದು ದಿನ ಶ್ಯಾಮಲಾದೇವಿಯು ಆಶ್ರಮದಿಂದ ಹೊರಟಳು. ಮಾರ್ಗದಲ್ಲಿ ರಂಗರಾಯನು ಅನುಸರಿಸಿ ಬರುತ್ತಿದ್ದನು. ಅವನು ಮನೆಯಲ್ಲಿ ಎರಡು 'ಪೆಗ್' ಹಾಕಿಕೊಂಡು ಆಶ್ರಮದ ಕಡೆ ಹೊರಟಿದ್ದನು.

ಶ್ಯಾಮಲಾದೇವಿಯು "ನಾನೇ ಮಾತನಾಡಿಸಲೇ?" ಎಂದುಕೊಂಡಳು.

ರಂಗರಾಯನು "ಶ್ಯಾಮಲಾ! ಶ್ಯಾಮಲಾ!" ಎಂದು ಕರೆದನು.

ಶ್ಯಾಮಲಾದೇವಿಯು ನಿಂತುಕೊಂಡಳು.

ರಂಗರಾಯನು ಸಮೀಪಕ್ಕೆ ಬಂದು "ಶ್ಯಾಮಲಾ ನಿಂತುಕೋ! ನಿನ್ನೊಡನೆ ಮಾತನಾಡುವುದಕ್ಕಾಗಿಯೇ ಸಮಯ ಕಾಯುತ್ತಿದ್ದೇನೆ" ಎಂದನು.

ಶ್ಯಾಮಲಾದೇವಿಯು ಹಿಂದಿರುಗಿದಳು. ಅವಳ ಮನಸ್ಸಿನಲ್ಲಿ ಯಾವ ಅಳುಕೂ ಉಂಟಾಗಲಿಲ್ಲ.

ರಂಗರಾಯನೇ ಮಾತಿಗೆ ಆರಂಭಿಸಿದನು.

"ಶ್ಯಾಮಲಾ, ನಮ್ಮ ಮನೆಗೆ ಬಾ! ಅಲ್ಲಿ ಹೋಗಿ ಮನಸಾರ ಮಾತನಾಡಿಬಿಡೋಣ."

"ಏಕೆ? ಇಲ್ಲಿಯೇ ಮಾತನಾಡೋಣ."

" ಶ್ಯಾಮಲಾ, ನೀನು ಮತ್ತು ರಮಾದೇವಿ ಇಬ್ಬರೂ ನನ್ನನ್ನು ಮದುವೆಯಾದ ಹೆಂಡತಿಯರು ! "

" ಹ್ಞ್ಞಾ ! "

" ನೀವಿಬ್ಬರೂ ನನ್ನನ್ನು ಬಿಟ್ಟು ಹೋದಿರಿ ! "

" ಹ್ಞ್ಞಾ ! "

" ನನಗೆ ನಿಜವಾಗಿಯೂ ಇನ್ನು ಸಂಸಾರದಲ್ಲಿ ಇಚ್ಛೆಯಿಲ್ಲ. ಬಹಳ ಅಪಮಾನವಾಗಿದೆ. ಆ ಅಪಮಾನಕ್ಕೆ ನೀವಿಬ್ಬರೇ ಮೂಲಕಾರಣ."

" ಅದು ನಿಜವಲ್ಲ ! ನಿಜವೇ ಆದರೂ ಅದಕ್ಕೇನು ಪ್ರಾಯಶ್ಚಿತ್ತ? "

" ರಮಾದೇವಿಯನ್ನು ನನ್ನ ಮನೆಗೆ ಕರೆತಂದುಬಿಡು ! "

" ಅದು ನನ್ನಿಂದ ಆಗುವ ಕಾರ್ಯವಲ್ಲ. ಅವಳು ಸ್ವತಂತ್ರಳು."

" ಇಲ್ಲ. ನೀನೇ ಅವಳನ್ನು ಕೆಡಿಸಿದವಳು. ನಿನಗೆ ತಕ್ಕ ಪ್ರತೀಕಾರ ಮಾಡಲೇ ಬೇಕು."

ಶ್ಯಾಮಲಾ ಮಾತನಾಡದೇ ನಿಂತಿದ್ದಳು.

ರಂಗರಾಯನು ಕೋಪೋದ್ರೇಕದಿಂದ ಶ್ಯಾಮಲಾದೇವಿಯನ್ನು ಕೈ ಹಿಡಿದು ಎಳೆದನು. ಮುಖದ ಮೇಲೆ ಎರಡು ಏಟು ಹೊಡೆದನು.

ಶ್ಯಾಮಲಾದೇವಿಯು ಕೂಗಲಿಲ್ಲ. ಅವನ ಕೈಯಿಂದ ಬಿಡಿಸಿಕೊಳ್ಳಲು ಹೋರಾಡ ತೊಡಗಿದಳು. ಆ ಹೋರಾಟದಲ್ಲಿ ನೆಲದ ಮೇಲೆ ಬಿದ್ದಳು.

ರಂಗರಾಯನಿಗೂ ಬಹಳವಾಗಿ ಕೋಪ ಬಂದಿತ್ತು. ಅವನು ಬೂಡ್ಸು ಕಾಲಿನಿಂದ ಶ್ಯಾಮಲಾದೇವಿಯ ಎದೆಯ ಮೇಲೆ ಬಲವಾಗಿ ಒದ್ದನು.

ಶ್ಯಾಮಲಾದೇವಿಯು ಚೀರಿಕೊಂಡಳು.

ರಂಗರಾಯನು ಮತ್ತೊಮ್ಮೆ ಕಾಲಿನಿಂದ ಒದ್ದನು.

ಫುಟ್ ಪಾತ್ ಪಕ್ಕದಲ್ಲಿದ್ದ ಕಲ್ಲಿಗೆ ಅವಳ ತಲೆ ತಾಗಿ ರಕ್ತ ಸೋರಲಾರಂಭವಾಯಿತು. ಶ್ಯಾಮಲಾದೇವಿಯ ಕೂಗು ನಿಂತು ಗೊರಗುಟ್ಟಲಾರಂಭಿಸಿದಳು.

ರಂಗರಾಯನು ಬಗ್ಗಿ ನೋಡಿದನು. " ಪಿಶಾಚಿ ಸತ್ತಳು ! ಒಂದು

ಪ್ರಾಯಶ್ಚಿತ್ತವಾಯಿತು."

"ಮತ್ತೊಬ್ಬಳು ! ರಮಾದೇವಿ ! ಇದಾಳೆ. ಅವಳನ್ನೂ ಮುಗಿಸಿ ಬಿಡುತ್ತೇನೆ. ಅದು ಅವರ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ! ಇಂದು ಬೇಡ ! ಮತ್ತೊಂದು ದಿನ ಆ ರಮಾದೇವಿಯ ವಿಚಾರಣೆ !

" ಇನ್ನು ಹೆಚ್ಚು ಹೊತ್ತು ನಾನಿಲ್ಲಿರಕೂಡದು, " ಎಂದುಕೊಂಡು ಮತ್ತೊಮ್ಮೆ ಶ್ಯಾಮಲಾದೇವಿಯನ್ನು ಬಗ್ಗಿ ನೋಡಿದನು.

ಎಲ್ಲವೂ ಶಾಂತವಾಗಿತ್ತು !

ರಂಗರಾಯನು ಮನೆಗೆ ಹೊರಟುಹೋದನು.

ರಾತ್ರಿಯಾಗಿದ್ದರೂ, ಬೆಳುದಿಂಗಳ ಬೆಳಕಿತ್ತು. ಆ ರಸ್ತೆಯಲ್ಲಿ ಓಡಾಡುವ ಜನ ಹೆಚ್ಚಾಗಿರಲಿಲ್ಲ. ಆ ದಾರಿಯಲ್ಲಿ ಸುಮಾರು ಒಂಭತ್ತು ಗಂಟೆಯ ಸಮಯದಲ್ಲಿ ದಾರಿಗರು, ರಸ್ತೆಯ ಪಕ್ಕದಲ್ಲಿ ಒಬ್ಬ ಹೆಂಗಸಿನ ದೇಹ ಬಿದ್ದಿರುವುದನ್ನು ನೋಡಿದರು.

ಒಬ್ಬಿಬ್ಬರು ಹತ್ತಿರ ಹೋಗಿ ನೋಡಿದರು. " ನಮಗೇಕೆ ? " ಎಂದುಕೊಂಡು ಹೊರಟುಹೋದರು.

ಕಾಲೇಜು ಹುಡುಗರಿಬ್ಬರು ಅತ್ತ ಕಡೆ ಬೈಸಿಕಲ್ ಮೇಲೆ ಹೋಗುತ್ತಿದ್ದರು. ಅವರಿಬ್ಬರೂ ನೋಡಿದರು. ಹೆಂಗಸು ರಸ್ತೆಯ ಪಕ್ಕದಲ್ಲಿ ಬಿದ್ದಿದ್ದಾಳೆ. ಹತ್ತಿರ ಹೋಗಿ ಬಗ್ಗಿ ನೋಡಿದರು. ತಲೆಯೊಡೆದು ರಕ್ತಸೋರುತ್ತಿದೆ. " ಪಾಪ, ಖೂನಿ ! ಸತ್ತುಹೋಗಿದ್ದಾಳೆ ! " ಎಂಬುದಾಗಿ ಪರಸ್ಪರ ಮಾತನಾಡಿಕೊಂಡರು.

ಒಬ್ಬನು ಅಲ್ಲಿಯೇ ಕಾದುನಿಂತಿದ್ದನು. ಮತ್ತೊಬ್ಬನು ಓಡಿ ಹೋಗಿ ಪೋಲೀಸ್ ಸ್ಟೇಷನ್ನಿಗೆ ಸಮಾಚಾರ ಕೊಟ್ಟನು. ತಕ್ಷಣವೇ, ಪೋಲೀಸು ಇನ್‌ಸ್ಪೆಕ್ಟರು ಸಿಬ್ಬಂದಿಯೊಡನೆ ಪೋಲೀಸು ವ್ಯಾನಿನಲ್ಲಿ ಆ ಸ್ಥಳಕ್ಕೆ ಬಂದರು.

ಟಾರ್ಚು ಹಾಕಿ ಮುಖವನ್ನು ನೋಡಿದರು. ಕೂಡಲೆ, ಪರಿಚಯ ತಿಳಿಯಲಿಲ್ಲ. " ಎಲ್ಲೋ ಪರಿಚಿತವಾದ ಮುಖ ! ಯಾರೋ ದೊಡ್ಡಮನುಷ್ಯರ ಮನೆ ಹೆಂಗಸು ! " ಎಂದು ಹೇಳಿದರು.

ಕಾಲೇಜು ವಿದ್ಯಾರ್ಥಿಯು ಟಾರ್ಚ್ ಬೆಳಕಿನಲ್ಲಿ ಮುಖ ನೋಡಿದನು.

'ಶ್ಯಾಮಲಾದೇವಿ ! ' ಚಿತ್ರಕೂಟ ' ದವರು !" ಎಂದು ಉದ್ವೇಗದಿಂದ ಕೂಗಿ ಕೊಂಡನು.

ಪೋಲೀಸು ಅಧಿಕಾರಿಗೆ ಗಾಬರಿಯಾಯಿತು. ತಕ್ಷಣ ಸೂಪರಿಂಟೆಂಡೆಂಟ ರಿಗೆ ಸಮಾಚಾರ ಕಳಿಸಿದನು. ಸೂಪರಿಂಟೆಂಡೆಂಟರು ಡಾಕ್ಟರೊಡನೆ ಬಂದರು. ಎಲ್ಲರೂ ' ಖೂನಿ ! ಖೂನಿ ! ' ಎಂದು ಮಾತನಾಡಿಕೊಳ್ಳುತ್ತಿದ್ದರು.

ಶ್ಯಾಮಲಾದೇವಿ ! ಸತ್ತುಹೋಗಿದ್ದಾಳೆ ಎಂದುಕೊಳ್ಳುತ್ತಿದ್ದರು.

ಡಾಕ್ಟರು ಪರೀಕ್ಷೆ ಮಾಡಿ ನೋಡಿದರು. " ಪ್ರಾಣ ಹೋಗಿಲ್ಲ. ಉಸಿರಾ ಡುತ್ತಿದೆ " ಎಂದು ಹೇಳಿದರು. ಅಲ್ಲಿದ್ದವರಿಗೆಲ್ಲಾ ಏನೋ ಧೈರ್ಯ ಬಂದ ಹಾಗಾ ಯಿತು. ಪೋಲೀಸಿನವರು ಮಹಜರ್ ಮಾಡಿಕೊಂಡರು. ತಕ್ಷಣ ಆ ಹೆಂಗ ಸನ್ನು ಕೃಷ್ಣರಾಜೇಂದ್ರ ಆಸ್ಪತ್ರೆಗೆ ಸಾಗಿಸಿದರು.

ಅಲ್ಲಿ ಡಾಕ್ಟರು ಗಾಯಗಳನ್ನು ತೊಳೆದು ಔಷಧಿಗಳನ್ನು ಹಾಕಿ, ಮೈಗೆ ಇಂಜಕ್ಷನ್ ಕೊಟ್ಟು ಸ್ಪೆಷಲ್ ವಾರ್ಡಿನಲ್ಲಿ ಮಲಗಿಸಿದರು.

ಪೋಲೀಸು ಸೂಪರಿಂಟೆಂಡೆಂಟರು ಬಲವಾದ ಪೋಲೀಸು ಕಾವಲನ್ನು ಏರ್ಪಡಿಸಿದರು.

ಸಮಾಚಾರವು ನಾರಾಯಣರಾಯನಿಗೆ ತಿಳಿಯಿತು. ನಾರಾಯಣ ರಾವ್, ವಾಸುದೇವ, ತಾರಾ, ರಮಾದೇವಿ ಎಲ್ಲರೂ ಆಸ್ಪತ್ರೆಗೆ ಓಡಿ ಬಂದರು. ಶ್ಯಾಮಲಾದೇವಿಯನ್ನು ನೋಡಿದರು.

ನಾರಾಯಣರಾಯನು ಪೋಲೀಸು ಅಧಿಕಾರಿಗಳನ್ನು ಭೇಟಿಮಾಡಿ " ಶ್ಯಾಮಲಾದೇವಿಯು ನನ್ನ ತಂಗಿ. ನಮ್ಮ ಮನೆಗೆ ಕರೆದುಕೊಂಡು ಹೋಗು ತ್ತೇವೆ " ಎಂದು ಕೇಳಿದನು.

ಪೋಲೀಸು ಅಧಿಕಾರಿಯು " ಇದು ಕೊಲೆ ಅಥವಾ ಕೊಲೆಯ ಪ್ರಯತ್ನ. ನಮಗೆ ಇನ್ನೂ ಏನೂ ಸುಳಿವು ಸಿಕ್ಕಿಲ್ಲ. ಕೊಲೆಗಾರನು ಏಕೆ ಕೊಲೆಮಾಡಿದ್ದಾನೆಯೋ ? ಅವನ ಉದ್ದೇಶವೇನೋ ಪತ್ತೆಯಾಗಿಲ್ಲ. ಅವನು ಶ್ಯಾಮಲಾದೇವಿ ಮೃತಳಾಗಿದ್ದಾಳೆಂದು ಖಚಿತಮಾಡಿಕೊಂಡು ಹೋಗಿದ್ದಾನೆ. ನಾವೂ ಹಾಗೆಯೇ ಭಾವಿಸಿದ್ದೆವು. ಮೊದಲು ಡಾಕ್ಟರು ಸಹ ಹಾಗೆಯೇ

ತಿಳಿದಿದ್ದರು. ಆಮೇಲೆ ಜೀವವಿದೆಯೆಂದು ಅನುಮಾನಪಟ್ಟು ಪರೀಕ್ಷೆ ಮಾಡಿದರು. ಆಸ್ಪತ್ರೆಗೆ ಕರೆತಂದು ಚಿಕಿತ್ಸೆ ಮಾಡಿಸುತ್ತಿದ್ದೇವೆ. ಶ್ಯಾಮಲಾ ದೇವಿಗೆ ಸ್ವಲ್ಪವೂ ಜ್ಞಾನ ಬಂದಿಲ್ಲ. ಶ್ಯಾಮಲಾದೇವಿ ಬದುಕಿದ್ದಾಳೆಂದು ಊರಿಗೆಲ್ಲಾ ನಾಳೆ ಪ್ರಾತಃಕಾಲ ತಿಳಿದುಹೋಗುತ್ತದೆ. ಕೊಲೆಗಾರನ ಪ್ರಯತ್ನ ವಿಫಲವಾಯಿತು, ಕೊಲೆಗಾರನು ಪುನಃ ಕೊಲೆಗೆ ಪ್ರಯತ್ನ ಮಾಡಬಹುದು. ಶ್ಯಾಮಲಾದೇವಿಯನ್ನು ರಕ್ಷಿಸುವುದು ನಮ್ಮ ಜವಾಬ್ದಾರಿ. ಆ ಘಾತುಕನನ್ನು ಪತ್ತೆಮಾಡುವುದು ನಮ್ಮ ಕೆಲಸ. ಆದ್ದರಿಂದ ನಾವು ಶ್ಯಾಮಲಾದೇವಿಯನ್ನು ಬಲವಾದ ಕಾವಲಿನಲ್ಲಿಡಬೇಕು. ಅವಳು ಬದುಕುತ್ತಾಳೋ ಇಲ್ಲವೋ ಎಂಬುದನ್ನು ಹೇಳಲಾಗುವುದಿಲ್ಲ. ಶ್ಯಾಮಲಾದೇವಿ ಆಸ್ಪತ್ರೆಯಲ್ಲೇ ಇರಲಿ! ನಿಮ್ಮ ಮನೆಯವರು ಬಂದು ನೋಡಿಕೊಳ್ಳಬಹುದು. ಉಪಚಾರ ಮಾಡಬಹುದು. ಆದರೆ ಹೊರಗಿನವರನ್ನಾರನ್ನೂ ನಾವು ಒಳಗೆ ಬಿಡುವುದಿಲ್ಲ. ತನಿಖೆ ಕ್ರಮ ಪೂರೈಸಬೇಕು." ಎಂದು ಹೇಳಿದನು.

ನಾರಾಯಣರಾಯನು ಅದಕ್ಕೆ ಒಪ್ಪಿಕೊಂಡನು.

ರಮಾದೇವಿಯು ಆ ಅವಸ್ಥೆಯಲ್ಲಿ ಶ್ಯಾಮಲಾದೇವಿಯನ್ನು ನೋಡಿ ಕಿರಿಚಿಕೊಂಡು ಮೂರ್ಛೆ ಹೋದಳು.

ವೈದ್ಯರು ಬಂದು ಅವಳನ್ನೂ ಉಪಚರಿಸಿದರು.

ಪೋಲೀಸು ಅಧಿಕಾರಿ ಇದನ್ನೆಲ್ಲಾ ನೋಡುತ್ತಿದ್ದರು.

ರಮಾದೇವಿಯು "ಅಯ್ಯೋ! ಪಾಪಿ! ಹೀಗೆ ಮಾಡಿಬಿಟ್ಟೆಯಾ?" ಎಂದು ಮತ್ತೆ ಚೀರಿದಳು.

ಪೋಲೀಸು ಅಧಿಕಾರಿಯು ಕೊಲೆಗಾರನ ವಿಷಯ ಈ ರಮಾದೇವಿಗೆ ತಿಳಿದಿದೆ, ಎಂದುಕೊಂಡರು.

ರಮಾದೇವಿಯು ರಂಗರಾಯನ ಹೆಂಡತಿಯೆಂಬುದನ್ನು ವಿಚಾರಿಸಿ ತಿಳಿದುಕೊಂಡರು.

ಈ ರಮಾದೇವಿಯು ಅಂದು ಆತ್ಮಹತ್ಯ ಪ್ರಯತ್ನ ಮಾಡಿದ್ದಳು.

ಇಂದು ಶ್ಯಾಮಲಾದೇವಿಯ ಕೊಲೆಯ ಪ್ರಯತ್ನ ನಡೆದಿದೆ.

ಇದೆರಡರ ಹಿನ್ನೆಲೆಯು ಒಂದೇ ಪಾತ್ರದಲ್ಲಿ ಹೆಣೆಯಲ್ಪಟ್ಟಿರಬೇಕು, ಎಂದು ಪೋಲೀಸು ಅಧಿಕಾರಿಯು ತಾಳೆ ಹಾಕಿಕೊಂಡನು.

ಮಾರನೆಯ ದಿನ ಪತ್ರಿಕೆಗಳಲ್ಲಿ 'ಶ್ಯಾಮಲಾದೇವಿಯ ಖೂನಿ' ಎಂಬ ಶೀರ್ಷಿಕೆಯಲ್ಲಿ ವಿವರಗಳು ಬಂದುವು. ಅನೇಕ ಸೂಚನೆಗಳೂ ಇದ್ದುವು.

ಜನರು ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ಡಾಕ್ಟರಿಗೆ ಏನೋ ಹೊಳೆಯಿತು. ಅವನು ರಂಗರಾಯನನ್ನು ಮರುದಿನವೇ ನೋಡಿದನು ಮಾತುಕಥೆಗಳನ್ನಾಡಿದನು.

ರಂಗರಾಯನು, "ಡಾಕ್ಟರ್! ಅದೇನಯ್ಯ, ಸಮಾಚಾರ. ಶ್ಯಾಮಲಾದೇವಿಯ ಖೂನಿ ಎಂದರೇನು?" ಎಂದು ಕೇಳಿದನು.

"ಯಾರೋ ವೈಸ್‌ರಾಯ್ ರೋಡಿನ ಕೊನೆಯಲ್ಲಿ ಶ್ಯಾಮಲಾದೇವಿಯನ್ನು ಹೊಡೆದು ಹಾಕಿದ್ದರು. ಆದರೆ ಅವಳು ಇನ್ನೂ ಸತ್ತಿಲ್ಲ. ಬದುಕಿಕೊಳ್ಳಲೂ ಇಲ್ಲ. ಊರೆಲ್ಲಾ ಗಡಿಬಿಡಿಯಾಗಿದೆ. ಅದೊಂದು ದೊಡ್ಡ ಕಥೆಯಾಗಿ ಬಿಟ್ಟಿದೆ."

"ಏನಾದರೂ ಆಗಲಿ! ಸತ್ತೇ ಹೋಗಲಿ. ಪೀಡೆ ಕಳೆಯಿತು. ಸಾಯಲಿ! ಸಾಯಲಿ!"

"ರಂಗರಾವ್ ಇಷ್ಟು ದಿನವೂ ನೀನು ಏನು ಮಾತನಾಡಿದರೂ ನಾನು ಹೂಗುಟ್ಟುತ್ತಿದ್ದೆ. ಈಗ ಹಾಗೆ ಮಾಡುವಂತಿಲ್ಲ. ನೀನು ನನ್ನ ಸ್ನೇಹಿತ! ನಿನಗೆ ಆ ಗಾಳಿ ಬೀಸದಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯ!"

"ನನಗೇನಯ್ಯ! ಅದರ ಸಂಬಂಧ!"

"ಬೇಕಾದಷ್ಟಿದೆ. ಶ್ಯಾಮಲಾದೇವಿಯನ್ನು ಹೊಡೆದುಹಾಕಿದವನಾರು? ಅದಕ್ಕೆ ಕಾರಣವೇನು ಎಂಬುದು ಪೂರ್ತಾ ಪತ್ತೆಯಾಗುವ ವರೆಗೆ ನಿನ್ನ ಮೇಲೆ ಸಂದೇಹವು ತಪ್ಪುವುದಿಲ್ಲ."

ರಂಗರಾಯನು ಗಾಬರಿಯಿಂದ "ನನ್ನ ಮೇಲೆಯೇ! ನನ್ನ ಮೇಲೆ ಸಂದೇಹಕ್ಕೆ ಕಾರಣವೇನು?" ಎಂದು ಕೇಳಿದನು.

“ ರಂಗರಾವ್ ! ನೋಡು ! ಆ ರಮಾದೇವಿಯ ಆತ್ಮಹತ್ಯೆ. ಅವಳು ನಿಮ್ಮ ಮನೆಯಿಂದ ಓಡಿಹೋದದ್ದು. ಅವಳು ‘ ಚಿತ್ರಕೂಟ ’ದಲ್ಲಿ ಹೋಗಿ ಆಶ್ರಯಪಡೆದದ್ದು. ಮತ್ತು ನೀನು ಎಂದೂ ‘ಚಿತ್ರಕೂಟ’ಕ್ಕೆ ಹೋಗದಿದ್ದವನು, ಅಲ್ಲಿಗೆ ಹೋಗಿ ರಮಾದೇವಿಯನ್ನು ಕಳಿಸಿಕೊಡಬೇಕೆಂದು ಬಲಾತ್ಕಾರ ಮಾಡಿದ್ದು; ವಿಫಲವಾಗಿ ಬಂದದ್ದು; ಶ್ಯಾಮಲಾದೇವಿಯ ಕೊಲೆ– ಇದಿಷ್ಟನ್ನೂ ಒಂದಕ್ಕೊಂದು ಗಂಟುಹಾಕುತ್ತಾರೆ. ನಾವು ಬಹಳ ಜಾಗರೂಕತೆಯಿಂದಿರ ಬೇಕು.”

“ಇರಲಿ ! ಅದನ್ನೆಲ್ಲಾ ನಾನು ನೋಡಿಕೊಳ್ಳುತ್ತೇನೆ ! ನೀನು ಹೋಗಿ ಆ ಶ್ಯಾಮಲಾದೇವಿಯನ್ನು ನೋಡಿದ್ದಿಯೇನು ?”

“ನೋಡಿದ್ದೆ. ಸುತರಾಂ ಜ್ಞಾನವಿಲ್ಲ. ಬದಕುವ ಭರವಸೆ ಸ್ವಲ್ಪವೂ ಇಲ್ಲ ! ”

“ ರಮಾದೇವಿಯನ್ನು ನೋಡಿ ಮಾತಾಡಿದೆಯೇನು ? ”

“ ನೋಡಿದ್ದೆ. ಮಾತನಾಡಿದೆ. ಅವಳೂ ನಿನ್ನ ಮೇಲೆಯೇ ಸಂದೇಹ ಪಡುತ್ತಾಳೆ. ನಾನು ಅವಳಿಗೆ ಬುದ್ಧಿ ಹೇಳಿದೆ. ಇಂಥಾ ವಿಷಯಗಳಲ್ಲಿ ತೋರಿ ದಂತೆ ಮಾತನಾಡಬಾರದು. ನೀನೇನು ಬಲ್ಲೆ ? ಎಂದು ಕೇಳಿದೆ. ಅದಕ್ಕವಳು ಶ್ಯಾಮಲಾದೇವಿಗೆ ವಿರೋಧಿಗಳಾರಿದ್ದಾರೆ – ಹೇಳಿ. ರಂಗರಾಯರು ಮೊದಲಿ ನಿಂದಲೂ ಶ್ಯಾಮಲಾದೇವಿಯ ಮೇಲೆ ದ್ವೇಷಮಾಡುತ್ತಲೇ ಇದ್ದರು. ಈಗ ನಾನೇ ಈ ಅನಾಹುತಕ್ಕೆ ಕಾರಣಳಾದಂತೆ ಆಯಿತು, ಎಂದು ಹೇಳಿ ಅತ್ತು ಬಿಟ್ಟಳು. ಈ ಸಮಯದಲ್ಲಿ ಅವಳ ಮಾತುಗಳು ನಿನಗೆ ಬಹಳ ಅಪಾಯಕಾರಿ”

“ ಅವಳೊಬ್ಬ ಶನಿ ! ಶ್ಯಾಮಲಾ–ರಮಾ ಈ ಎರಡು ಹೆಣ್ಣು ಪಿಶಾಚಿ ಗಳು ನನ್ನನ್ನು ಕಾಡುತ್ತಿವೆ. ಅವಳ ಬಾಯಿ ಮುಚ್ಚುವಂತೆ ಮಾಡಲು ಏನು ಮಾಡಬೇಕಯ್ಯ ? ಡಾಕ್ಟರ್!?”

“ ಅದನ್ನು ನಾನು ಯೋಚನೆ ಮಾಡುತ್ತಿದೇನೆ.”

“ ಅದಿರಲಿ. ಆ ನಾರಾಯಣರಾವ್ ಮತ್ತು ವಾಸುದೇವ, ಅವರೇನು ಹೇಳುತ್ತಾರೆ ? ”

" ಅವರು ಏನೂ ಹೇಳುವುದಿಲ್ಲ. ನಿನ್ನ ಹೆಸರನ್ನೇ ಎತ್ತುವುದಿಲ್ಲ. ಶ್ಯಾಮಲಾದೇವಿಗೆ ಪೂರ್ಣ ಗುಣವಾಗಬೇಕು. ಆಮೇಲೆ ಎಲ್ಲಾ ಪತ್ತೆಯಾಗುತ್ತೆ. ಘಾತುಕನಾರೆಂಬುದನ್ನು ಅವಳೇ ಹೇಳಿಬಿಡುತ್ತಾಳೆ " ಎನ್ನುತ್ತಾರೆ.

" ಪೋಲೀಸು ಅಧಿಕಾರಿಗಳು ಏನು ಹೇಳುತ್ತಾರೆ? "

" ಅವರು ನನ್ನೊಡನೆ ಈ ಮಾತನ್ನೇ ಎತ್ತುವುದಿಲ್ಲ. ಅವರಿಗೆ ನಾನೂ ನೀನೂ ಸ್ನೇಹಿತರೆಂಬುದು ಗೊತ್ತು! ಶ್ಯಾಮಲಾದೇವಿಗೆ ಪೂರ್ಣವಾಗಿ ಗುಣವಾಗುತ್ತದೆಂದು ಪೋಲೀಸು ಅಧಿಕಾರಿಗಳ ಭರವಸೆ! ಅವಳಿಗೆ ಗುಣವಾದರೆ ಅವಳು ಎಲ್ಲವನ್ನೂ ಹೇಳುತ್ತಾಳೆಂದು ಅವರ ನಂಬಿಕೆ. ಆ ಸ್ಥಳದಲ್ಲಿ ಕೊಲೆಗಾರನಿಗೂ ಶ್ಯಾಮಲಾದೇವಿಗೂ ಚೆನ್ನಾಗಿ ಹೋರಾಟ ನಡೆದಿರುವ ಗುರುತುಗಳಿದ್ದುವಂತೆ. ನನಗೆ ಮಾತ್ರ ಅವಳು ಬದುಕುವುದು ದುಸ್ತರವೆಂದು ಕಾಣುತ್ತದೆ."

" ಅಂತೂ ಎಲ್ಲವೂ ಸಂದಿಗ್ಧಾವಸ್ಥೆಯಲ್ಲಿಯೇ ಇದೆ ಅನ್ನು."

ಹೀಗೆಯೇ ಇಬ್ಬರೂ ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ಅನಂತರ ಡಾಕ್ಟರು ಹೊರಟು ಹೋದರು.

## ೩೦

ಒಂದು ವಾರವಾಯಿತು. ಶ್ಯಾಮಲಾದೇವಿಗೆ ಗುಣವಾಗಲಿಲ್ಲ. ಜ್ಞಾನ ಪೂರ್ತಿಯಾಗಿ ಸರಿ ಹೋಗಲೇ ಇಲ್ಲ. ಪೋಲೀಸಿನವರಿಗೆ ಕೊಲೆಗಾರನ ಪತ್ತೆಯ ಬಗ್ಗೆ ಯಾವ ಸುಳುವೂ ಸಿಕ್ಕಲಿಲ್ಲ. ಆದರೆ ಊರು ಜನರೆಲ್ಲರೂ "ಈ ಕೆಲಸವನ್ನು ರಂಗರಾಯನೇ ಮಾಡಿಸಿದ್ದಾನೆ. ಅವನ ಕೈಲಿ ಬೇಕಾದಷ್ಟು ಹಣವಿದೆ. ಪೋಲೀಸಿನವರಿಗೆ ಚೆನ್ನಾಗಿ ದುಡ್ಡು ಕೊಟ್ಟು ಎಲ್ಲವನ್ನೂ ಮುಚ್ಚಿಬಿಟ್ಟಿದ್ದಾನೆ." ಎಂದು ಮಾತನಾಡಿಕೊಳ್ಳುತ್ತಿದ್ದರು.

ಪೋಲೀಸು ಅಧಿಕಾರಿಯು ಆಸ್ಪತ್ರೆಯಲ್ಲಿ ಮೊದಲು ದಿನ ರಮಾ ದೇವಿಯು ಆಡಿದ ಮಾತುಗಳನ್ನು ನೆನಪಿನಲ್ಲಿಟ್ಟಿದ್ದನು.

ರಮಾದೇವಿಯೊಡನೆ ದೀರ್ಘ ಸಂಭಾಷಣೆ ನಡಸಿದನು.

ರಮಾದೇವಿಯು, "ರಂಗರಾಯನು ಪಾಪಿ! ಅವನೇ ಈ ಕೆಲಸ ಮಾಡಿಸಿದ್ದಾನೆ." ಎಂದು ಹೇಳಿದಳು.

ತನ್ನ ಗೃಹತ್ಯಾಗ, ಆತ್ಮಹತ್ಯೆ ಪ್ರಯತ್ನ ಇವೆಲ್ಲಕ್ಕೂ ರಂಗರಾಯನೇ ಕಾರಣವೆಂದು ಹೇಳಿದಳು.

ರಂಗರಾಯನು 'ಚಿತ್ರಕೂಟ'ಕ್ಕೆ ಬಂದು ತನ್ನನ್ನು ಮನೆಗೆ ಕರೆದು ಕೊಂಡು ಹೋಗಲು ಬಲಾತ್ಕಾರ ಮಾಡಿದನೆಂದು ತಿಳಿಸಿದಳು.

"ನನಗೂ ಶ್ಯಾಮಲಾದೇವಿಗೂ ತಕ್ಕ ಪ್ರಾಯಶ್ಚಿತ್ತ ಮಾಡುವುದಾಗಿ ಶಪಥ ಹಾಕಿ ಹೋಗಿದ್ದನು. ಆ ಪ್ರಾಯಶ್ಚಿತ್ತವೇ ಇದು!" ಎಂದು ಹೇಳಿ ದಳು.

ಊರಿನ ಜನರಿಗೆ ಇಷ್ಟೇ ಸಾಕು. ಆದರೆ ಪೋಲೀಸಿನವರಿಗೆ ಆಪಾದನೆ

ಹೊರಸುವುದಕ್ಕೆ ಇಷ್ಟು ಸಾಲದು.

ಪೋಲೀಸು ಅಧಿಕಾರಿಯು ರಂಗರಾಯನ ಮನೆಗೆ ಹೋಗಿ ಭೇಟಿ ಮಾಡಿದನು.

ಅಧಿಕಾರಿ ಮಾಧವರಾವ್ " ರಾಯರೇ ! ಶ್ಯಾಮಲಾದೇವಿಯು ನಿಮ್ಮ ಧರ್ಮಪತ್ನಿ ! ಈ ಮೊಕದ್ದಮೆ ವಿಷಯದಲ್ಲಿ ನೀವೇನಾದರೂ ಹೇಳಬಲ್ಲಿರಾ ? " ಎಂದು ಕೇಳಿದನು.

ರಂಗರಾಯನು " ಧರ್ಮಪತ್ನಿ ! ಶ್ಯಾಮಲಾದೇವಿಯು ಹೆಂಡತಿಯೇನೋ ಹೌದು ! ಅವಳು ಮನೆಬಿಟ್ಟು ಹೋಗಿ ಎಷ್ಟೋ ವರ್ಷಗಳಾದುವು. ಆದರೂ ಅವಳ ಮೇಲಿನ ಕನಿಕರದಿಂದ ಅವಳಿಗೆ ಈ ವಿಲ್ ಮಾಡಿಟ್ಟಿದ್ದೇನೆ " ಎಂದು ಪೆಟ್ಟಿಗೆಯಿಂದ ವಿಲ್ಲನ್ನು ತೆಗೆದು ತಂದು ತೋರಿಸಿದನು.

" ವಿಲ್, ನಿಜವಾದ ವಿಲ್ ! ಅದಕ್ಕೆ ಜಿಲ್ಲಾಧಿಕಾರಿಗಳ ಮೊಹರಾಗಿದೆಯೇ ? " ಪೋಲೀಸು ಅಧಿಕಾರಿಯು ಆ ವಿಲ್ಲನ್ನು ಸರಿಯಾಗಿ ಓದಿಕೊಂಡನು.

" ಈ ರಮಾದೇವಿಯ ವಿಚಾರವೇನು ? ಅವಳಿಗೆ ಈ ವಿಲ್‌ನಲ್ಲಿ ಅಧಿಕಾರವಿದೆಯೇ ?" ಎಂದು ಅಧಿಕಾರಿಯು ಕೇಳಿದನು.

"ಅವಳೂ ನನ್ನ ಹೆಂಡತಿ! ನಿಮಗೆ ತಿಳಿದೇ ಇದೆಯಲ್ಲಾ ! ಅವಳ ಆತ್ಮಹತ್ಯೆಯ ಪ್ರಯತ್ನ. ಅದಕ್ಕೆ ಕಾರಣವೇ ಇಲ್ಲ ! ಅದರಿಂದ ನನಗೆ ಬಹಳ ಅಪಮಾನವಾಯಿತು. ನಾನು ದೇಶಾಂತರ ಹೊರಟು ಹೋಗಬೇಕೆಂದು ಸಂಕಲ್ಪ ಮಾಡಿದೆ. ಈ ವಿಲ್ ಮಾಡಿಸಿಟ್ಟೆ ! ಅಷ್ಟರಲ್ಲಿ ಶ್ಯಾಮಲಾದೇವಿಗೆ ಈ ಅಪಘಾತವಾಯಿತು. ಅವಳು ಬದುಕುತ್ತಾಳೋ ಸತ್ತೇಹೋಗುತ್ತಾಳೋ ನೋಡಬೇಕು."

" ನೀವು ದೊಡ್ಡಮನುಷ್ಯರು. ನಿಮ್ಮನ್ನು ಹೆಚ್ಚಾಗಿ ಮಾತನಾಡಿಸುವುದು ಕಷ್ಟ ! ಆದರೂ ಈ ಮೊಕದ್ದಮೆ ದೊಡ್ಡದು. ಎಷ್ಟೋ ಸಂದೇಹಗಳು ಬರುತ್ತವೆ. ನಾವೇನು ಮಾಡೋಣ ! ನಮ್ಮ ಕೆಲಸವೇ ಅಂತಹದು !"

" ಸಂದೇಹ ! ಯಾರ ಮೇಲೆ ಸಂದೇಹ ! ?"

"ಆ ರಮಾದೇವಿಯು ನಿಮ್ಮ ಮೇಲೆಯೂ ಸಂದೇಹವನ್ನು ತಂದು ಒಡ್ಡಿದ್ದಾಳೆ."

"ಮಾಧವರಾವ್, ಈ ಮೊಕದ್ದಮೆ ಪತ್ತೆಯಾಗುವುದು ಕಷ್ಟವೆಂದು ನನ್ನ ಭಾವನೆ. ಮೊದಲಿನಿಂದಲೂ ಆ ಶ್ಯಾಮಲಾದೇವಿಯ ನಡತೆ ಚೆನ್ನಾಗಿರಲಿಲ್ಲ. ಈ 'ಚಿತ್ರಕೂಟ'ವೆಲ್ಲಾ ಬೂಟಾಟಿಕೆ. ಅವಳು ವಾಸುದೇವರಾಯನ ಪ್ರಣಯಿನಿಯಾಗಿದ್ದಳು. ಅದು ಲೋಕಕ್ಕೇ ತಿಳಿದ ಗುಟ್ಟು! ಹೊಸದೇನೂ ಅಲ್ಲ. ಈ ರಮಾದೇವಿಯನ್ನೂ ಅವರು ಅವರ ಗುಂಪಿಗೆ ಎಳೆದರು. ವ್ಯಭಿಚಾರ ಬುದ್ಧಿಯು ಹೆಂಗಸರನ್ನು ಕಟ್ಟಿಹಾಕಲಾದೀತೆ? ಅವಳನ್ನೂ ಕೈಬಿಟ್ಟೆ. ಆ ಗುಂಪಿನಲ್ಲಿಯೇ ಏನೋ ಕರಾಮತ್ತು ನಡೆದಿದೆ. ಈ ಕೊಲೆಯ ಹಿಂದೆ ಇರುವುದೆಲ್ಲಾ ವ್ಯಭಿಚಾರದ ಕಶ್ಮಲ ಕಥೆ ಇರಬೇಕು. ಅದನ್ನು ಪತ್ತೆ ಹಚ್ಚುವುದು ಹೇಗೆ?"

"ಇದೆಲ್ಲಾ ಸರಿಯಾಗಿದೆ, ರಾಯರೇ. ನೀವೇನೂ ಸುಳ್ಳು ಹೇಳುವುದಿಲ್ಲ. ನಿಮ್ಮ 'ವಿಲ್' ಸಹ ಸಾಚಾ! ಅದರಿಂದ ನಿಮ್ಮ ಮನೋಭಾವವೂ ತಿಳಿಯುತ್ತದೆ. ಆದರೆ ಈ ಶ್ಯಾಮಲಾದೇವಿಯ ಕೊಲೆಯಾಯಿತೆಂದು ಊರೆಲ್ಲಾ ಪುಕಾರಾದರೂ ನೀವು ಅತ್ತ ಕಡೆ ಸುಳಿಯಲಿಲ್ಲವೇಕೆ?"

"ಅದೇ ಹೇಳಿದೆನಲ್ಲಾ! ನನಗೆ ಅವರೆಲ್ಲಾ ನೀತಿಬಾಹಿರರೆಂದು ಮೊದಲಿನಿಂದಲೂ ಮನದಟ್ಟಾಗಿತ್ತು. ಈ ಕೊಲೆಯಾಯಿತೆಂದು ಕೇಳುತ್ತಲೇ ಆ ವ್ಯಭಿಚಾರದಿಂದಲೇ ಅವಳ ಮರಣವೂ ಪ್ರಾಪ್ತವಾಯಿತೆಂದುಕೊಂಡೆ. ಎಷ್ಟಾದರೂ ಲೋಕದ ದೃಷ್ಟಿಯಲ್ಲಿ ಅವಳು ನನ್ನ ಹೆಂಡತಿಯಲ್ಲವೇ? ಅವಳು ವ್ಯಭಿಚಾರದ ಮಡುವಿನಲ್ಲಿ ಧುಮುಕಿ ಪ್ರಾಣ ಕಳೆದುಕೊಂಡಿರುವಾಗ ಅಲ್ಲಿಗೆ ನಾನು ಹೋಗಬಹುದೇ! ಆ ಗುಂಪಿಗೆ ಮುಖ ತೋರಿಸಬಹುದೇ?"

"ಹೇಗಾದೀತು? ನೀವು ಹೋಗದಿದ್ದುದೇ ಸರಿ! ಆದರೆ ಆ ರಮಾದೇವಿಯು ಏಕೆ ನಿಮ್ಮ ಮೇಲೆಯೇ ಹೇಳುತ್ತಾಳೆ?"

"ಯಾರೋ ಅವಳಿಗೆ ಹಾಗೆ ಹೇಳುವಂತೆ ಬೋಧನೆ ಮಾಡಿದ್ದಾರೆ. ಈ ಕೊಲೆಪಾತಕತನದಿಂದ ನುಣಿಚಿಕೊಳ್ಳಲು ಅವರು ಈ ತಂತ್ರ ಹೂಡಿದ್ದಾರೆ.

ಅಥವಾ ನನ್ನಿಂದ ದುಡ್ಡು ಸೆಳೆಯುವುದಕ್ಕೆ ಈ ಉಪಾಯ ಮಾಡಿದ್ದರೂ ಮಾಡಿರಬಹುದು. ಆ ರಮಾದೇವಿಯನ್ನು ಹಿಡಿದು ಲಾಕಪ್ಪಿನಲ್ಲಿ **ಹಾಕಿ,** ಚೆನ್ನಾಗಿ ಬೆತ್ತದ ಪೂಜೆ ಮಾಡಿರಿ! ಆಗ ಅವಳ ಸ್ನೇಹಿತನಾರೆಂಬುದು ಬಾಯಿ ಬಿಡುತ್ತಾಳೆ. ಆವನನ್ನು ಹಿಡಿದರೆ ಈ ಕೊಲೆಯ ರಹಸ್ಯವೆಲ್ಲಾ ಬಯ ಲಾಗುತ್ತೆ!"

"ರಂಗರಾಯರೇ, ಈ ಮೊಕದ್ದಮೆ ಒಂದು ತೀರ್ಮಾನಕ್ಕೆ ಬರುವ ವರೆಗೆ ನಮಗೆ ನಿಮ್ಮ ಸಹಾಯ ಬೇಕು. ನೀವು ಇದರಲ್ಲಿ ಅಪರಾಧಿಯಲ್ಲದಿ ದ್ದರೂ ಒಬ್ಬ ಮುಖ್ಯ ಸಾಕ್ಷಿ."

ರಂಗರಾಯನ ಮುಖವು ಪೆಚ್ಚಾಯಿತು. ಅವನು ಬಿರುಗಣ್ಣಿನಿಂದ ನೋಡುತ್ತಾ, "ಡಾಕ್ಟರ್ ಸುಬ್ಬರಾವ್‌ರವರನ್ನು ನೋಡಿ ಮಾತನಾಡಿದಿ ರೇನು?"

"ಸುಬ್ಬರಾವ್! ಅವರಿಗೂ ಏನಾದರೂ ಸೂಕ್ಷ್ಮಾಂಶಗಳು ತಿಳಿದಿರ ಬಹುದು. ಅವರನ್ನು ಮಾತನಾಡಿಸುವ ಪ್ರಸಂಗ ಇನ್ನೂ ಬಂದಿಲ್ಲ" ಎಂದು ಹೇಳಿ ಮಾಧವರಾಯನು ಮರ್ಯಾದೆಯಿಂದ ಅಪ್ಪಣೆ ಪಡೆದು ಹೊರಟು ಹೋದನು.

ಅದೇ ದಿನ ಸಂಧ್ಯಾಕಾಲ ಮಾಧವರಾಯನು ಕಾರಿನಲ್ಲಿ ಕುಳಿತು ರಂಗ ರಾಯನ ಮನೆಗೆ ಬಂದನು. ರಂಗರಾಯನು ಅಲ್ಲಿರಲಿಲ್ಲ. ಅಲ್ಲಿಂದ ಡಾಕ್ಟರ್ ಸುಬ್ಬರಾಯರ ಮನೆಗೆ ಹೋದನು. ಅಲ್ಲಿಯೂ ರಂಗರಾಯನು ಇರಲಿಲ್ಲ.

"ಏನಯ್ಯಾ ಮಾಧವರಾವ್. ಇಲ್ಲಿಯ ವರೆಗೆ ಬಂದೆ?" ಎಂದು ಡಾಕ್ಟರ್ ಸ್ವಾಗತಿಸಿದರು.

ಮಾಧವರಾವ್ ಒಳಗೆ ಹೋಗಿ ಕುಳಿತನು. "ರಂಗರಾಯರನ್ನು ನೋಡುವುದಕ್ಕೆ ಬಂದೆ" ಎಂದು ಹೇಳಿದನು.

ರಂಗರಾಯನ ಎದೆ ಹೊಡೆದುಕೊಳ್ಳಲಾರಂಭಿಸಿತು.

ಮಾಧವರಾಯನು "ರಂಗರಾಯರೇ, ಮತ್ತೊಂದು ಮುಖ್ಯ ಸಮಾಚಾ ರವಿದೆ. ಅದನ್ನು ಕೇಳುವುದಕ್ಕೆ ಬಂದಿದೇನೆ" ಎಂದನು.

"ಈ ದಿನ ಬೆಳಿಗ್ಗೆ ಎರಡು ಗಂಟೆ ಹೊತ್ತು ಮಾತನಾಡಿಕೊಂಡು ಹೋದಿರಲ್ಲ. ನಿಮ್ಮ ವಿಚಾರಣೆ ಎಲ್ಲವೂ ಪೂರೈಸಲಿಲ್ಲವೋ ?"

"ಒಂದೇ ಒಂದು ವಿಷಯವಿದೆ. ಅದು ಬಹಳ ಮುಖ್ಯವಾದುದು."

"ಈ ಡಾಕ್ಟರು ಇರಬಹುದೋ ? ಒಳಗೆ ಕೋಣೆಗೆ ಹೋಗಿ ಮಾತನಾಡೋಣವೋ ?"

"ಈ ವಿಷಯ ಡಾಕ್ಟರಿಗೂ ಸಂಬಂಧಿಸಿದ್ದೇ ?"

ಡಾಕ್ಟರಿಗೆ ಅದರಿಂದ ಸ್ವಲ್ಪವೂ ಗಾಬರಿಯಾಗಲಿಲ್ಲ. ಅವರು ನಗುತ್ತಾ "ಮಾಧವರಾವ್, ನಿನ್ನ ಬುದ್ಧಿ ಕುಶಾಗ್ರ ಬುದ್ಧಿ ಕಣೋ ! ನಾನೂ ಈ ರಂಗ ರಾಯನೂ ಸೇರಿ, ಆ ಶ್ಯಾಮಲಾದೇವಿಯನ್ನು ಕೊಲೆಮಾಡಿದ್ದೇವೆಂದು, ನಿನಗೆ ಕರ್ಣಪಿಶಾಚಿ ನುಡಿಯಿತೇನೋ ?" ಎಂದು ಕೇಳಿದರು.

"ಇಲ್ಲವಯ್ಯಾ ಇಲ್ಲ. ಆ ಕೃತ್ಯವನ್ನು ಯಾರು ಮಾಡಿದರೋ ದೇವರೇ ಬಲ್ಲ ಅವಳು ಸಾಯಲಿಲ್ಲ. ನಮ್ಮನ್ನು ಸಾಯಿಸುತ್ತಿದ್ದಾಳೆ ! ಅಷ್ಟೆ. ಇದೊಂದು ಸಣ್ಣ ವಿಷಯ. ಕಾನೂನಿನ ವಿಷಯ, ಪರಿಹಾಸ್ಯ ಮಾಡಬೇಡ. ಸುಮ್ಮನೆ ಕುಳಿತುಕೊ !" ಎಂದು ಹೇಳಿ, ರಂಗರಾಯನ ಕಡೆ ತಿರುಗಿ, "ರಾಯರೇ, ಈ ರಮಾದೇವಿಯು 'ಚಿತ್ರಕೂಟ'ಕ್ಕೆ ಮೂರು ಸಾವಿರ ರೂಪಾಯಿ ಚಂದಾ ಕೊಟ್ಟಿದ್ದಾಳೇನು ?" ಎಂದು ಕೇಳಿದನು.

"ಅದು ನಿಮಗೆ ಹೇಗೆ ತಿಳಿಯಿತು ?"

"ರಮಾದೇವಿಯೇ ಹೇಳಿದಳು."

"ಒಳ್ಳೆಯದು."

"ಆ ಚಂದಾ ಬಗ್ಗೆ ನಿಮಗೆ ಒಂದು ರಸೀದಿ ಕೊಡಲ್ಪಟ್ಟಿತ್ತಲ್ಲವೆ ?"

"ಹೌದು. ಒಂದು ರಸೀದಿಯನ್ನು ರಮಾದೇವಿಯೇ ನನ್ನ ಕೈಗೆ ಕೊಟ್ಟಳು."

"ಆ ದಿನವೇ ನೀವು ರಮಾದೇವಿಯನ್ನು ಮನೆ ಬಿಟ್ಟು ಓಡಿಸಿದಿರಲ್ಲವೆ ?"

ರಂಗರಾಯನು ಉತ್ತರ ಕೊಡಲಿಲ್ಲ.

ಡಾಕ್ಟರು "ಆ ಕಥೆಗೂ ಈ ಮೊಕದ್ದಮೆಗೂ ಏನು ಸಂಬಂಧವಿದೆ ?"

ಎಂದು ಕೇಳಿದರು.

ಮಾಧವರಾಯನು " ಇದೆಯಯ್ಯಾ ಇದೆ. ನೀನು ಮಧ್ಯೆ ಮಾತನಾಡಬೇಡ! " ಎಂದು ಹೇಳಿ, " ರಂಗರಾಯರೇ, ನೀವು ಈ ಪ್ರಶ್ನೆಗೆ ಉತ್ತರ ಕೊಡಲೇ ಬೇಕು. ಆ ರಸೀದಿ ನಿಮ್ಮಲ್ಲಿತ್ತಲ್ಲವೆ? " ಎಂದು ಕೇಳಿದನು.

ರಂಗರಾಯನು " ಹೌದು. ಆ ರಸೀದಿ ನನ್ನಲ್ಲಿಯೇ ಇದ್ದ ಜ್ಞಾಪಕವಿದೆ." ಎಂದನು.

" ಸರಿ. ಈಗ ಆ ರಸೀದಿ ಎಲ್ಲಿದೆ? "

" ಇರಬಹುದು. ನಮ್ಮ ಮನೆಯಲ್ಲಿ ಎಲ್ಲಿಯೋ ಇರಬಹುದು."

ಮಾಧವರಾವ್ ತನ್ನ ಜೇಬಿನಿಂದ, ಒಂದು ದೊಡ್ಡ ಸಿಗರೇಟ್ ಕೇಸ್ ತೆಗೆದನು. ಆ ಕೇಸನ್ನು ಬಿಡಿಸಿ—

" ರಂಗರಾಯರೇ ನೋಡಿ! ಇದನ್ನು ಮುಟ್ಟಬೇಡಿ! ಇದೇ ಆ ರಸೀದಿಯೊ? " ಎಂದು ಆ ಸಿಗರೇಟ್ ಕೇಸಿನಲ್ಲಿದ್ದ ಒಂದು ರಸೀದಿಯನ್ನು ತೋರಿಸಿ ಕೇಳಿದನು.

ರಂಗರಾಯನು ಬಗ್ಗಿ ನೋಡಿದನು. ಒಂದೆರಡು ನಿಮಿಷಗಳ ಮೇಲೆ, " ನಾನು ಖಚಿತವಾಗಿ ಹೇಳಲಾರೆ! " ಎಂದನು.

ಡಾಕ್ಟರೂ ಆ ರಸೀದಿಯನ್ನು ನೋಡಿದರು. " ಇರಬಹುದು! ಇದೇ ರಸೀದಿಯಿರಬಹುದು. ನನಗೆ ಆ ನಂಬರ್ ಜ್ಞಾಪಕವಿದೆ. ಅದನ್ನೇಕೆ ನಾವು ಮುಟ್ಟಬಾರದು? " ಎಂದು ಕೇಳಿದರು.

ಮಾಧವರಾಯನು " ಅದರಲ್ಲಿ ಕೈಬೆರಳುಗಳ ಗುರುತಿದೆ. ಅದು ಪರೀಕ್ಷೆಗೆ ಹೋಗಬೇಕು." ಎಂದನು.

ಸ್ವಲ್ಪ ಹೊತ್ತು ಬಿಟ್ಟು " ರಂಗರಾಯರೇ, ನೀವು ನನ್ನೊಡನೆ ಪೋಲೀಸು ಠಾಣೆಗೆ ಬರಬೇಕು. ಅಲ್ಲಿ ನಿಮ್ಮ ಕೈಬೆರಳುಗಳ ಅಚ್ಚು ತೆಗೆದುಕೊಳ್ಳಬೇಕು." ಎಂದನು.

ಡಾಕ್ಟರೂ ರಂಗರಾಯನೂ ಒಬ್ಬರ ಮುಖವನ್ನೊಬ್ಬರು ನೋಡಿದರು.

ಡಾಕ್ಟರು " ಇನ್‌ಸ್ಪೆಕ್ಟರ್! ಮುಚ್ಚುಮರೆ ಬೇಡ! ನೀನು ಈ ರಂಗ

ರಾಯನನ್ನು ಅರೆಸ್ಟ್ ಮಾಡುತ್ತೀಯೇನು ? ಹೇಳಿಬಿಡು ! " ಎಂದರು.

ಮಾಧವರಾಯನು ನಗುತ್ತಾ " ರಂಗರಾಯನನ್ನು ಅರೆಸ್ಟ್ ಮಾಡಿದ್ದೇನೆ ಡಾಕ್ಟರ್ ! " ಎಂದನು.

ರಂಗರಾಯನು ಸೋಫಾದ ಮೇಲೆ ಕುಸಿದು ಬಿದ್ದನು.

ಇನ್‌ಸ್ಪೆಕ್ಟರು ರಂಗರಾಯನನ್ನು ಕಾರಿನಲ್ಲಿ ಕೂಡಿಸಿಕೊಂಡು ಪೋಲೀಸ್ ಸ್ಟೇಷನ್‌ಗೆ ಕರೆದೊಯ್ದು ಲಾಕಪ್ಪಿನಲ್ಲಿಟ್ಟರು.

ಮಾರನೆಯ ದಿನ ಪತ್ರಿಕೆಯಲ್ಲಿ ರಂಗರಾಯನ ದಸ್ತಗಿರಿಯ ವಾರ್ತೆಗಳು ಪುಂಖಾನುಪುಂಖವಾಗಿ ಬಂದುವು.

ಪೋಲೀಸು ಸೂಪರಿಂಟೆಂಡೆಂಟರೂ, ಇನ್‌ಸ್ಪೆಕ್ಟರೂ ಕೇಸಿನ ವಿದ್ಯಮಾನಗಳನ್ನು ಚರ್ಚೆ ಮಾಡಿದರು. ಆ ರಸೀದಿ ಕೈಯಿಂದ ಮುದುರಿಹಾಕಲ್ಪಟ್ಟಿತ್ತು. ಅದರ ಮೇಲೆ ರಂಗರಾಯನ ಕೈಬೆರಳ ಗುರುತುಗಳಿವೆ. ನೆಲದ ಮೇಲೆ ಬಿದ್ದಿದ್ದ ಆ ಕಾಗದದ ಮೇಲೆ ಬೂಡ್ಸು ಹೆಜ್ಜೆ ಇಡಲ್ಪಟ್ಟಿದೆ. ಆ ಬೂಡ್ಸು ಕಾಲಿನಿಂದಲೇ ಶ್ಯಾಮಲಾದೇವಿಯ ಎದೆಗೆ ಬಲವಾದ ಪೆಟ್ಟು ಬಿದ್ದಿದೆ. ಶ್ಯಾಮಲಾದೇವಿಯು ಎಲ್ಲಿ ಬಿದ್ದಿದ್ದಳೋ ಅದೇ ಸ್ಥಳದಲ್ಲಿ ಆ ರಸೀದಿ ಇತ್ತು. ಇನ್ನೂ ಕೆಲವು ಕಾಗದಗಳು ಅಲ್ಲಿ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಅದರಲ್ಲಿ ಈ ಕೇಸಿಗೆ ಸಂಬಂಧಪಟ್ಟ ಅಂಶಗಳೇನೂ ಇರಲಿಲ್ಲ.

ರಮಾದೇವಿಯೊಬ್ಬಳು ಮಾತ್ರ ರಂಗರಾಯನೇ ಕೊಲೆಗಾರನೆಂದು ಹೇಳುತ್ತಾಳೆ.

ಈ ಮೊಕದ್ದಮೆಯಲ್ಲಿರುವ ಸಾಕ್ಷಿಯು ಇಷ್ಟೇ. ಆದರೆ ಶ್ಯಾಮಲಾದೇವಿಗೆ ಜ್ಞಾನ ಬರುತ್ತಿದೆ. ಅವಳು ಬಂದು ನ್ಯಾಯಾಧೀಶರ ಮುಂದೆ ತನ್ನ ಕಥೆಯನ್ನೆಲ್ಲಾ ಹೇಳುತ್ತಾಳೆ.

—ಹೀಗೆ ಅವರಿಬ್ಬರೂ ಆಲೋಚನೆ ಮಾಡಿದರು. ನ್ಯಾಯಾಧೀಶರ ಮುಂದೆ ಮೊಕದ್ದಮೆಯನ್ನಿಟ್ಟು ರಿಮಾಂಡು ತೆಗೆದುಕೊಂಡರು.

ರಂಗರಾಯನನ್ನು ಕೋರ್ಟಿಗೆ ಕರೆತಂದಿದ್ದರು. ಜನಸಂದಣಿಯು ಕುತೂಹಲದಿಂದ ಕಿಕ್ಕಿರಿದು ಹೋಗಿತ್ತು.

ಜನರೆಲ್ಲರೂ ಕೊಲೆಯ ಕಥೆಯನ್ನು ಚಿತ್ರವಿಚಿತ್ರವಾಗಿ ಮಾತನಾಡಿಕೊಳ್ಳುತ್ತಿದ್ದರು. ಅದೆಲ್ಲಾ ಅಸ್ಪಷ್ಟವಾಗಿ ರಂಗರಾಯನ ಕಿವಿಗೂ ಬೀಳುತ್ತಿತ್ತು! ರಂಗರಾಯನೂ ಇಬ್ಬರು ಲಾಯರುಗಳನ್ನಿಟ್ಟಿದ್ದನು.

ಆ ಲಾಯರುಗಳಿಗೆ ರಂಗರಾಯನೇ ಆ ಕೃತ್ಯವನ್ನು ಮಾಡಿದವನೆಂದು ಚೆನ್ನಾಗಿ ತಿಳಿದಿತ್ತು! ಅವನನ್ನು ಬಿಡುಗಡೆ ಮಾಡಿಸುವುದಾಗಿ ಭರವಸೆ ಕೊಡುತ್ತಿದ್ದರು. ಆಗಲೆ ಹೆಚ್ಚು ಫೀಜನ್ನು ವಸೂಲುಮಾಡಿಕೊಂಡಿದ್ದರು.

# ೩೧

ಮೊಕದ್ದಮೆಯಲ್ಲಿ ಶ್ಯಾಮಲಾದೇವಿಯ ಸ್ಪಷ್ಟ ಹೇಳಿಕೆಯು ಬಹು ಮುಖ್ಯವೆಂದು ಪೋಲೀಸು ಅಧಿಕಾರಿಗಳು ತವಕಪಡುತ್ತಿದ್ದರು.

ಶ್ಯಾಮಲಾದೇವಿಗೆ ಮುಕ್ಕಾಲು ಮೂರುವೀಸ ಪಾಲೆಲ್ಲಾ ಗುಣವಾಗಿದೆ. ಅವಳ ಪಕ್ಕದಲ್ಲಿ ಯಾವಾಗಲೂ ರಮಾದೇವಿ – ವಾಸುದೇವ ಅವರು ಇರುತ್ತಾರೆ. ಆ ದಿನ ನಡೆದ ವಿಚಾರವನ್ನಾಗಲೀ, ಈ ಮೊಕದ್ದಮೆಯ ವಿಚಾರವನ್ನಾಗಲೀ ಶ್ಯಾಮಲಾದೇವಿಯೊಡನೆ ಪ್ರಸ್ತಾಪಿಸಕೂಡದೆಂದು ಅವರುಗಳಿಗೆ ಕೃಷ್ಣರಾಜೇಂದ್ರ ಆಸ್ಪತ್ರೆಯ ಡಾಕ್ಟರು ಕಟ್ಟುಸಿಟ್ಟಾಗಿ ಹೇಳಿದ್ದರು.

ಶ್ಯಾಮಲಾ ಮಲಗಿದ್ದ ಹಾಗೆಯೇ ಸ್ವಲ್ಪ ಸ್ವಲ್ಪ ಮಾತನಾಡುತ್ತಾಳೆ. ನಗುತ್ತಾಳೆ. ರಮಾದೇವಿಯನ್ನು ಹಾಸ್ಯಮಾಡುತ್ತಾಳೆ. ವಾಸುದೇವನನ್ನು ಸಪ್ರೇಮ ದೃಷ್ಟಿಯಿಂದ ನೋಡುತ್ತಾಳೆ. ಸ್ವಸ್ಥವಾಗುತ್ತಿದ್ದಾಳೆ.

ಪೋಲೀಸು ಅಧಿಕಾರಿಗಳು ನ್ಯಾಯಾಧೀಶರ ಅಪ್ಪಣೆ ಪಡೆದು, ಡಾಕ್ಟರನ್ನೂ ಎದುರಿಗಿಟ್ಟುಕೊಂಡು ಶ್ಯಾಮಲಾದೇವಿಯ ಭೇಟಿಮಾಡಿದರು. ಅವರು ಪೋಲೀಸು ಡ್ರೆಸ್ ಹಾಕಿಕೊಳ್ಳದೆ ಸಿಲ್ಕು ಸೂಟು ಧರಿಸಿಕೊಂಡಿದ್ದರು. ಶ್ಯಾಮಲಾದೇವಿಯ ಮಂಚದ ಪಕ್ಕದಲ್ಲಿ ಕುರ್ಚಿಗಳ ಮೇಲೆ ಕುಳಿತುಕೊಂಡರು. ಮೆಡಿಕಲ್ ಆಫೀಸರು ಶ್ಯಾಮಲಾದೇವಿಯ ತಲೆಯ ಕಡೆ ಕುಳಿತಿದ್ದರು.

ಮತ್ತೊಂದು ಕಡೆ ವಾಸುದೇವನೂ, ರಮಾದೇವಿಯೂ ಕುಳಿತಿದ್ದರು.

ಪೋಲೀಸು ಅಧಿಕಾರಿಯು ನಯವಾಗಿ ಮಾತನಾಡುತ್ತಾ "ಶ್ಯಾಮಲಾದೇವಿ! ನೀವು ಸುಮಾರು ಒಂದು ತಿಂಗಳಿಂದ ಆಸ್ಪತ್ರೆಯಲ್ಲಿದ್ದೀರಿ, ಗೊತ್ತಿದೆಯೇ ?" ಎಂದನು.

ಶ್ಯಾಮಲೆ ನಗುತ್ತಾ "ನಾನು ಆಸ್ಪತ್ರೆಯಲ್ಲಿರುವುದು ಗೊತ್ತಿದೆ." ಡಾಕ್ಟರಿಗೆ ಕೈ ಮುಗಿದು "ಈ ಡಾಕ್ಟರ ಅನುಗ್ರಹ! ಡಾಕ್ಟರು ಬಹಳ ಉಪಕಾರ ಮಾಡಿದ್ದಾರೆ." ಎಂದಳು.

ಪೋಲೀಸು ಅಧಿಕಾರಿಯು ಎರಡು ನಿಮಿಷಗಳ ತರುವಾಯ! "ಶ್ಯಾಮಲಾದೇವಿ! ನಿಮಗೆ ಬಹಳ ಪೆಟ್ಟಾಗಿತ್ತು. ತಲೆಯೊಡೆದು ರಕ್ತಸೋರುತಿತ್ತು! ನೀವು ಬದುಕಲಾರಿರೆಂದೇ ಭಾವಿಸಿದ್ದೆವು. ಬದುಕಿಕೊಂಡಿರಿ! ಬಹಳ ಸಂತೋಷ!" ಎಂದನು.

ಶ್ಯಾಮಲಾ ನಗುಮುಖಮಾಡಿ ಕೈಮುಗಿದಳು.

ಪೋಲೀಸು ಅಧಿಕಾರಿಯು "ಶ್ಯಾಮಲಾದೇವಿ! ಜ್ಞಾಪಕವಿದೆಯೇ? ಆ ದಿನ ರಾತ್ರಿ! ವೈಸ್‌ರಾಯ್ ರಸ್ತೆಯ ಕೊನೆಯಲ್ಲಿ! ನೀವು ಮನೆಗೆ ಹೋಗುತ್ತಿದ್ದಿರಿ. ಆಗ ಯಾರೋ ನಿಮ್ಮ ಮೇಲೆ ಆಕ್ರಮಣಮಾಡಿ ಹೊಡೆದರು. ಆತ ಯಾರು ಜ್ಞಾಪಿಸಿಕೊಂಡು ಹೇಳಬಲ್ಲಿರಾ?" ಎಂದು ಕೇಳಿದನು.

ಶ್ಯಾಮಲಾದೇವಿಯ ಮುಖವು ಕೆಂಪಾಯಿತು ಕೂಡಲೇ ವಿವರ್ಣವಾಯಿತು. ಎರಡು ಕೈಗಳನ್ನೂ ಮೇಲಕ್ಕೆತ್ತಿ ಚಿಟ್ಟನೆ ಚೀರಿದಳು. ಮೂರ್ಛೆ ಬಂದಿತು.

ಮೆಡಿಕಲ್ ಆಫೀಸರು ಎಲ್ಲರನ್ನೂ ಹೊರಗೆ ಹೋಗಬೇಕೆಂದು ಕಣ್ಣು ಸನ್ನೆ ಮಾಡಿದರು. ತಕ್ಷಣ ಐಸ್ ಬ್ಯಾಗ್ ತರಿಸಿ ತಲೆಗೆ ಹಾಕಿದರು. "ಸರಿಯಾಗಿ ನೋಡಿಕೊಳ್ಳಿ! ಹೆಮರೇಜ್ ಆಗಬಹುದು" ಎಂದು ನರ್ಸುಗಳನ್ನು ಎಚ್ಚರಿಸಿದರು.

ಆ ವಾರ್ಡಿನಿಂದ ಹೊರಗೆ ಬಂದು ಆ ಆಸ್ಪತ್ರೆಯ ಅಧಿಕಾರಿಯು ಪೋಲೀಸು ಅಧಿಕಾರಿಗಳನ್ನು ಕುರಿತು "ನನಗೆ ಹೀಗಾಗಬಹುದೆಂಬ ಸಂದೇಹವಿತ್ತು. ನೀವು ತಪ್ಪುಮಾಡಿದಿರಿ!" ಎಂದು ಹೇಳಿದರು.

ಪೋಲೀಸ್ ಅಧಿಕಾರಿಯು "ಅದೇನೋ ಸರಿ! ನಾವು ಇನ್ನೆಷ್ಟು ದಿನಗಳು ಹೀಗೆ ಕಾಯಬೇಕು?" ಎಂದು ಕೇಳಿದನು.

ಒಂದು ತಿಂಗಳ ಅವಕಾಶಬೇಕೆಂದು ವೈದ್ಯರು ಹೇಳಿ ಪೋಲೀಸು ಅಧಿ

ಕಾರಿಗಳನ್ನು ಕಳಿಸಿಬಿಟ್ಟರು.

ಮರುದಿನ ಶ್ಯಾಮಲೆಗೆ ಪ್ರಜ್ಞೆ ಬಂತು. ವಾಸುದೇವನೊಬ್ಬನೇ ಪಕ್ಕದಲ್ಲಿ ಕುಳಿತಿದ್ದನು.

ಶ್ಯಾಮಲೆಯು ವಾಸುದೇವನ ಕೈಯನ್ನು ಬಲವಾಗಿ ಹಿಡಿದುಕೊಂಡು " ವಾಸು ! ರಂಗರಾಯರು ಬಂದಿದ್ದರೇನು ?" ಎಂದು ಕೇಳಿದಳು.

ವಾಸುವು " ಇಲ್ಲ ! ಶ್ಯಾಮಲಾ !" ಎಂದು ಬೆನ್ನು ತಡವುತ್ತಾ " ನಿನ್ನನ್ನು ಯಾರೋ ಹೊಡೆದು ಹಾಕಿದ್ದರಲ್ಲವೆ ?" ಎಂದು ಕೇಳಿದನು.

ಶ್ಯಾಮಲಾ " ಹೌದು ವಾಸು ! ಹೊಡೆದು ಹಾಕಿದ್ದರು ! ಹೊಡೆದು ಹಾಕಿದ್ದರು ನಿಜ ! ನಾನು ಸಾಯಲಿಲ್ಲ ! " ಎಂದು ನಕ್ಕಳು !

ಏನೋ ಭಯವಾದವಳಂತೆ ವಾಸುವನ್ನು ಬಿಗಿಯಾಗಿ ತಬ್ಬಿಕೊಂಡಳು!

ವಾಸುವು ಶ್ಯಾಮಲಾದೇವಿಯನ್ನು ಸಂತೈಸಿ " ನೀನು ನ್ಯಾಯಾಸ್ಥಾನದಲ್ಲಿ ಸಾಕ್ಷಿ ನುಡಿಯಬೇಕು ಶ್ಯಾಮಲಾ " ಎಂದನು.

" ಓಹೋ ! ಸಾಕ್ಷಿ ಹೇಳಬಲ್ಲೆ ! ನೀನೇಕೆ ಚಿಂತಿಸುತ್ತಿ ! ವಾಸು ನನ್ನವನು ಎಂದು ಹೇಳುತ್ತೇನೆ " ಎಂದು ಹೇಳಿ ನಕ್ಕಳು.

* * * *

ಶ್ಯಾಮಲಾದೇವಿಗೆ ಪೂರ್ಣ ಗುಣವಾಯಿತು. ವಾಸುವೂ, ನಾರಾಯಣನೂ ಡಾಕ್ಟರ ಅಪ್ಪಣೆ ಪಡೆದು ಶ್ಯಾಮಲಾದೇವಿಯನ್ನು ಮನೆಗೆ ಕರೆದುಕೊಂಡು ಹೋದರು.

ವಾಸುದೇವನ ಮನೆಯಲ್ಲಿಯೇ ಶ್ಯಾಮಲೆಯನ್ನು ಇಟ್ಟರು. ಅಲ್ಲಿಯೇ ಔಷಧೋಪಚಾರಗಳು ನಡೆಯುತ್ತಿದ್ದುವು.

ಮೊಕದ್ದಮೆ ನಡೆಯುತ್ತಿರುವ ವಿದ್ಯಮಾನವನ್ನೆಲ್ಲಾ ತಾರಾ ಶ್ಯಾಮಲಾದೇವಿಗೆ ತಿಳಿಸಿದಳು. ಶ್ಯಾಮಲಾದೇವಿಯ ಸಾಕ್ಷಿಯು ಬಹು ಮುಖ್ಯವಾದ ಸಾಕ್ಷಿಯೆಂದು ಹೇಳಿದಳು.

ತಾರಾ " ಶ್ಯಾಮಲಾ ! ನೀನು ಸರಿಯಾಗಿ ಸಾಕ್ಷಿ ಹೇಳಬೇಕು.

ಆ ರಂಗರಾಯನಿಗೆ ತಕ್ಕ ಶಾಸ್ತಿಯಾಗಬೇಕು ” ಎಂದು ಆಗ್ರಹದಿಂದ ನುಡಿದಳು.

ಶ್ಯಾಮಲಾ ನಗು ನಗುತ್ತಾ ಒಪ್ಪಿಕೊಂಡಳು. ಪೋಲೀಸು ಅಧಿಕಾರಿಗಳು ಆ ದಿನ ನಡೆದ ಸಂಗತಿಯನ್ನೆಲ್ಲಾ ಯಥಾವತ್ತಾಗಿ ಕೋರ್ಟಿನಲ್ಲಿ ಹೇಳಬೇಕೆಂದು ಶ್ಯಾಮಲಾದೇವಿಗೆ ಬೋಧಿಸಿದರು. ಶ್ಯಾಮಲಾ ತಲೆಬಾಗಿ ಒಪ್ಪಿಕೊಂಡಳು.

ಕೋರ್ಟಿನಲ್ಲಿ ರಂಗರಾಯನ ವಿಚಾರಣೆಯ ದಿನ ಬಂದಿತು. ಶ್ಯಾಮಲಾದೇವಿ ಕೋರ್ಟಿಗೆ ಬರುತ್ತಾಳೆ, ರಮಾದೇವಿಯು ಸಾಕ್ಷಿ ಕೊಡುತ್ತಾಳೆ, ಎಂದು ಊರಿನಲ್ಲೆಲ್ಲಾ ವರ್ತಮಾನ ಹಬ್ಬಿತು. ಕೋರ್ಟಿನ ಆವರಣದಲ್ಲೆಲ್ಲಾ ಪೋಲೀಸು ಕಾವಲಿತ್ತು !

ವಾಸುದೇವ, ತಾರೆ ಅವರಿಬ್ಬರೂ ಶ್ಯಾಮಲಾದೇವಿಯನ್ನು ಎರಡು ಕಡೆಯೂ ಕೈಹಿಡಿದು ಕೋರ್ಟಿನೊಳಗೆ ಕರೆದುಕೊಂಡು ಹೋಗಿ ಕುರ್ಚಿಯ ಮೇಲೆ ಕೂಡಿಸಿದರು.

ರಂಗರಾಯನನ್ನು ಅಪರಾಧಿಗಳ ಕಟಕಟೆಯಲ್ಲಿ ನಿಲ್ಲಿಸಿದ್ದರು.

ಆ ದಿನ ಎರಡೇ ಎರಡು ಸಾಕ್ಷಿಗಳ ವಿಚಾರಣೆ ನಡೆಯತಕ್ಕದೆಂದು ಗೊತ್ತಾಗಿತ್ತು.

ರಮಾದೇವಿ ಮತ್ತು ಶ್ಯಾಮಲಾದೇವಿಯರ ಸಾಕ್ಷಿಗಳು !

ನ್ಯಾಯಾಧೀಶರೂ ನ್ಯಾಯವಾದಿಗಳೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತಿದ್ದರು.

ಪತ್ರಿಕಾ ಪ್ರತಿನಿಧಿಗಳೂ ಮತ್ತು ಅನೇಕ ಮಂದಿ ಗಣ್ಯ ವ್ಯಕ್ತಿಗಳೂ ಕೋರ್ಟಿನೊಳಗೆ ಪ್ರೇಕ್ಷಕರಾಗಿ ಕುಳಿತಿದ್ದರು. ಕೋರ್ಟಿನ ಹೊರಗೆ ಬಹು ಮಂದಿ ನೆರೆದಿದ್ದರು.

ಮೊದಲು ರಮಾದೇವಿಯ ಸಾಕ್ಷ್ಯಕ್ಕೆ ಆರಂಭವಾಯಿತು. “ ರಂಗರಾಯರು ನನ್ನ ಪತಿ, ಶ್ಯಾಮಲಾದೇವಿಯು ನನ್ನ ಅಕ್ಕ !

“ ರಂಗರಾಯರು ನನಗೆ ನಾನಾವಿಧವಾದ ಕಿರುಕುಳಗಳನ್ನು ಕೊಡುತ್ತಿ

ದ್ದರು. ಎಲ್ಲವನ್ನೂ ಸಹಿಸುತ್ತಿದ್ದೆ. ಅನೇಕ ವೇಳೆ ಚಿತ್ರಹಿಂಸೆ ಮಾಡುತ್ತಿದ್ದರು. ನಾನು 'ಚಿತ್ರಕೂಟ'ಕ್ಕೆ ಮೂರು ಸಾವಿರ ರೂಪಾಯಿಗಳ ಚಂದಾ ಕೊಟ್ಟೆ! ನಮ್ಮ ಸೋದರತ್ತೆ ನನ್ನಲ್ಲಿ ಕೊಟ್ಟಿದ್ದ ಚಿನ್ನವನ್ನು ಮಾರಿ ಆ ಹಣವನ್ನು ದಾನ ಮಾಡಿದೆ. ರಂಗರಾಯರ ಹಣ ಒಂದು ಕಾಸನ್ನೂ ನಾನು ಕೊಡಲಿಲ್ಲ. ನಾನೂ ತೆಗೆದುಕೊಳ್ಳಲಿಲ್ಲ. 'ಚಿತ್ರಕೂಟ'ಕ್ಕೆ ಹಣಕೊಟ್ಟಿದ್ದಕ್ಕಾಗಿ ಅವರು ನನ್ನನ್ನು ಮನೆಯಿಂದ ದೂಡಿದರು ! 'ಚಿತ್ರಕೂಟ'ದ ಮೇಲೆ ಶ್ಯಾಮಲಾದೇವಿಯ ಮೇಲೆ ರಂಗರಾಯರಿಗೆ ಬಹಳ ದ್ವೇಷ ! ನನ್ನನ್ನು ಮನೆಯಿಂದ ಹೊರಗಟ್ಟುವಾಗಲೇ ನನ್ನನ್ನೂ ಶ್ಯಾಮಲಾದೇವಿಯನ್ನೂ ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದರು!....

"ರಂಗರಾಯರು ಕಾಮಾಸಕ್ತರು, ಲೋಭಿಗಳು, ಡಾಂಭಿಕರು. ಅವರು 'ಚಿತ್ರಕೂಟ'ಕ್ಕೆ ಬಂದು ತಮ್ಮ ಆಸ್ತಿಯನ್ನೆಲ್ಲಾ ನನಗೂ, ಶ್ಯಾಮಲಾದೇವಿಗೂ 'ವಿಲ್' ಮಾಡಿರುವುದಾಗಿ, ಆಶೆಯನ್ನು ತೋರಿ ನನ್ನನ್ನು ಮನೆಗೆ ಬರಬೇಕೆಂದು ಪ್ರಾರ್ಥನೆ ಮಾಡಿದರು. ನನ್ನನ್ನು ಅವರೊಡನೆ ಕಳುಹಿಸಿಕೊಡಬೇಕೆಂದು ಶ್ಯಾಮಲಾದೇವಿಯನ್ನು ಬೇಡಿಕೊಂಡರು ! ನಾನು ನಿರಾಕರಿಸಿದೆ. ಅಂದು ಶ್ಯಾಮಲಾದೇವಿಯ ಮೇಲೂ ನನ್ನ ಮೇಲೆಯೂ ಸೇಡುತೀರಿಸಿಕೊಳ್ಳುವುದಾಗಿ ಕೋಪದಿಂದ ಶಪಥಮಾಡಿದ್ದರು.

"ಈ ಕೃತ್ಯ ನಡೆಯುವುದಕ್ಕೆ ಪೂರ್ವಭಾವಿಯಾಗಿ ಎರಡು ವಾರಗಳು ರಂಗರಾಯರು 'ಚಿತ್ರಕೂಟ'ದ ಸುತ್ತಲೂ ಅಲೆಯುತ್ತಿದ್ದರು.

"ಶ್ಯಾಮಲಾದೇವಿಯರು 'ರಂಗರಾಯರು ನಮ್ಮ ಆಶ್ರಮದ ಸುತ್ತಲೂ ಯಾವಾಗಲೂ ಅಲೆಯುತ್ತಿರುತ್ತಾರೆ. ಅವರು ರಮಾದೇವಿಯ ಮೇಲೆ ಕ್ರೂರವಾದ ಪ್ರತೀಕಾರ ಮಾಡುತ್ತಾರೆ. ಎಚ್ಚರಿಕೆಯಿಂದ ಇರಬೇಕು' ಎಂದು ಕಾವಲುಗಾರರಿಗೆ ಹೇಳುತ್ತಲೇ ಇದ್ದರು. ನನ್ನನ್ನೂ ಎಚ್ಚರಿಕೆಯಿಂದಿರಬೇಕೆಂದು ಹೇಳುತ್ತಿದ್ದರು.

"ರಂಗರಾಯರು ನನ್ನ ಮೇಲೆ ಪ್ರತೀಕಾರ ತೆಗೆದುಕೊಳ್ಳುತ್ತಾರೆಂದು ನಾವೆಲ್ಲರೂ ಭಾವಿಸಿದ್ದೆವು. ಶ್ಯಾಮಲಾದೇವಿಯರು ನಿರ್ಭೀತರಾಗಿ ಓಡಿಯಾಡುತ್ತಿದ್ದರು. ಅವರು ಆ ಸಂಜೆ ಹೊತ್ತಿನಲ್ಲಿ ಏಕಾಂಗಿಯಾಗಿ ಅವರ

ಕೈಗೆ ಸಿಕ್ಕಿದರು.

"ರಂಗರಾಯರು ಶ್ಯಾಮಲಾದೇವಿಯನ್ನು ಹೊಡೆದು ಹಾಕಿದರು ಅವರು ಪರಮ ಪಾಪಿ ! ಪಿಶಾಚಿ ! ಶ್ಯಾಮಲಾದೇವಿಯು ದೇವತೆ ! ರಂಗರಾಯರೇ ಕೊಲೆಪಾತಕಿ " ಎಂದು ಸಾಕ್ಷಿ ನುಡಿದಳು.

ಜನವೆಲ್ಲಾ "ಇನ್ನೇನು ಬೇಕು. ! ಕಣ್ಣಿನಲ್ಲಿ ಕಂಡಂತೆ ಅವನ ಪತ್ನಿಯೇ ಸಾಕ್ಷಿ ಹೇಳಿದ್ದಾಳೆ. ರಂಗರಾಯನೇ ಕೊಲೆಗಾರ ! " ಎಂದಿತು !

ಶ್ಯಾಮಲಾದೇವಿಯು ಸಾಕ್ಷಿ ಹೇಳಲು ಎದ್ದು ನಿಂತಳು !

ನ್ಯಾಯಾಧೀಶರೂ, ನ್ಯಾಯವಾದಿಗಳೂ ಎಲ್ಲರೂ ಶ್ಯಾಮಲಾದೇವಿಯ ಕಡೆ ನೋಡುತ್ತಿದ್ದರು.

ರಂಗರಾಯನು ಶ್ಯಾಮಲಾದೇವಿಯನ್ನು ನೋಡಲಾರದೇ ತಲೆತಗ್ಗಿಸಿಕೊಂಡು ರಮಾದೇವಿಯನ್ನು ಕ್ರೂರ ದೃಷ್ಟಿಯಿಂದ ನೋಡುತ್ತಿದ್ದನು.

ಶ್ಯಾಮಲಾದೇವಿಯು—

"ಇದು ನನ್ನನ್ನು ಯಾರೋ ಹೊಡೆದು ಹಾಕಿದ ಮೊಕದ್ದಮೆ !

"ಯಾರು ನನ್ನನ್ನು ಹೊಡೆದರೋ, ನಾನು ಹೇಗೆ ನೆಲದ ಮೇಲೆ ಹೆಣವಾಗಿ ಬಿದ್ದೆನೋ ನಾನರಿಯೆ ! ನನ್ನನ್ನು ಹೊಡೆದವರು ರಂಗರಾಯರಲ್ಲ ! ನಿಜವಾಗಿಯೂ ರಂಗರಾಯರು ನನ್ನನ್ನು ಹೊಡೆಯಲಿಲ್ಲ" ಎಂದು ಗಂಭೀರವಾಗಿ ನುಡಿದಳು.

ಇಡೀ ನ್ಯಾಯಸ್ಥಾನವೆಲ್ಲಾ "ಇದೇನು ? ಇದೇನು ? " ಎಂದು ಪ್ರತಿಧ್ವನಿಸಿತು !

ಶ್ಯಾಮಲಾದೇವಿಯು ಒಮ್ಮೆ ನ್ಯಾಯಾಧೀಶರ ಕಡೆ ನೋಡಿದಳು. ಒಮ್ಮೆ ರಂಗರಾಯನ ಕಡೆ ತಿರುಗಿ ನೋಡಿದಳು. ಆ ಸಭೆಯಲ್ಲಿ ಕಿಕ್ಕಿರಿದಿದ್ದ ಜನವನ್ನೂ ನೋಡಿದಳು.

ಕಣ್ಣು ಕತ್ತಲೆ ಕಟ್ಟಿ ಬಂದಿತು. ತಲೆ ತಿರುಗಿತು. ಆ ಕುರ್ಚಿಯ ಮೇಲೆ ಹಾಗೆಯೇ ಒರಗಿದಳು. ಮೂರ್ಚೆ ಬಂತು !

ನ್ಯಾಯಾಸ್ಥಾನದಲ್ಲೆಲ್ಲ ' ಹಾ ಹಾ ' ಕಾರವೆದ್ದಿತು. ಪೋಲೀಸಿನವರು

ಎಲ್ಲರನ್ನೂ ಹೊರಗೆ ಕಳಿಸಿದರು. ಪಕ್ಕದಲ್ಲಿಯೇ ಕುಳಿತಿದ್ದ ವಾಸುದೇವರಾಯನು ಶ್ಯಾಮಲಾದೇವಿಯನ್ನು ಅಡ್ಡಡ್ಡಲಾಗಿ ಎತ್ತಿಕೊಂಡು ಹೋಗಿ ತನ್ನ ಮೋಟಾರಿನಲ್ಲಿ ಮಲಗಿಸಿದನು. ರಮಾದೇವಿಯೂ ಅದೇ ಕಾರಿನಲ್ಲಿ ಕುಳಿತು ಹೊರಟುಹೋದಳು.

ಜನರೆಲ್ಲರೂ 'ರಮಾದೇವಿಯು ಹೇಳಿದ್ದೇನು? ಶ್ಯಾಮಲಾದೇವಿಯು ಹೇಳಿದ್ದೇನು?' ಎಂದು ಮಾತನಾಡಿಕೊಳ್ಳುತ್ತಾ ಹೊರಟು ಹೋದರು.

ರಂಗರಾಯನನ್ನು ಪೋಲೀಸಿನವರು ಪುನಃ ಜೈಲಿಗೆ ಸಾಗಿಸಿದರು.

ರಂಗರಾಯನು "ಶ್ಯಾಮಲಾದೇವಿಯು ನಿಜವಾಗಿಯೂ ದೇವತೆ!" ಎಂದುಕೊಂಡನು.

ಮಾರನೆಯ ದಿನವೇ ನ್ಯಾಯಾಧೀಶರು ರಂಗರಾಯನಿಗೆ ಮೂರು ವರ್ಷಗಳ ಕಠಿಣ ಸಜಾ ವಿಧಿಸಿದರು.

ಶ್ಯಾಮಲಾದೇವಿಯು 'ಚಿತ್ರಕೂಟ' ಆಶ್ರಮಗಳ ಕಾರ್ಯಭಾರವನ್ನೆಲ್ಲಾ ರಮಾದೇವಿಗೆ ವಹಿಸಿದಳು.

ವೈದ್ಯರುಗಳು ಶ್ಯಾಮಲಾದೇವಿಯು ಯಾವ ಕೆಲಸವನ್ನೂ ಮಾಡಕೂಡದು, ಎಂದು ಹೇಳಿದ್ದರು.

ನಾಲ್ಕಾರು ತಿಂಗಳುಗಳು ಕಳೆದುವು. ಶ್ಯಾಮಲಾದೇವಿಯು ಪೂರ್ಣ ಗುಣ ಹೊಂದಿದ್ದಳು.

ಊರಿನ ಜನರೆಲ್ಲರೂ "ರಂಗರಾಯನೇ ಶ್ಯಾಮಲಾದೇವಿಯನ್ನು ಕೊಲ್ಲಲು ಪ್ರಯತ್ನಿಸಿದ ಪಾತಕಿ" ಎನ್ನುತ್ತಿದ್ದರು.

"ಶ್ಯಾಮಲಾದೇವಿಯು ಆ ಘಾತುಕನನ್ನು ಕ್ಷಮಿಸಿದಳು" ಎಂದು ಹೇಳಿಕೊಳ್ಳುತ್ತಿದ್ದರು.

## ೩೨

ವಾಸುದೇವರಾಯನೂ ಶ್ಯಾಮಲಾದೇವಿಯೂ ಡಿಸೆಂಬರು ತಿಂಗಳಿನಲ್ಲಿ ಮದರಾಸಿಗೆ ಹೋದರು. ಮದರಾಸಿನಲ್ಲಿ ಎರಡು ತಿಂಗಳ ಕಾಲವನ್ನು ಕಳೆದರು.

ಒಂದು ದಿನ ಸಂಜೆ ವಾಸುದೇವನೂ ಶ್ಯಾಮಲೆಯೂ ಸಮುದ್ರ ತೀರದಲ್ಲಿ ಸಂಚರಿಸುತ್ತಿದ್ದಾಗ, ವಾಸುದೇವನು " ಶ್ಯಾಮಲಾ ! ಅಂದು ನ್ಯಾಯಾಸ್ಥಾನ ದಲ್ಲಿ ನೀನೇಕೆ ಸುಳ್ಳು ಹೇಳಿದೆ ? " ಎಂದು ಕೇಳಿದನು.

ಶ್ಯಾಮಲಾ " ವಾಸು, ಆ ರಂಗರಾಯರು ಏನೋ ಆಶೆಯಿಂದ ನನ್ನನ್ನು ಮದುವೆಯಾದರು ! ಅವರ ದೃಷ್ಟಿಯಿಂದ ನಾನು ಅವರಿಗೆ ಸರಿಯಾದ ಹೆಂಡತಿಯಲ್ಲ ! ಅದೇ ನೋವು ಅವರ ಮನಸ್ಸನ್ನು ಕೊರೆಯುತ್ತಿತ್ತು. ರಮಾ ದೇವಿಯೂ ಅವರನ್ನು ತಳ್ಳಿ ಹೊರಟು ಹೋದಳು. ಈ ಕಥೆಯಲ್ಲಾ ನಿನಗೆ ಗೊತ್ತೇ ಇದೆ. ಕೋಪದಿಂದ ನನ್ನನ್ನು ಹೊಡೆದು ಹಾಕಿದರು. ಅವರ ಮೇಲೆ ನನಗೇನೂ ಕೋಪವಿಲ್ಲ. ಆದ್ದರಿಂದ ನಾನು ಹಾಗೆ ಹೇಳಿದೆ. ಅದರಲ್ಲಿ ಸಂದೇಹವೇನೂ ಇಲ್ಲ ! " ಎಂದಳು.

ಸ್ವಲ್ಪ ಹೊತ್ತಾದನಂತರ "ವಾಸು ! ನನ್ನಿಂದ ನಿಜವಾಗಿ ಈ ಜಗತ್ತಿನಲ್ಲಿ ಎಲ್ಲವನ್ನೂ ಕಳೆದು ಕೊಂಡವನು ನೀನು ! " ಎಂದು ಹೇಳಿದಳು.

ವಾಸುವು " ಶ್ಯಾಮಲಾ, ನಾನು ಈಗ ಸಂತೋಷವಾಗಿದ್ದೇನೆ. ನೀನು ಸರ್ವದಾ ನನ್ನೊಡನೆ ಸ್ನೇಹದಿಂದ ಇದ್ದೀಯೆ. ಅದೇ ನನ್ನನ್ನು ಸುಖಿಯಾಗಿ ಮಾಡಿದೆ." ಎಂದು ಹೇಳಿದನು.

ಶ್ಯಾಮಲಾ " ವಾಸು ! ದೇವರು ನಮ್ಮಿಬ್ಬರನ್ನೂ ಒಂದಾಗಿಯೇ ಸೇರಿಸಿ

